# ಕಾಮನಬಿಲ್ಲು-ಭಾಗ ೨

## ( ಭಾರತೀಯ ಕಥಾಸಾಹಿತ್ಯ )

ಸಂಪಾದಕ

ಪ್ರಕಾಶಕರು

**ಕರ್ನಾಟಕ ಸಾಹಿತ್ಯ ಮಂದಿರ**

ಧಾರವಾಡ

೧೯೪೫] [ಬೆಲೆ ರೂ ೨-[illegible]-೦

# ಮೊದಲ ಮಾತು

ಈಗ ಹನ್ನೆರಡು ವರ್ಷಗಳ ಹಿಂದೆ "ಕಾಮನಬಿಲ್ಲು" ಕಥಾಸಂಗ್ರಹಗಳ ಮೊದಲನೆಯ ಭಾಗವನ್ನು ಪ್ರಕಟಿಸಿದಾಗ :

"ನಮಗೆ ಹಿಂದೀ, ಬಂಗಾಳಿ, ಮರಾಠಿ, ತೆಲುಗು, ತಮಿಳು, ಉರ್ದು ಸಾಹಿತ್ಯಗಳ ರೀತಿನೀತಿಗಳಿಗಿಂತ ಪರದೇಶೀಯ ಸಾಹಿತ್ಯಗಳ ಬಗ್ಗೆ ಹೆಚ್ಚು ಗೊತ್ತು. ಪರಕೀಯರು ತಮ್ಮ ಸಾಹಿತ್ಯ ಪ್ರಸಾರಕ್ಕೆ ಬೇಕಾದಷ್ಟು ಏರ್ಪಾಟುಗಳನ್ನು ಮಾಡಿ ವಿಪೃಕ್ಷುಗಳಿಗೆ ಅನುಕೂಲಿಸುವ ಎಲ್ಲ ಪ್ರಯತ್ನಗಳನ್ನೂ ನಡೆಸಿದ್ದಾರೆ. ಪರಪ್ರಾಂತಿಕ ಭಾಷೆಗಳನ್ನು ಬಲ್ಲವರು ಅನ್ಯಗಳಲ್ಲಿನ ಉತ್ತಮ ಕಥೆಗಳನ್ನು ಆಯ್ದು ಭಾಷಾಂತರಿಸಿ, ಕಥೆಗಾರರ ಪರಿಚಯಪೂರ್ವಕ ಕನ್ನಡಿಗರಿಗೆ ಕೊಡುವ ಪ್ರಯತ್ನಗಳನ್ನು ನಡೆಸಬೇಕಲ್ಲದೆ ಕನ್ನಡದಲ್ಲಿನ ಉತ್ತಮ ಕಥೆಗಳನ್ನು ಪರಪ್ರಾಂತಿಕ ಭಾಷೆಗಳಿಗೆ ಅನುವಾದಿಸಿ ಅವರಿಗೆ ನಮ್ಮ ಸಾಹಿತ್ಯದ ಹಾಗೂ ಸಾಹಿತಿಗಳ ಪರಿಚಯವನ್ನು ಮಾಡಿಕೊಡಬೇಕು."

ಎಂದು ಸೂಚಿಸಿದ್ದೆವು. ಈ ಬಗೆಯ ಪ್ರಯತ್ನ ಅಲ್ಲಲ್ಲಿ ನಡೆದು ಕನ್ನಡಕ್ಕೆ ಹಲವು ಭಾಷೆಗಳ ಕಥೆಗಳು ಅನುವಾದಿತವಾದವು, ಕನ್ನಡದ ಕೆಲವು ಕಥೆಗಳು ತೆಲುಗು, ತಮಿಳು, ಬಂಗಾಳಿ, ಹಿಂದಿ, ಉರ್ದು ಭಾಷೆಗಳಿಗೆ ಅನುವಾದಿತವಾದವು. ಆದರೆ ಈ ಬಗೆಯ ಪ್ರಯತ್ನಕ್ಕೆ ಒಂದು ಸಂಘಟಿತ ರೂಪ ದೊರೆತಿರಲಿಲ್ಲ. ಕಾಮನಬಿಲ್ಲು- ಭಾಗ ೨ ಈ ಕೊರತೆಯನ್ನು ನಿವಾರಿಸುವುದೆಂದು ನಮ್ಮ ನಂಬಿಕೆ.

ಈ ದಶಕದಲ್ಲಿ ಕನ್ನಡ ಸಾಹಿತ್ಯ ಹೊಸಮಾರ್ಗಗಳನ್ನು ಆವಿಷ್ಕರಿಸಿ, ಕೆಲವು ಹೊಸ ಹೆಜ್ಜೆಗಳನ್ನಿಟ್ಟಿದೆ. ಪ್ರಗತಿಶೀಲ ಸಾಹಿತ್ಯ ನಾಡಿನ ನಾಡಿಯನ್ನು ಮಿಡಿಸಿದೆ. ಪರಪ್ರಾಂತ್ಯಗಳ, ಪರದೇಶಗಳ ಸತ್ವನನ್ನರಿಯ ಬೇಕು, ನಮ್ಮ ಸತ್ವದೊಂದಿಗೆ ಅವನ್ನು ತುಲನೆ ಮಾಡಿ ನೋಡ ಬೇಕೆಂಬ ಆಕಾಂಕ್ಷೆ ತರುಣ ಸಾಹಿತಿಗಳಲ್ಲಿ ಬಳೆಯುತ್ತಿದೆ. ಒಂದು ನಾಡಿನ ತಿರುಳನ್ನರಿಯಬೇಕಾದರೆ ಅದರ ಸಾಹಿತ್ಯವನ್ನರಿಯಬೇಕೆಂಬ ಸತ್ಯ ಕನ್ನಡ ತರುಣ ಸಾಹಿತಿಗಳ ಮನಹೊಕ್ಕಿದೆ.

ಆದರೆ ಕನ್ನಡದಲ್ಲಿ ಪ್ರಕಟವಾಗುತ್ತಿರುವ ಅನುವಾದಿತ ಸಾಹಿತ್ಯ ತೃಪ್ತಿಕರವಾಗಿದೆಯೇ ? ಅದು ನಿಜವಾಗಿಯೂ ಪರಪ್ರಾಂತ್ಯ, ಪರದೇಶಗಳ ಸಾಂಸ್ಕೃತಿಕ ಪರಿಚಯವನ್ನು ನಮಗೊದಗಿಸುತ್ತಿದೆಯೇ ಎಂಬುದು ಚರ್ಚಾಸ್ಪದ. ಸಾಹಿತ್ಯನಿರ್ಮಾಣಕ್ಕೆ (ಅನುವಾದವೇ ಆದರೂ) ಸದಾಶಿ

ಯೊಂದೇ ಸಾಲದು. ಬೆವರು ಹರಿಸುವ ಸಾಧನೆಯೂ ಬೇಕು. ಅನುವಾದದ ಕೆಲಸ ಹೆಚ್ಚಿನ ಜವಾಬ್ದಾರಿಯನ್ನು ಹೊತ್ತಿದೆ. ಮೂಲಲೇಖಕನ ಸಂಹಾರವಾಗದ ಹಾಗೆ ಅನುವಾದಕ ಅವನ ಭಾವ, ರಸಗಳನ್ನು ಕನ್ನಡೀಕರಿಸಬೇಕಾಗುತ್ತದೆ ಮೂಲ ಲೇಖಕನ ಭಾಷಾ ಪರಿಚಯವೂ ಇಲ್ಲದೆ ಮೂರನೆಯ ಭಾಷೆಯ ಅನುವಾದಗಳಿಂದ ಕನ್ನಡಕ್ಕೆ ಸಿದ್ಧಸಾಹಿತಿಗಳ ಕೃತಿಗಳನ್ನಿಳಿಸುತ್ತಿರುವುದು ವ್ಯಾಪಾರಶೀಲವೇ ವಿನಾ, ಶೀಲವ್ಯಾಪಾರವಲ್ಲ. ಅನುವಾದಗಳಿಗೇ ತಮ್ಮ ಲೇಖನಿಯನ್ನು ಮೀಸಲು ಮಾಡಿದ ಲೇಖಕರು ಜೊವೆಟ್, ಆಮರ್ ಮಾಡ್, ಮ್ಯಾಕ್ಸ್ ಮುಲ್ಲರ್ ಅವರಂತೆ ಆ ಸಾಹಿತ್ಯದ ಸಂಪೂರ್ಣ ಪರಿಚಯವನ್ನು ಪಡೆದುಕೊಳ್ಳಬೇಕು ಏನೋ ಎಂತೋ ಭಾಷಾಂತರಿಸಿ ಮೂಲದ ಆಭಾಸ ಮಾಡುವುದು ತರವಲ್ಲ

ಈ ಸೂತ್ರವನ್ನು ನಮ್ಮ ಕಣ್ಣು ಮುಂದಿಟ್ಟುಕೊಂಡೇ 'ಭಾರತೀಯ ಕಥಾಸಾಹಿತ್ಯ'ಕ್ಕೆ ಕೈ ಹಾಕಿದೆವು ಬೇರೆ ಬೇರೆ ಭಾಷೆಗಳ ಪರಿಚಯವುಳ್ಳ ಗೆಳೆಯರಿಂದ ಕಥೆಗಳನ್ನು ಅನುವಾದ ಮಾಡಿಸಿ ತರಿಸಿದೆವು. ಒಂದು ಕಥೆಗೆ ಮಾತ್ರ ಇಂಗ್ಲಿಷ್ ಅನುವಾದವನ್ನು ಆಶ್ರಯಿಸಬೇಕಾಯಿತು. ಕೆಲವು ಮೂಲ ಭಾಷೆ ಪರಿಚಯವಿರುವವರು ದೊರೆಯದಿದ್ದುದರಿಂದ ಅಂತಹ ಭಾಷಾ ಸಾಹಿತ್ಯವನ್ನು ವಿಷಾದದಿಂದ ಬಿಟ್ಟುಕೊಡಬೇಕಾಯಿತು.

ಕಥೆಗಳನ್ನು ಆಯುವಾಗ ಕೆಲವು ಸೂತ್ರಗಳನ್ನು ಗಮನಿಸಲಾಗಿದೆ. ೧) ಈ ಸಂಗ್ರಹದಲ್ಲಿ ಬರುವ ಕಥೆ ಪ್ರಾಂತ್ಯದ ಜನಜೀವನದ ಒಂದು ಚಿತ್ರವಾಗಿರಬೇಕು ೨) ಕಥೆಗಾರ ಪ್ರಾಂತ್ಯದ ಪ್ರಾತಿನಿಧಿಯಾಗಿರಬೇಕು ೩) ಆಯ್ದ ಕಥೆ ಅವನ ಉತ್ತಮ ಕೃತಿಗಳಲ್ಲಿ ಒಂದಾಗಿರಬೇಕು ಪ್ರತಿಯೊಂದು ಪ್ರಾಂತ್ಯ ಭಾಷೆಯ ಕಥಾಸಾಹಿತ್ಯ ವಿಸ್ತೃತ ಪರಿಚಯಕ್ಕಾಗಿ ೧) ನವೋದಯದ ಆರಂಭಕಾಲದ ಲೇಖಕನ ಒಂದು ಕಥೆ. ಉದಾ: ಬಂಗಾಳದಿಂದ ಬಂಕಿಂಬಾಬು, ತೆಲುಗಿನಿಂದ ವೀರೇಶಲಿಂಗ ಪಂತಲು ಮಹಾರಾಷ್ಟ್ರದಿಂದ ಹರಿನಾರಾಯಣ ಆಪ್ಟೆ– ಇತ್ಯಾದಿ ೨) ಸಂಧಿ ಕಾಲದ ಲೇಖಕನ ಒಂದು ಕಥೆ. ಉದಾ. ಬಂಗಾಳದಿಂದ ರವೀಂದ್ರ, ತೆಲುಗಿನಿಂದ ಮುನಿಮಾಣಿಕ್ಯಂ, ಮಹಾರಾಷ್ಟ್ರದಿಂದ ಖಾಂಡೇಕರ್ ಇತ್ಯಾದಿ ೩) ಪ್ರಗತಿಶೀಲ ಲೇಖಕನ ಒಂದು ಕಥೆ: ಉದಾ: ತೆಲುಗಿ

ನಿಂದ ಗುಡಿಪಾಟಿ ವೆಂಕಟಾಚಲಂ, ಮಹಾರಾಷ್ಟ್ರದಿಂದ ಹಾಡಪ್, ಉರ್ದುವಿನಿಂದ ಅಹಮದ್ ಅಲಿ ಇತ್ಯಾದಿ – ಹೀಗೆ ಮೂರು ಕಥೆಗಳನ್ನು ಒಂದೊಂದು ಭಾಷೆಯಿಂದ ಆಯಬೇಕೆಂದು ನಮ್ಮ ಉದ್ದೇಶವಾಗಿತ್ತು. ಆದರೆ ಅನುವಾದಕರ ಅಭಾವ, ಕಾಗದದ ನಿಯಂತ್ರಣ, ಮುದ್ರಣ ಅಸೌಲಭ್ಯಗಳಿಂದ ಈ ನಿಯೋಜನೆಯನ್ನು ಬಿಟ್ಟುಕೊಡಬೇಕಾಯಿತು.

ಕಥೆಗಳ ಆಯ್ಕೆಯಲ್ಲಿಯೂ, ಕಥೆಗಾರರ ಆಯ್ಕೆಯಲ್ಲಿಯೂ ಎಲ್ಲರನ್ನು ಮೆಚ್ಚಿಸುವುದು ಸಾಧ್ಯವಿಲ್ಲ. ಬಂಗಾಳಿಯಲ್ಲಿ ರವೀಂದ್ರ, ತೆಲುಗಿನಲ್ಲಿ ಮುನಿಮಾಣಿಕ್ಯಂ, ತಮಿಳಿನಲ್ಲಿ ಎಸ್. ವಿ. ವಿ ಅವರನ್ನು ಆರಿಸಬಹುದಾಗಿತ್ತಲ್ಲಾ ಎನ್ನಬಹುದು. ಒಂದು ಭಾಷೆಯ ಒಂದೇ ಕಥೆಯನ್ನು ತೆಗೆದುಕೊಳ್ಳುವ ಕ್ರಮವನ್ನು ನಿರ್ದೇಶ ಮಾಡಿದ್ದರಿಂದ ಉಳಿದ ಉತ್ತಮ ಕಥೆಗಾರರನ್ನು ಅನಿವಾರ್ಯವಾಗಿ ಬಿಡಬೇಕಾಯಿತು. ಸಾಹಿತ್ಯ ಪರಿಚಯಗಳಲ್ಲಿ ಅವರ ಉಲ್ಲೇಖ ಮಾಡಿದ್ದೇವೆ

ಕನ್ನಡ ಕಥೆಗಾರರ ಪ್ರತ್ಯೇಕ ಸಂಗ್ರಹಗಳು ಪ್ರಕಟವಾಗುವುದರಿಂದ ಈ ಸಂಗ್ರಹದಲ್ಲಿ ಕನ್ನಡ ಕಥೆಯನ್ನು ಹಾಕುವ ಗೋಜಿಗೆ ಹೋಗಿಲ್ಲ.

ನಮ್ಮೀ ಉದ್ಯಮಕ್ಕೆ ಹೆಚ್ಚಿನ ನೆರವು ನೀಡಿದವರು ಶ್ರೀ ಗುರುನಾಥ ಜೋಶಿ ಅವರು. ಅವರೂ ಇತರ ಅನುವಾದಕ ಗೆಳೆಯ – ಗೆಳತಿಯರೂ ಬೇರ ಬೇರೆ ಭಾಷೆಗಳ ಕಥೆಗಳನ್ನು ಕನ್ನಡಿಸಿ ಕೊಟ್ಟು ಉಪಕಾರ ಮಾಡಿದ್ದಾರೆ ಶ್ರೀಮತಿ ಸೋಫಿಯಾ ವಾಡಿಯಾ ಅವರು ಲಕ್ಷ್ಮೀನಾಥ ಬೇಜಬರುವಾ ಅವರ ಕಥೆಯನ್ನು ಪ್ರಕಟಿಸಲು ಅನುಮತಿ ದೊರಕಿಸಿ ಕೊಟ್ಟು ಸಹಾಯ ಮಾಡಿದ್ದಾರೆ ಈ ಎಲ್ಲರಿಗೂ ನಮ್ಮ ಕೃತಜ್ಞತೆಯನ್ನು ಸಮರ್ಪಿಸುತ್ತೇವೆ.

ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಪರಿಷತ್ತಿನ ಅಚ್ಚುಕೂಟದವರಿಗೂ ವ್ಯವಸ್ಥಾಪಕರಾದ ಶ್ರೀ. ಆರ್. ಎಸ್. ರಾಮರಾಯರಿಗೂ ನಮ್ಮ ಕೃತಜ್ಞತೆ ಸಲ್ಲಬೇಕಾಗಿದೆ.

"ಅನ್ನಪೂರ್ಣ"
ವಿಶ್ವೇಶ್ವರಪುರಂ, ಬೆಂಗಳೂರು ನಗರ

**ಅ. ನ. ಕೃಷ್ಣರಾಯ**

# ಪರಿವಿಡಿ

# ಆಸಾಮೀ ಸಾಹಿತ್ಯ

ಆಸಾಮದ ನಿವಾಸಿಗಳು ತಮ್ಮ ನಾಡು ಸೃಷ್ಟಿಯ 'ಕಾಮ್ಯ-ಕಾನನ' ವೆಂದೂ 'ಲೀಲಾ-ನಿಕೇತನ'ವೆಂದೂ ಹೇಳುತ್ತಾರೆ. ಹೀಗೆ ಹೇಳುವುದರಲ್ಲಿಯೇ ಅವರಿಗೆ ಅಭಿಮಾನ, ಗೌರವ. ಪ್ರಾಕೃತಿಕ ಸೌಂದರ್ಯದ ದೃಷ್ಟಿಯಿಂದ ಈ ನಾಡು ಅನುಪಮವಾಗಿದೆ. ಈ ನಾಡಿನ ಹಳೆಯ ಸಾಹಿತ್ಯ ಬಹಳ ದೊಡ್ಡದು.

ಹೇಮ ಸರಸ್ವತಿಯ (೧೩ನೆಯ ಶತಮಾನ) 'ಪ್ರಹ್ಲಾದ ಚರಿತ್ರೆ' ಮತ್ತು 'ವಾಮನ ಪುರಾಣ'ಗಳಿಂದಲೇ ಆಸಾಮೀ ಸಾಹಿತ್ಯವಾರಂಭ. ಅವನ ಸಮಕಾಲೀನನಾದ ಹರಿಹರವಿಪ್ರ ಮಹಾಭಾರತದ ಕೆಲವು ಕಥೆಗಳನ್ನು ಕಾವ್ಯರೂಪಕ್ಕೆ ಆಸಾಮೀಯಲ್ಲಿ ಬರೆಯಲು ತೊಡಗಿದ. ೧೪ನೆಯ ಶತಮಾನದಲ್ಲಿ ಮಾಧವ ಕಂಡಲಿ ರಾಮಾಯಣವನ್ನು ಬರೆದ. ಹೇಮಸರಸ್ವತಿ, ಹರಿಹರವಿಪ್ರ ಮಾಧವ ಕಂಡಲಿ, ಸಂಸ್ಕೃತ ವಿದ್ವಾಂಸರಾಗಿದ್ದರು. ಅವರ ಕಾವ್ಯಗಳಲ್ಲಿ ಸಂಸ್ಕೃತದ ಪ್ರಭಾವ ವಿಪರೀತ. ಸ್ವತಂತ್ರ ಆಸಾಮೀ ಸಾಹಿತ್ಯ ಆರಂಭವಾದುದು ದುರ್ಗಾಬಾರ್, ಪೀತಾಂಬರ್, ಮಾಂಕಲ್ ಇವರಿಂದ ೧೬ನೆಯ ಶತಮಾನದಲ್ಲಿ. ಮಹೇಂದ್ರ ಕಂಡಲಿಯ ಶಿಷ್ಯನಾದ ಶಂಕರದೇವನನ್ನು (೧೪೪೯–೧೫೬೯) ಆಸಾಮೀ ಸಾಹಿತ್ಯದ ಸ್ಥಾಪಕನೆಂದು ವಿದ್ವಾಂಸರು ಪರಿಗಣಿಸುತ್ತಾರೆ. ವೈಷ್ಣವನಾದ ಈ ಕವಿ 'ವೈಷ್ಣವಾಮೃತ', 'ಭಕ್ತಿ ರತ್ನಾಕರ', 'ಕೀರ್ತನ ಘೋಷ'— ಮೊದಲಾದ ಅನೇಕ ಕಾವ್ಯಗಳನ್ನು ಬರೆದಿದ್ದಾನೆ. ನಾಟಕ ರಚನೆಯಲ್ಲಿ ಇವನ ಪರಿಶ್ರಮ ಬಹಳ. 'ರುಕ್ಮಿಣೀ ಹರಣ', 'ಪಾರಿಜಾತ' 'ಕಾಳಿಯ ದಮನ' 'ರಾಮವಿಜಯ'— ಮೊದಲಾದ ನಾಟಕಗಳು ಇವನವೇ. ಇದೇ ಸಂಪ್ರದಾಯಕ್ಕೆ ಸೇರಿದ ಮಾಧವದೇವ, ಅನಂತ ಕಂಡಲಿ, ಸಾರ್ವಭೌಮ ಭಟ್ಟಾಚಾರ್ಯ, ಶ್ರೀಧರ, ದ್ವಿಜಕಲ್ಪಚಂದ್ರ, ಅನಂತ ಆತಾ, ಭಟ್ಟದೇವ— ಮೊದಲಾದವರು ವೈಷ್ಣವ ಧರ್ಮದಿಂದ ಸ್ಫೂರ್ತಿ

ಗೊಂಡು ವಿವಿಧ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ೧೭ನೆಯ ಶತಮಾನದಲ್ಲಿ ವೀರ ಆಖ್ಯಾನಗಳನ್ನು ಬರೆಯುವ ಪದ್ಧತಿ ಆರಂಭವಾಯಿತು. ಅದೇ ಕಾಲಕ್ಕೆ ಜೀವನ ಚರಿತ್ರೆ ಹಾಗೂ ವೈಜ್ಞಾನಿಕ ಗ್ರಂಥರಚನೆಯೂ ಆರಂಭವಾಯಿತು.

ಸನ್ ೧೭೦೦ ರಿಂದ ೧೯೦೦ ರ ವರೆಗೆ ಆಸಾಮೀ ಸಾಹಿತ್ಯದ ಮಧ್ಯಕಾಲ. ಪೌರಾಣಿಕ ಉಪಾಖ್ಯಾನಗಳ ಕೂಡ ರೂಪಕ ಕತೆಗಳು, ಕಾಲ್ಪನಿಕ ಪ್ರೇಮ ಕತೆಗಳು ಇದೇ ಕಾಲದಲ್ಲಿ ಹುಟ್ಟಿದವು. ಇವೇ ಬೆಳೆದು ಆಧುನಿಕ ಕತೆಯ ಸ್ವರೂಪವನ್ನು ಹೊಂದಿದವು.

ಆಸಾಮೀ ಸಾಹಿತ್ಯದಲ್ಲಿ ಕಾದಂಬರಿಗೆ ಮುಖ್ಯ ಸ್ಥಾನವಿಲ್ಲ. ಏಕೆಂದರೆ ಕಾದಂಬರಿಯ ಸ್ಥಾನವನ್ನು ಲೋಕಪ್ರಿಯ ಚಿಕ್ಕ ಕತೆಗಳು ಆಕ್ರಮಿಸಿದುವು. ಈಗಿನ ಕಾಲದಲ್ಲಿ ಯಾವ ರೂಪವನ್ನು ಪಡೆದುಕೊಂಡು ಕಥಾಸಾಹಿತ್ಯವು ಭಾರತೀಯ ಸಾಹಿತ್ಯದಲ್ಲಿ ಬೆಳೆದು ಬರತೊಡಗಿದೆಯೋ ಅದೇ ರೀತಿಯಾಗಿ ಆಸಾಮೀ ಕಥಾ ಸಾಹಿತ್ಯವೂ ವಿಕಾಸಹೊಂದುತ್ತಿದೆ.

ಆಧುನಿಕ ಆಸಾಮೀ ಕಥಾ ಸಾಹಿತ್ಯದ ಆರಂಭವೂ ಇಂಗ್ಲಿಷು, ರಶಿಯನ್, ಫ್ರೆಂಚ್, ಬಂಗಾಲಿ ಕತೆಗಳ ಅನುವಾದದಿಂದಲೇ ಆಯಿತು. ಸ್ವತಂತ್ರವಾಗಿ ಕತೆಗಳು ಬಂದರೂ ಅವುಗಳ ಮೇಲೆ ಈ ಭಾಷೆಗಳ ಕತೆಗಳ ಪ್ರಭಾವ ಬಿದ್ದಿದೆ. ಪೂರ್ಣ ಸ್ವತಂತ್ರ ಕತೆಗಳು ಆಮೇಲೆ ಬಂದವು. ಲಕ್ಷ್ಮೀನಾಥ ಬೇಜಬರುವಾ ಅವರು ಮೊದಲು ಕತೆಗಳನ್ನು ಬರೆಯಲಾರಂಭಿಸಿದರು. ಇವರು ಆಸಾಮೀ ಜನರ ಜೀವನದ ಸುಂದರ ದೃಶ್ಯಗಳನ್ನು ಬರೆದರು. ಇವರ ಪ್ರತಿಭೆ ಆಸಾಮೀ ಸಾಹಿತ್ಯದ ಪ್ರತಿಯೊಂದು ಕ್ಷೇತ್ರದಲ್ಲಿಯೂ ಕಂಡುಬರುತ್ತಿದೆ. ಇವರೇ ಆಧುನಿಕ ಆಸಾಮೀ ಕಥಾ ಸಾಹಿತ್ಯದ ಪ್ರವರ್ತಕರು.

ಈಗಿನ ಕತೆಗಾರರಲ್ಲಿ ಶರಚ್ಚಂದ್ರ ಗೋಸ್ವಾಮಿ, ನಕುಲಚಂದ್ರ ಭುಯಾ, ಲಕ್ಷ್ಮೀಧರಶರ್ಮಾ, ಲಕ್ಷ್ಮೀನಾಥ ಫೂಕನ, ರಮಾದಾಸ, ತ್ರೈಲೋಕ್ಯನಾಥ ಗೋಸ್ವಾಮಿ, ಬ್ರಜೇಂದ್ರ ನಾರಾಯಣ ಚೌಧರಿ, ಹರೇಂದ್ರ ಕವಿತಾ, ಚಂದ್ರಪ್ರಭಾ ಶಾಯಿಕಿಯಾನಿ, ಅಪಗಂಡಶರ್ಮಾ, ವೀಣಾ ಬರುವಾ ಮುಂತಾದವರು ಅಗ್ರಗಣ್ಯರು. ಇವರ ಕತೆಗಳಲ್ಲಿ

ಕರುಣೆ, ಹಾಸ್ಯ, ಮನೋವಿಶ್ಲೇಷಣಗಳು ಎದ್ದು ಕಾಣುವುವು. ಇವರು ಸ್ತ್ರೀಯರ ಉಚ್ಚ ಶಿಕ್ಷಣ, ಕಾಲೇಜಿನಲ್ಲಿ ಸಹಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ, ವಿತಾಡಿತ ನಾರೀ ಸಮಾಜ– ಈ ವಿಷಯಗಳನ್ನೇ ಎತ್ತಿಕೊಂಡು ಅತ್ಯಂತ ಮನೋಹರವಾದ ಕತೆಗಳನ್ನು ಬರೆಯತೊಡಗಿದ್ದಾರೆ.

ಈ ಕತೆಗಳ ವಿಕಾಸದಲ್ಲಿ 'ಆವಾಹನ', 'ಬಾಹೀ', 'ಜಯಂತಿ' ಪತ್ರಿಕೆಗಳು ಸಹಾಯಕವಾಗಿವೆ. ಪ್ರತಿ ತಿಂಗಳೂ ಸುಮಾರು ನಾಲ್ವತ್ತು ಕತೆಗಳನ್ನು ಅಸಾಮೀ ನರನಾರಿಯರು ಓದುತ್ತಾರೆ. ಕಥಾಸಾಹಿತ್ಯದ ಪ್ರಗತಿಯಲ್ಲಿ ಆಗುತ್ತಿರುವ ಪ್ರಯತ್ನ ಮಹತ್ವದ್ದಿರುತ್ತದೆ.

—o—

## ಲಕ್ಷ್ಮೀನಾಥ ಬೇಜ ಬರುವಾ

'ಭಾದರಿ' ಕಥೆ ಲಕ್ಷ್ಮೀನಾಥ ಬೇಜ ಬರುವಾ ಅವರ ಕೃತಿ. ಲಕ್ಷ್ಮೀ ನಾಥರು ಪತ್ರಿಕೋದ್ಯಮಿಗಳಾಗಿ ತಮ್ಮ ಜೀವನವನ್ನು ಆರಂಭಿಸಿದರು. ಸಾಹಿತ್ಯದ ಹಲವು ಪ್ರಕಾರಗಳಲ್ಲಿ ನೂತನ ಮಾರ್ಗವನ್ನು ಆವಿಷ್ಕಾರ ಮಾಡಿ ಆಧುನಿಕ ಅಸಾಮೀ ಸಾಹಿತ್ಯದ ಆಚಾರ್ಯಪುರುಷರಾದರು. ವೈಯಕ್ತಿಕ ಹಾಗೂ ಸಾಮಾಜಿಕ ಜೀವನದ ಕೊಂಕು ಡೊಂಕುಗಳನ್ನು ರಸವತ್ತಾಗಿ ತಮ್ಮ ಹಾಸ್ಯಶೈಲಿಯಲ್ಲಿ ಇಳಿಸಿದ್ದಾರೆ. ಅಸಾಮೀ ಸಾಹಿತ್ಯ ದಲ್ಲಿ ನಿರ್ದಾಕ್ಷಿಣ್ಯ ವಿಮರ್ಶಕರೆಂದೂ, ಧೀರ ಗಂಭೀರ ಗದ್ಯಶೈಲಿಯ ಪ್ರತಿ ಪಾದಕರೆಂದೂ ಲಕ್ಷ್ಮೀನಾಥರಿಗೆ ಕೀರ್ತಿ.

ಅಸಾಮೀ ರೈತರ ಜೀವನದ ನಿತ್ಯನೋಟವನ್ನು ಲಕ್ಷ್ಮೀನಾಥರು 'ಭಾದರಿ'ಯಲ್ಲಿ ನಿರೂಪಿಸಿದ್ದಾರೆ. ಕೋಪಿಷ್ಟ ಪತಿ, ಸಹಿಷ್ಣುತಾ ಮೂರ್ತಿಯಾದ ಸತಿ. ಸತಿಯ ಪ್ರೇಮ, ಸಹನೆ, ಕ್ಷಮೆಗಳೇ ಹೇಗೆ ಪತಿಯ ಮನಸ್ಸನ್ನು ಪರಿವರ್ತಿಸಿದವು ಎಂಬುದೇ ವಸ್ತು. 'ಹೆಣ್ಣು' ಹೇಳದೆ ಧರ್ಮವ ಕಲಿಸುವ ಗುರುವಾಗುವ ಪವಾಡದ ಕಥೆ 'ಭಾದರಿ'. ಮಿತವಾದ ಮಾತುಗಾರಿಕೆ, ಹಿತವಾದ ತಂತ್ರನೈಪುಣ್ಯದಿಂದ ಲಕ್ಷ್ಮೀ ನಾಥರು ಈ ಕಥೆಯಲಿ ಅಸಾಧಾರಣ ಕಲಾವಿದಗತೆಯನು ತೋರಿದಾರೆ.

# ಭಾದರಿ

ಅನುವಾದಿಕೆ : **ಸೌ. ವಸಂತಾದೇವಿ**

ಶಿಶುರಾಮ ಆಗತಾನೆ ಹೊಲದ ಕಡೆಯಿಂದ ಹಿಂತಿರುಗಿದ್ದ. ಅವನು ನೇಗಿಲನ್ನು ಅಂಗಳದಲ್ಲಿಟ್ಟು, ಅವಸರದಿಂದ ಸ್ನಾನವನ್ನು ತೀರಿಸಿ, ಬಟ್ಟೆ ಬದಲಾಯಿಸಿ ಅಡಿಗೆಯ ಮನೆಗೆ ಹೆಂಡತಿ ಭಾದರಿ ಮಧ್ಯಾಹ್ನದ ಅಡಿಗೆ ಮಾಡುತ್ತಿದ್ದ ಬಳಿಗೆ–ಬೇಗ ಬೇಗ ಬಂದ. ಇನ್ನೂ ಅನ್ನವಾಗಿರಲಿಲ್ಲ, ಹುಳಿ ತಯಾರಾಗಿರಲಿಲ್ಲ. ಶಿಶುರಾಮನಿಗೆ ಸಿಟ್ಟು ನೆತ್ತಿಗೇರಿತು. ಥೇಕಿಯಾ ಎಂಬ ಸೊಪ್ಪು ಬೇಯಿಸಲು ಇನ್ನೂ ಹೆಚ್ಚಿರಲಿಲ್ಲ; ಮೈದಾ ಎಂಬ ಕುಡಗೋಲು ಒಂದು ಬಾಳೆಯೆಲೆಯ ಮೇಲೆ ಸತ್ತ ನವಿಲಿನಂತೆ ಬಿದ್ದಿತ್ತು. ಮತ್ತು ಕ್ಯಾಮಿನಾನು ನೆಲದ ಮೇಲೆ ಬೂದಿ ಬಳಿದುಕೊಂಡ ಫಕೀರರಂತೆ, ಬಿದ್ದಿದ್ದವು. ಇನ್ನೊಂದು ಪಕ್ಕದಲ್ಲಿ ಒಲೆಯ ಹತ್ತಿರ ಭಾದರಿ ಹೊಗೆ ಮುಚ್ಚಿಕೊಂಡು ಒಲೆ ಊದುತ್ತ ಕುಳಿತಿದ್ದುದನ್ನು ಕಂಡ.

ಶಿಶುರಾಮ ಅಡಿಗೆ ಸಿದ್ಧವಿಲ್ಲದುದನ್ನು ಕಂಡು ಕೋಪದಿಂದ ಕಂಪಿಸುತ್ತ, ಬುಸುಗುಟ್ಟುತ್ತಿದ್ದ. ಬೆಳಗಿನ ಝಾವದಿಂದಲೂ ಅವನ ಮನಸ್ಸು ಕದಡಿ ಹೋಗಿತ್ತು. ಅನೇಕ ಕಾರಣಗಳಿಂದ. ಅವನ ಕೋಪ ಮಿತಿ ಮೀರುತ್ತಿತ್ತು. ಹಿಂದಿನ ದಿವಸ ಕೃಷ್ಣ ಏಕಾದಶಿ. ನಿಷಿದ್ಧ ದಿವಸವಾದ್ದರಿಂದ ಅವನು ಉಳುಮೆಗೆ ಹೋಗಿರಲಿಲ್ಲ. ಇವತ್ತು ಬೆಳಗ್ಗೆ ಎತ್ತುಗಳು ಹೊಲದಲ್ಲಿ ಅವನಿಗೆ ಬಹಳ ತೊಂದರೆ ಕೊಟ್ಟಿದ್ದವು. ಜತೆಗೆ ಶಿಶುರಾಮನಿಗೆ, ಅಂದೇ ಬೆಳಗ್ಗೆ ಅವನ ನೆರೆಯುವನಾದ ಬಹುವನ ಸಂಗಡ ಒಂದು ಜಮೀನಿನ ಆಕ್ರಮಣದ ವಿಚಾರವಾಗಿ ಜಗಳವಾಗಿತ್ತು. ಜಗಳ ಉಲ್ಬಣಿಸಿ ಸಿಡಿಯುವ ಹೊತ್ತಿಗೆ ಬಹುವ ಮುಂದಾಗುವ ಅಪಾಯವನ್ನು ಕಂಡು ಓಡಿಹೋಗಿದ್ದ. ಒಂದು ಪುರಾತನ ನಾಣ್ಣುಡಿಯಂತೆ

ಎಂದಿಗಾದರೂ ಒಬ್ಬನು ಕೋಪಗೊಂಡರೆ ಅವನ ಹೆಂಡತಿ ಆ ತಾಪವನ್ನು ತಡೆದುಕೊಳ್ಳಬೇಕಾಗುವುದು. ಹಿಂದೆ ಒಂದು ಸಂದರ್ಭದಲ್ಲಿ ಕೂಡ, ಬಹುವನಿಂದ ಶಿಶುರಾಮನ ಸಹನೆ ಭಗ್ನಗೊಂಡಾಗ ತನ್ನ ಕೋಪವನ್ನು ಭಾದರಿಯ ಮೇಲೆ ತೋರಿಸಿ, ಹೊತ್ತಿಗೆ ಸರಿಯಾಗಿ ಎತ್ತುಗಳಿಗೆ ಮೇವಿಡಲಿಲ್ಲವೆಂಬ ಕಾರಣ ಹೂಡಿ ಹೊಡೆದು ಹೊರಗೆಡವಿದ್ದ.

ಭಾದರಿ ಭೂಮಾತೆಯಂತೆ, ಸಹನೆಯಿಂದ ತನ್ನ ಗಂಡನ ಈ ದುಡುಕನ್ನು ಬೇಸರಗೊಳ್ಳದೆ ಸಹಿಸುತ್ತಿದ್ದಳು. ನಿಜಸ್ಥಿತಿಯಲ್ಲಿ ಭಾದರಿ ನಿತ್ಯವಿಧಿಯಾದ ಏಟುಗಳು, ಬೈಗಳು ಹಸಿವು ಮತ್ತು ನಿದ್ರೆಯಂತೆ ಪ್ರಕೃತಿ ನಿಯಮವೆಂದು, ವಿವಾಹಿತ ಜೀವನದ ವಿಧಿಯಿಲ್ಲದ ಸನ್ನಿವೇಶಗಳೆಂದು ಮನಗಂಡಿದ್ದಳು. ತನ್ನ ಮುಕ್ತಿಯನ್ನು ಅವಳು ಶಿಶುರಾಮನಲ್ಲಿ ಭಕ್ತಿಯ ಮೂಲಕ ಹುಡುಕಿದ್ದಳು.

ಆದರೆ ಎಲ್ಲದಕ್ಕೂ ಒಂದು ಮಿತಿಯುಂಟು. ಭೂಮಿ ಕೂಡ ಸಹನೆಯ ನಿಧಿಯಾಗಿದ್ದರೂ ಕೆಲವು ಸಲ ಅದುರುವುದು. ಆದ್ದರಿಂದ ಪಾಪ, ಭಾದರಿ ತಡೆಯಲಾರದ ವಿಷಯ ಬಂದಾಗ ಎದುರು ಬಿದ್ದರೆ ಅಸಹಜವಾಗುವುದೇ ?

ಭಾದರಿ ಹೊಗೆ ಊದಿ ಊದಿ ನಿಶ್ಚೇತನಳಾಗಿದ್ದಳು. ಶಿಶುರಾಮ ಅವಳನ್ನು ತುಚ್ಛವಾಗಿ ನೋಡಿ ದೂರದಿಂದಲೇ ಗಾಬರಿಯಿಂದ ಒದರಿದ "ಕತ್ತೇ ಮಗಳೇ, ಇಷ್ಟು ಹೊತ್ತಾದರೂ ನೀನೇಕೆ ಅಡಿಗೆ ಸಿದ್ಧ ಮಾಡಿಲ್ಲ." ಅವನ ಮುಖ ಮತ್ತು ಕಣ್ಣುಗಳು ಸಿಟ್ಟಿನಿಂದ ಕೆಂಪಡರಿದ್ದವು.

ಹೊಗೆಯಿಂದ ಹಿಂತಿರುಗಿ ನೋಡಿ ಭಾದರಿ ನೀರಸವಾಗಿ ಉತ್ತರ ಕೊಟ್ಟಳು "ನಾನು ನನ್ನ ತಲೆಯಿಂದ ಅಡಿಗೆ ಬೇಯಿಸಲೇ ? ಮನೆಯಲ್ಲಿ ಒಂದು ತುಂಡು ಕೊರಡು ಕೂಡ ಇಲ್ಲ. ಈ ಹಸೀ ಕೊರಡುಗಳನ್ನು ಹೊತ್ತಿಸಲು ನನ್ನ ಉಸಿರೆಲ್ಲವನ್ನೂ ವ್ಯಯಮಾಡುತ್ತಿದ್ದೇನೆ. ಸ್ವಲ್ಪವಾದರೂ ವಿವೇಚನೆಯಿಲ್ಲದೆ ಹೀಗೆ ಸಿಟ್ಟಿಗೇಳುವುದು ನ್ಯಾಯವೇ ?" ಅವಳ ಬೇಸತ್ತ ಕಣ್ಣುಗಳು ಬೆವರು ಹನಿಗಳ ಭಾರದಿಂದ ಕೆಳಗೆ ಜಗ್ಗಿದವು.

"ಏನು ಹೇಳಿದೆ, ಸೂಳೇ ಮಗಳೇ?" ಶಿಶುರಾಮ ಗರ್ಜಿಸಿ ಭುಜಗಳನ್ನು ಅಲುಗಿಸಿಕೊಂಡು ಭಾದರಿಯ ಕಡೆಗೆ ನುಗ್ಗಿ ನೆಲದಮೇಲೆ ಬಿದ್ದಿದ್ದ ಮೈದದಿಂದ ಭಾದರಿಯ ಬೆನ್ನಿಗೆ ಹೊಡೆದ. ಎರಡನೆಯ ಏಟು ಕೊಡುವುದಕ್ಕೆ ಮುಂಚಿತವಾಗಿ ಭಾದರಿಯ ಎದೆಯೊಡೆಯುವ ಕೂಗನ್ನು ಕೇಳಿಸಿಕೊಂಡು ಶಿಶುರಾಮನ ಅಣ್ಣ ಕಿನಾರಾಂ ಓಡುತ್ತ ಬಂದು ಕೂಡಲೇ ತಮ್ಮನನ್ನು ಹಿಡಿದುಕೊಂಡು ಹೊರಗೆ ಎಳೆದುತಂದ. ಪಾಪ, ಭಾದರಿ ಮೂರ್ಛಿತಳಾಗಿ ರಕ್ತದ ಮಡುವಿನಲ್ಲಿ ಬಿದ್ದಿದ್ದಳು.

ಸ್ವಲ್ಪ ಹೊತ್ತಿನ ಮೇಲೆ ಭಾದರಿಯನ್ನು ಆಸ್ಪತ್ರೆಗೆ ಕಳುಹಿಸಲಾಯಿತು. ಮೂರನೆಯ ದಿವಸ ಆಸ್ಪತ್ರೆಯಲ್ಲಿ ಜ್ಞಾನ ಬಂದಮೇಲೆ ಕೊಠಡಿಯ ಸುತ್ತಲೂ ಕಣ್ಣನ್ನು ಹೊರಳಿಸಿ, ತನ್ನ ಹಾಸಿಗೆಯ ಪಕ್ಕದಲ್ಲಿ ಯಾರನ್ನೋ ನಿರೀಕ್ಷಿಸುವಂತೆ ನೋಡಿದಳು. ಕಾವಲಿದ್ದವರು ಹತ್ತಿರ ಬಂದು ಅವಳನ್ನು ನೋಡಿದರು. ಭಾದರಿ ಸಣ್ಣಧ್ವನಿಯಲ್ಲಿ ಕಾತರಗೊಂಡು "ಅವರು ಎಲ್ಲಿ" ಎಂದು ಕೇಳಿದಳು.

"ನಿನಗೆ ಯಾರು ಬೇಕು" ಕಾವಲಿದ್ದವ ಕೇಳಿದ.

ಸ್ವಲ್ಪ ತೊಂದರೆಯಿಂದ ಭಾದರಿ ಹೇಳಿದಳು "ನನ್ನ ಗಂಡ ಸ್ವಾಮಿ".

"ಓ ಆ ಕೊಲೆಪಾತಕನೇ? ಅವನು ಈಗ ಲಾಕಪ್ಪಿನಲ್ಲಿದ್ದಾನೆ".

"ಅವರನ್ನು ಇಲ್ಲಿಗೆ ಬರಮಾಡಿ ಸ್ವಾಮಿ" ಭಾದರಿ ಕನಿಕರ ಹುಟ್ಟುವಂತೆ ಅಂಗಲಾಚಿದಳು.

"ಅವನು ಹೇಗೆ ಬರುತ್ತಾನೆ. ಅವನು ಈಗ ಹಜಾತ್‌ನಲ್ಲಿದ್ದಾನೆ.. ಅವನನ್ನು ಕುರಿತು ಯೋಚಿಸಬೇಡ. ಅವನ ವಿಚಾರವನ್ನು ಯೋಚಿಸಿದರೆ, ನಿನ್ನ ಸ್ಥಿತಿ ಇನ್ನೂ ಕೆಡಬಹುದು".

ಕಾವಲಿದ್ದವರ ಮಾತನ್ನು ಕೇಳುತ್ತ ಭಾದರಿಯ ಕಣ್ಣುಗಳು ಸಣ್ಣಗಾಗುತ್ತ ಬಂದು ಕೆಲವು ಕ್ಷಣಗಳಲ್ಲಿ ಪುನಃ ಜ್ಞಾನತಪ್ಪಿತು. ಕಾವಲುಗಾರ ನಡೆದ ವಿಷಯವನ್ನು ಡಾಕ್ಟರಿಗೆ ತಿಳಿಸಿದ. ಶಿಶುರಾಮನನ್ನು ಹತ್ತಿರ ಕರೆಸದಿದ್ದರೆ ರೋಗಿಗೆ ಅಪಾಯ ಹೆಚ್ಚಬಹುದೆಂದು ಸ್ಪಷ್ಟವಾಯಿತು. ಶಿಶುರಾಮ ಭಾದರಿಯ ಹತ್ತಿರವಿರುವುದಕ್ಕೂ ಜ್ಞಾನ ಬಂದಕೂಡಲೇ ಅವಳು ತನ್ನ ಗಂಡನನ್ನು ನೋಡುವುದಕ್ಕೂ ಡಾಕ್ಟರು ತಕ್ಕವ್ಯವಸ್ಥೆ ಮಾಡಿದ.

ಮರುದಿನ ಬೆಳಗ್ಗೆ ಅವಳಿಗೆ ಜ್ಞಾನ ಬಂದಮೇಲೆ ಭಾದರಿ ಶಿಶುರಾಮ ತನ್ನ ತಲೆಯನ್ನು ನೇವರಿಸುತ್ತ ಬೆರಳುಗಳನ್ನು ತನ್ನ ತಲೆಕೂದಲೊಳಗಾಡಿಸುತ್ತಿದ್ದುದನ್ನು ಕಂಡಳು. ಇದನ್ನು ನೋಡುತ್ತ ಅವಳ ಮುಖಚರ್ಯೆಯಲ್ಲಿ ಬಹಳ ಸಮಾಧಾನ ತೋರಿತು ಮತ್ತು ತನ್ನ ಗಂಡನ ಇರವಿನಿಂದ ತನ್ನ ಕಷ್ಟವೆಲ್ಲವೂ ಕರಗಿಹೋದಂತೆ ಭಾಸವಾಯಿತು. ಅವಳು ಹುಸಿನಗೆಯಿಂದ "ನೀವು ಹೇಗಿದ್ದೀರಿ? ನೀವು ಹೊತ್ತುಹೊತ್ತಿಗೆ ಆಹಾರವನ್ನು ತೆಗೆದುಕೊಳ್ಳುತ್ತಿದ್ದೀರಾ? ಅಡಿಗೆಯನ್ನು ನೀವು ಮಾಡಿಕೊಳ್ಳುವುದು ನಿಮಗೆ ಕಷ್ಟವಾಗಿರಬಹುದು; ಪರವಾಗಿಲ್ಲ. ಇನ್ನು ಒಂದು ಎರಡು ದಿನಗಳಲ್ಲಿ ನನಗೆ ಗುಣವಾಗುತ್ತದೆ. ದಯೆಯಿಟ್ಟು ನನ್ನನ್ನು ಮನೆಗೆ ಕರೆದುಕೊಂಡು ಹೋಗುವಂತೆ ನಿಶ್ಚಯಮಾಡಿ. ನಿಮ್ಮ ಸಹಾಯಕ್ಕೆ ನಾನು ಬರುತ್ತೇನೆ." ಎರಡು ಕಣ್ಣೀರಿನ ಕಾಲುವೆಗಳು ಶಿಶುರಾಮನ ಕಣ್ಣುಗಳಿಂದ ಧುಮುಕಿ ಕೆನ್ನೆಗಳ ಮೇಲೆ ಹರಿದವು.

ಡಾಕ್ಟರು ತನ್ನ ಹಾಸಿಗೆಯ ಹತ್ತಿರ ಬರುತ್ತಿರುವುದನ್ನು ಕಂಡು ಭಾದರಿ, "ನನ್ನ ದೇವರೇ, ನನ್ನ ತಂದೆ, ಇವರು ತಪ್ಪಿತಸ್ಥರಲ್ಲ! ಇವರು ಮುಗ್ಧರು, ನಿರ್ದೋಷಿಗಳು. ಕಾಪಾಡಿ; ಇವರನ್ನು ಕ್ಷಮಿಸಿ. ನಾನು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ನನ್ನ ಗಂಡನನ್ನು ಕ್ಷಮಿಸಿ. ನಾನೇ ಮೈದಾ ಮೇಲೆ ಎಡವಿ ಪೆಟ್ಟು ಮಾಡಿಕೊಂಡೆ", ಎಂದು ಅಂಗಲಾಚಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬಿದವು.

ಡಾಕ್ಟರು, ಕಾವಲಿದ್ದವರು ಮತ್ತು ಶಿಶುರಾಮ ಭಾದರಿಯ ಈ ಮಾತನ್ನು ಕೇಳಿ ಸ್ಥಂಭೀಭೂತರಾದರು. ಶಿಶುರಾಮ ಉಕ್ಕುತ್ತಿದ್ದ ದುಃಖವನ್ನು ತಡೆಯಲಾಗಲಿಲ್ಲ. ದುಃಖ ಹೊರಹೊಮ್ಮಲು ಅವನು ಮಗುವಿನಂತೆ ಅಳತೊಡಗಿದ.

"ಇದು ಸತ್ಯವಲ್ಲ ಸ್ವಾಮಿ! ನಾನೇ ಅವಳನ್ನು ಮೈದಾದಿಂದ ಹೊಡೆದೆ. ನನ್ನನ್ನು ಗಲ್ಲಿಗೆ ಹಾಕುವುದು ಸರಿಯಾದದ್ದು. ನನ್ನ ಸ್ವಾಮೀ, ನಾನು ಪಾಪಿ, ನಾನೇ ನನ್ನ ಹೆಂಡತಿಯನ್ನು ತಿವಿದವನು", ಎಂದು ಆವಸರದಿಂದ ಉತ್ಸುಕನಾಗಿ ಹೇಳಿದ.

ಕೆಲವು ವಾರಗಳೊಳಗಾಗಿ ಭಾದರಿಯ ಗಾಯಗಳೆಲ್ಲವೂ ವಾಸಿಯಾಗಿ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದಳು. ಅವಳು ಶಿಶುರಾಮನನ್ನು ಕೋರ್ಟು ತೀರ್ಪಿನಿಂದ ಅವನು ತಪ್ಪಿತಸ್ಥನಲ್ಲವೆಂದು ಬಚ್ಚಿಡಲು ಎಷ್ಟು ಪ್ರಯತ್ನ ಪಟ್ಟರೂ, ಕೋರ್ಟು ತನ್ನ ರೀತಿಯನ್ನೇ ಅನುಸರಿಸಿ ಶಿಶುರಾಮನಿಗೆ ೩ ತಿಂಗಳು ಕಠಿಣಸಜವನ್ನು ವಿಧಿಸಿತು. ಶಿಶುರಾಮ ತನ್ನ ಪಾಪದ ಪ್ರಾಯಶ್ಚಿತ್ತಕ್ಕಾಗಿ ಸಂತೋಷದಿಂದ ಸೆರೆಮನೆಗೆ ಹೋದ.

ಭಾದರಿ ತನ್ನ ಅಯೋಗ್ಯತೆಯಿಂದ ತನ್ನ ಪ್ರೀತಿಯ ಗಂಡನಿಗೆ ಒದಗಿದ ದುಃಖಕ್ಕಾಗಿ ಶಪಿಸಿಕೊಂಡಳು. ತನ್ನನ್ನು ತಾನು ಹಳಿದುಕೊಂಡಂತೆ ಮತ್ತಾರೂ ಅವಳನ್ನು ಹಳಿಯಲು ಸಾಧ್ಯವಿರಲಿಲ್ಲ.

# ಉರ್ದೂ ಸಾಹಿತ್ಯ

ಉರ್ದೂ ಭಾಷೆ ಉತ್ತರ ಹಿಂದುಸ್ತಾನದಲ್ಲಿ ಹುಟ್ಟಿದರೂ ಅದಕ್ಕೆ ಸಾಹಿತ್ಯ ಸ್ವರೂಪ ಬಂದುದು ಕರ್ನಾಟಕದಲ್ಲಿ. ಗೋವಳಕೊಂಡ, ವಿಜಾಪುರ, ಹೈದರಾಬಾದದ ಬಾದಶಹರೆ ಉರ್ದೂ ಸಾಹಿತ್ಯದ ನಿರ್ಮಾಪಕರು. ಇದೂ ಉಳಿದ ಭಾಷೆಗಳಂತೆ ಪ್ರೀತಿಯ ಕತೆಗಳಿಂದ, ದೃಷ್ಟಾಂತಗಳಿಂದ ಮೊದಲಾಯಿತು.

ಅನುವಾದ ಕಾಲದಲ್ಲಿ ಸೈಯದ ಇನಶಾ ಅಲ್ಲಾಖಾನರು ಸರಳವಾದ ಭಾಷೆಯಲ್ಲಿ 'ರಾಣಿ ಕೇತಕಿಯ ಕತೆ' ಯನ್ನು ಬರೆದರು. ಅದರಲ್ಲಿ ಅವರು ಒಂದೂ ಪರಭಾಷೆಯ ಶಬ್ದವನ್ನು ಬರಗೊಡಲಿಲ್ಲ. ಸೈಯದ ಹೈದರ ಬಕ್ಷ್ ಹೈದರಿಯವರು 'ಶುಕ ಸಪ್ತತಿ'ಯ ಆಧಾರದಿಂದ 'ತೋತಾ' ಎಂಬ ಕತೆಯನ್ನು ಬರೆದರು. ಬಳಿಕ ರಜಬ್ ಅಲಿಬೇಗ್ 'ಸರೂರ' ಅವರು 'ಫಿಸನಾಯೆ ಅಜಾಯಬ್' ಎಂಬ ಅತ್ಯಂತ ಸುಂದರವಾದ ಸ್ವತಂತ್ರ ಕತೆಯನ್ನೂ ನಜೀರ ಅಹಮ್ಮದರು 'ತೌಬಾ ತುನ್ನಸೂಹ' ಎಂಬ ಕತೆಯನ್ನೂ ಬರೆದರು.

೧೮೭೮ರಲ್ಲಿ 'ಅವಧ ಅಖಬಾರ' ಪತ್ರಿಕೆಯಲ್ಲಿ ಪಂಡಿತ ರತ್ನನಾಥ 'ಸರಶಾರ' ರು ಆಗಿನ ನವಾಬರ ಜೀವನವನ್ನು ಕುರಿತು ವಿಡಂಬನ ಕಾದಂಬರಿಯನ್ನು ಪ್ರಕಟಿಸಲಾರಂಭಿಸಿದರು. ಇವರ ಕೃತಿಗಳು ಉರ್ದೂ ಸಾಹಿತ್ಯದಲ್ಲಿ ಕ್ರಾಂತಿಯನ್ನುಂಟುಮಾಡಿದವು. ಇವರ ಬಳಿಕ ಕಾದಂಬರೀ ಕ್ಷೇತ್ರದಲ್ಲಿ ಪ್ರಸಿದ್ಧರಾದವರೆಂದರೆ ಮೌಲವಿ ಮುಹಮ್ಮದ 'ಆಜಾದ' ರು. ಇವರು 'ಸೌರಂಗೆ ಖಯಾಲ' ಎಂಬ ಕತೆಯನ್ನು ಬರೆದರು. ಆದರೆ ಇದು ಕೇವಲ ದೃಷ್ಟಾಂತಗಳ ಪುಸ್ತಕವಾಗಿತ್ತು. ಇವರ ಬಳಿಕ ಅಬ್ದುಲ್ ಹಲೀಮ 'ಶರರ' ಎಂಬ ಯುವಕರು, ಬಂಕಿಮ ಚಂದ್ರರ ಕಾದಂಬರಿ ಕತೆಗಳನ್ನು ಉರ್ದೂ ಭಾಷೆಗೆ ಪರಿವರ್ತಿಸಲಾರಂಭಿಸಿದರು. ಇವು ಜನತೆಯ ಮೆಚ್ಚುಗೆಗೆ ಪಾತ್ರವಾದವು. ಬಳಿಕ ಇವರು ಸ್ವತಂತ್ರವಾಗಿ

'ದಿಲ್‌ಗುದಾಜ' ಎಂಬ ಪತ್ರಿಕೆಯನ್ನು ಹೊರಡಿಸಿದರು. ಅದರಲ್ಲಿ ಅವರು ಮುಸಲ್ಮಾನ ದೇಶಗಳ ಐತಿಹಾಸಿಕ ಘಟನೆಗಳಿಗೆ ಕಾದಂಬರಿಯ ರೂಪ ಕೊಟ್ಟು ಬರೆಯಲಾರಂಭಿಸಿದರು.

ಇವರ ಬಳಿಕ ಉರ್ದೂ ಸಾಹಿತ್ಯದಲ್ಲಿ ಹೆಸರಾದವರು ಡಾಕ್ಟರ್ ಮಹಮ್ಮದ ಹಾದಿ 'ರುಸವಾ' ಎಂಬವರು. 'ಇಸರಾರೆ ದಬಾಣಿ ಹರಾಮಪುರ' ಎಂಬ ಉತ್ತಮ ಕಾದಂಬರಿಯನ್ನು ಬರೆದರು. ಇವರ ಬಳಿಕ ಸ್ವರ್ಗೀಯ ಪ್ರೇಮಚಂದರು.

ಉರ್ದೂ ಕಥಾ ಸಾಹಿತ್ಯ ಸ್ವರ್ಗೀಯ ಪ್ರೇಮಚಂದರು ಉರ್ದೂ ಭಾಷೆಗೆ ನೀಡಿದ ದಾನ. ಪ್ರೇಮಚಂದರು 'ನಬಾಬರಾಯ' ಎಂಬ ಹೆಸರಿನಿಂದ ಉರ್ದೂ ಕತೆಗಳನ್ನು ಬರೆಯಲಾರಂಭಿಸಿದರು. ಇವರಿಂದಲೇ ನಿಜವಾದ ಉರ್ದೂ ಕಥಾ ಸಾಹಿತ್ಯ ಪ್ರಾರಂಭವಾಯಿತೆಂದು ಹೇಳಬಹುದು. ಇವರ 'ಪ್ರೇಮ ಬತ್ತೀಸಿ', 'ಪ್ರೇಮ ಪಚ್ಚೀಸಿ' ಮೊದಲಾದ ಕಥಾ ಸಂಗ್ರಹಗಳು ಹುಟ್ಟಿ ಉರ್ದೂ ಕಥಾ ಪ್ರಪಂಚದಲ್ಲಿ ಕ್ರಾಂತಿಯನ್ನುಂಟುಮಾಡಿದವು. ಪ್ರೇಮಚಂದರನಂತರ ಹೆಚ್ಚು ಪ್ರಸಿದ್ಧಿಯನ್ನು ಹೊಂದಿದ ಪಂಡಿತ ಸುದರ್ಶನ ಇವರ ಕಥಾ ಸಂಗ್ರಹಗಳ 'ಸುಬಹ ವತನ್' ಮೊದಲಾದುವು ಉರ್ದೂ ಸಾಹಿತ್ಯದಲ್ಲಿ ರತ್ನಗಳಾಗಿವೆ.

ಮುಂದೆ ಅನೇಕ ಕತೆಗಾರರು ಬೆಳಕಿಗೆ ಬಂದರು. ಅವರಲ್ಲಿ 'ಅಹಮದಶಾಹ ಬುಖಾರಿ', 'ತಾಜ', 'ಅಖ್ತರ', 'ಚಲದರವ್' ಮೊದಲಾದವರು ಹೆಸರಾದವರು. ಇವರೆಲ್ಲರೂ ಹೆಚ್ಚಾಗಿ ಹಾಸ್ಯರಸ ಪ್ರಧಾನವಾದ ಕತೆಗಳನ್ನು ಬರೆದರು.

ಆಧುನಿಕ ಉರ್ದೂ ಕಥಾ ಸಾಹಿತ್ಯದ ಒಲವು ವಾಸ್ತವವಾದದ ಕಡೆಗೆ ಹೆಚ್ಚಾಗಿ ಇದೆ. ಕಥಾನಕ ಕಡಮೆ, ಮನೋ ವಿಜ್ಞಾನಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಡಲ್ಪಡುತ್ತಿದೆ. ಅಖ್ತರ ಹುಸೇನರಾಯಪುರೀ, ಡಾಕ್ಟರ್ ಜಾಕೀರ್ ಹುಸೇನ, ಅಶ್ಕ, ಮುಹಮ್ಮದ ಮುಜೀಮ ಮೊದಲಾದವರ ಕತೆಗಳು ಹೆಚ್ಚು ಮನೋವೈಜ್ಞಾನಿಕವಾಗಿವೆ. ಇವರೆಲ್ಲರೂ ಸಾಹಿತ್ಯವು ತಮಗೆ ತಮ್ಮ ಕೆಡಕು ಒಳಿತುಗಳನ್ನು ತೋರಿಸಬೇಕು, ತಮ್ಮ ಸಮಸ್ಯೆಗಳನ್ನು ಬಿಡಿಸಬೇಕು, ತಮ್ಮ ಸುಖದುಃಖದಲ್ಲಿ ಭಾಗಿ

ಯಾಗಬೇಕು, ಎಂದು ಬಯಸುತ್ತಾರೆ. ಈ ಹಾದಿಯ ಮೇಲೆ ಹೊರಟ ತರುಣ ಲೇಖಕರಲ್ಲಿ ಪಂಚಾಲದ ಕೃಷ್ಣಚಂದ್ರ, ರಾಜೇಂದ್ರಸಿಂಹ, ಬೇದೀ ಇಸ್ಮತ್ ಚುಗ್ತಾಯ್, ಖ್ವಾಜಾ ಅಹಮ್ಮದ್ ಅಬ್ಬಾಸ್, ಸಜ್ಜದ್ ಜಾಹೀರ್ ಎಂಬವರು ಪ್ರಮುಖರು.

—o—

## ಮಹಮ್ಮದ್ ಮುಜೀಬ್

ಜನಾಬ್ ಮಹಮ್ಮದ ಮುಜೀಬರು ಆಕ್ಸ್‌ಫರ್ಡ ಯೂನಿವರ್ಸಿಟಿಯ ಪದವೀಧರರು. ದಿಲ್ಲಿಯ ರಾಷ್ಟ್ರೀಯ ಮುಸ್ಲಿಂ ವಿದ್ಯಾಲಯದಲ್ಲಿ ಪ್ರೊಫೆಸರರು. ಇವರಿಗೆ ಯುರೋಪದ ಅನೇಕ ಭಾಷೆಗಳು ಬರುತ್ತವೆ. ಉರ್ದೂ ಸಾಹಿತ್ಯದಲ್ಲಿ ಹೆಸರುವಾಸಿಯಾಗಿದ್ದಾರೆ. ಇಂಗ್ಲೀಷಿನಲ್ಲಿಯೂ ನಾಟಕಗಳನ್ನು ಬರೆದಿದ್ದಾರೆ.

'ಹೊಸ ಮನೆ' ಎಂಬುದು ಒಂದು ಮನೋವೈಜ್ಞಾನಿಕ ಕತೆ. ಅಯೂಬಖಾನನ ಚಿತ್ರ ಅತ್ಯಂತ ಸ್ವಾಭಾವಿಕವಾಗಿದೆ. ಅವನ ಚಾರಿತ್ರದ ಕೊರತೆಯನ್ನು ಸುಂದರವಾಗಿ, ಸಹಜ-ಸ್ವಾಭಾವಿಕವಾಗಿ ಚಿತ್ರಿಸಿದ ಕಲಾಕೌಶಲ್ಯ ಗಮನೀಯವಾಗಿದೆ. ನುಡಿಯಲ್ಲಿ ಜೀವ ಇದೆ, ಶೈಲಿಯಲ್ಲಿ ಸಹಜ ನಿರ್ಮಲ ಓಘವಿದೆ.

# ಹೊಸ ಮನೆ

ಅನುವಾದಕ: **ಗುರುನಾಥ ಜೋಶಿ**

ಮನುಷ್ಯನಿಗೆ ದೇವರ ನೆನಪು ಬರುವುದು ಸಂಕಟ ಬಂದಾಗ
ಎಷ್ಟು ತಿಳಿಸಿ ಹೇಳಿದರೂ ಅಯೂಬಖಾನನಿಗೆ ತನ್ನ ಜೀವನದಲ್ಲಿ
ಮಾರ್ಪಾಡು ಮಾಡಿಕೊಳ್ಳಬೇಕೆಂಬ ಬುದ್ಧಿ ಬಂದುದು ಅವನ ಹರೆಯ
ಮಗಳೂ ಹತ್ತು ವರ್ಷದ ಮಗನೂ ಸತ್ತಮೇಲೆ; ಅವನ ಗಡ್ಡದಲ್ಲಿ ಬಿ
ಕೂದಲು ಕಾಣಲಾರಂಭಿಸಿದ ಮೇಲೆ.

'ಹೊಸ ಜೀವನ, ಹೊಸಮನೆ!' ಅವನು ಮನಸ್ಸಿನಲ್ಲಿಯೆ ಯೋಚಿ
ಸಿದ. 'ನೂರಾರು ತಲೆಗಳಿಂದ ಯಾವ ಮನೆಯಲ್ಲಿ ವಿಲಾಸ ನಲಿಯ
ತ್ತಿರುವುದೊ ಅಂಥ ಮನೆಯಲ್ಲಿ ಒಬ್ಬ ಪರಮಾತ್ಮ ಪರಾಯಣ ಹೇ
ವಾಸಿಸಬಲ್ಲ? ಇಲ್ಲಿದ್ದರೆ ನನ್ನ ಪರಮಾರ್ಥ ಕಾರ್ಯದಲ್ಲಿ ತೊಡ
ಎಲ್ಲ ದುಗುಡ ದುಃಖವನ್ನೂ ಮರೆತು ಬಿಡುವೆನು'.

ಹಳೆಯ ಮನೆಯಲ್ಲಿ ಒಂದೇ ರಾತ್ರಿಯನ್ನು ಕಳೆಯುವುದು ಕೂ
ಅವನ ಮನಸ್ಸಿಗೆ ಬರಲಿಲ್ಲ. ಕೂಡಲೆ ಒಂದು ಮನೆಯನ್ನು ಬಾಡಿಗೆ
ಹಿಡಿದು ತನ್ನ ಹಳೆಯ ಮನೆಯನ್ನು ಕಟ್ಟಕಡೆಯ ವೇಶ್ಯೆ ನಜಿಯಾಳಿ
ಕೊಟ್ಟುಬಿಟ್ಟ. ನಜಿಯಾಳಿಗೂ ಈಗ ತನ್ನ ರೂಪ ಯೌವನದ ಮೇ
ಅಷ್ಟೊಂದು ಭರವಸೆಯಿರಲಿಲ್ಲ. ಆವಳು ಹಳೆಯ ಮನೆಯಲ್ಲಿರಲ
ಒಡನೆಯೆ ಸಂತೋಷದಿಂದೊಪ್ಪಿಕೊಂಡು ತನ್ನ ಬಲೆಯಿಂದ ಮೀನನ್ನು
ಬಿಟ್ಟುಬಿಟ್ಟಳು. ಅಯೂಬಖಾನನ ಹೊಸ ಮನೆಯ ಕಟ್ಟುವಿಕೆ ಮೊ
ಲಾಯಿತು. ಅವನ ಹೃದಯವನ್ನು ನರಕದ ಭಯ ಆವರಿಸಿದ್ದಿತಾಗ
ನಮಾಜು ಮಾಡಿ ಮಾಡಿ ಕಾಲು ಸೋತುಹೋದ ಬಳಿಕ ಮನಸ್ಸ
ಮಾಧಾನಾರ್ಥವಾಗಿ ಹೊಸ ಮನೆಯನ್ನು ನೋಡಲು ಹೋಗುತ್ತಿದ್ದನು
ಮನೆಯು ಸಿದ್ಧವಾಗುವುದನ್ನು ನೋಡಿ ಅವನಿಗೆ ತನ್ನ ಪ್ರಾರ್ಥನೆ ದೇ
ರಿಗೆ ಒಪ್ಪಿಗೆಯಾಗುತ್ತಿರುವುದೆಂದೂ ತನ್ನ ತಲೆಯ ಮೇಲಿನ ಅಪರಾಧಗ

ಹೊರೆ ಹಗುರಾಗುತ್ತಿರುವುದೆಂದೂ ಅನಿಸುತ್ತಿದ್ದಿತು. ಆ ಮನೆಯ ಮತ್ತು ಅವನ ನೀರಸ ಜೀವನದ ನಡುವೆ ಒಂದು ಬಗೆಯ ಸಂಬಂಧ ಬೆಳೆಯಿತು. ಇದನ್ನು ಕಂಡು ಅವನಿಗೆ ಆಗಾಗ ಆಶ್ಚರ್ಯವುಂಟಾಗುತ್ತಿತ್ತಾಗಲಿ ಇದು ಹೇಗಾಯಿತೆಂಬುದು ಅವನಿಗೆಂದಿಗೂ ತಿಳಿಯದೆ ಹೋಯಿತು.

ಮನೆ ಕಟ್ಟಿಸುವ ಕೆಲಸವನ್ನು ಅವನು ಮುಮಿದ್‌ಮಿಯ್ಯಾನಿಗೆ ಒಪ್ಪಿಸಿ ದಿನವೂ ಅವನ ಬಳಿಗೆ ಹೋಗಿ ಆದಷ್ಟು ಬೇಗ ಮನೆಯನ್ನು ಕಟ್ಟಿಸಿಕೊಡಲು ಹೇಳುತ್ತಿದ್ದನು. 'ಮುಮಿದ್‌ಮಿಯ್ಯಾ! ರೂಪಾಯಿಗಳ ಚಿಂತೆಯನ್ನು ನೀನು ಎಳ್ಳಷ್ಟೂ ಮಾಡಬೇಡ. ಎಷ್ಟು ಜನ ಕೂಲಿ ಕಾರರು ಸಿಕ್ಕುವರೊ ಅಷ್ಟು ಜನರನ್ನೂ ಮನೆಯ ಕೆಲಸಕ್ಕೆ ಹಚ್ಚಿಬಿಡು. ಅಗತ್ಯ ಬಿದ್ದರೆ ಸಾಲವನ್ನು ಮಾಡಲಿಕ್ಕೂ ಸಿದ್ಧನಿದ್ದೇನೆ. ಎಷ್ಟು ಸಾಲ ವಾದರೂ ಚಿಂತೆಯಿಲ್ಲ, ಮುಟ್ಟಿಹೋಗುವುದು. ಈಗ ನಾನು ಅತ್ಯಂತ ಸಾದಾ ರೀತಿಯಲ್ಲಿ ಬಾಳಬೇಕೆಂದಿದ್ದೇನೆ. ಮುಮಿದ್‌ಮಿಯ್ಯಾ, ನೀನು ಬೇಗ ಮನೆಯನ್ನು ಮುಗಿಸಿಕೊಡು. ಬಹಳ ಜನರನ್ನು ಮನೆಯ ಕೆಲ ಸಕ್ಕೆ ತೊಡಗಿಸು. ಹೊಸ ಮನೆಗಾಗಿ ನಾನು ಹಾತೊರೆಯುತ್ತಿದ್ದೇನೆ'.

ಪ್ರತಿದಿನ ಸಾಯಂಕಾಲ ಆಯೂಬಖಾನ ಮುಮಿದ್‌ಮಿಯ್ಯಾನ ನಡುವೆ ಒಂದೇ ಬಗೆಯ ಪ್ರಶ್ನೋತ್ತರಗಳು ನಡೆಯುತ್ತಿದ್ದುವು.

"ಹೌದು! ಛತ್ತುಗಳು . . . . ?"

"ಹುಜೂರ್, ಸರಿ . . . . ಹತ್ತು ದಿನಗಳಲ್ಲಿ".

"ಮತ್ತೆ ಗೋಡೆಗಳನ್ನು ಮೆತ್ತುವುದು, ಸುಣ್ಣ ಬಳಿಯುವುದು? ಮುಮಿದ್‌ಮಿಯ್ಯಾ, ಬೇಗ ಮಾಡಿಸು. ನೀನು ದಿನವೂ ಅದೇ ಹತ್ತು ದಿನಗಳ ಮಾತನ್ನೇ ಹೇಳುತ್ತೀ".

"ಹೌದು, ಹುಜೂರ್! ಇನ್ನು ಹೆಚ್ಚು ತಡವಾಗಲಿಕ್ಕಿಲ್ಲ".

ಇವೆಲ್ಲ ಮಾತುಕತೆಗಳು ಮುಮಿದ್‌ಮಿಯ್ಯಾನ ಕೋಣೆಯ ಎದುರಿನಲ್ಲಿಯೆ ನಡೆಯುತ್ತಿದ್ದವು. ಆಯೂಬಖಾನ ದಿನವೂ ಗೊತ್ತಿಲ್ಲದೆಯೆ ಒಂದು ಕಟ್ಟಿಗೆಯಿಂದ ಇಟ್ಟಂಗಿಯ ತುಂಡೊಂದನ್ನು ಒಡೆಯಲು ಯತ್ನಿಸುತ್ತಿದ್ದನು ಮತ್ತು ಅತ್ತಿತ್ತ ನೋಡಿ ಮೋಟಾರಿನ ಕಡೆಗೆ ಹೋಗುತ್ತಿದ್ದನು.

ಒಂದು ದಿನ ಮನೆಯನ್ನು ನೋಡಲು ಆಯೂಬಖಾನ ಬಂದಾಗ

ಕಂಟ್ರಾಕ್ಟರ್ "ಹುಜೂರ್! ನವಾಬಗಂಜದ ಮನೆ ತಯಾರಾಯಿತು. ಅಲ್ಲಿಯ ಕೆಲವರು ಕೆಲಸಗಾರರನ್ನು ಇಲ್ಲಿಗೆ ಕರೆದುಕೊಂಡು ಬಂದಿದ್ದೇನೆ. ಒಳ್ಳೆಯ ಕೆಲಸಗಾರರು. ಕೆಲಸವೂ ಚೆನ್ನಾಗಿ ಆಗುವುದು" ಎಂದ.

"ಸರಿ, ಚೆನ್ನಾಯಿತು".

ಇಬ್ಬರೂ ಮನೆಯನ್ನು ನಾಲ್ಕೂ ಕಡೆಗಳಿಂದ ನೋಡತೊಡಗಿದರು. ನಿನ್ನೆಯ ಕೆಲಸ, ಇವೊತ್ತು ಆದ ಕೆಲಸ ತೋರಿಸಿ ಕೆಲಸ ಬಹಳವಾಗಿದೆಯೆಂದು ಕಂಟ್ರಾಕ್ಟರ್ ಹೇಳುತ್ತಿದ್ದ.

"ಹುಜೂರ್! ಇವನು ಹೊಸ ಮೇಸ್ತ್ರಿ. ಚೆನ್ನಾಗಿ ಕೆಲಸ ಮಾಡುತ್ತಾನೆ".

ಮೇಸ್ತ್ರಿ ಎದ್ದು ಸಲಾಂ ಮಾಡಿದ.

"ಹುಜೂರರ ಪ್ರಕೃತಿ ಚೆನ್ನಾಗಿದೆಯಲ್ಲವೆ . . .?" ಎಂದು ಒಬ್ಬ ಮೇಸ್ತ್ರಿ ಕೇಳಿದ.

ಅಯೂಬಖಾನ ಈ ಪ್ರಶ್ನೆಗೇನೂ ಉತ್ತರವೀಯಲಿಲ್ಲ. ಅವನ ದೃಷ್ಟಿಯೂ ಮನಸ್ಸೂ ಬೇರೆ ಕಡೆಗಿದ್ದವು. ಮೇಸ್ತ್ರಿಗಳ ಹತ್ತಿರ ಒಬ್ಬ ಹರೆಯದ ಹುಡುಗಿ ನಿಂತಿದ್ದಳು. ಅವಳು ಅಯೂಬಖಾನನಿಗೆ ಆದರ ಸತ್ಕಾರಗಳನ್ನು ವ್ಯಕ್ತಮಾಡದೆ ಅವನ ಕಡೆಗೇ ನೋಡುತ್ತಿದ್ದಳು. ಅವಳ ಮುಖದ ಮೇಲೆ ಮುಗುಳು ನಗೆ ಮೂಡಿತು. ಅಯೂಬಖಾನನ ಶರೀರ ನಡುಗಿತು. ಮುಖವು ಕೆಂಪೇರಿತು.

"ಹುಜೂರ್! ಈ ಸುಣ್ಣ ಚೆನ್ನಾಗಿಲ್ಲವೆಂದು ಮೇಸ್ತ್ರಿ ಹೇಳುತ್ತಾನೆ. ಇನ್ನೊಬ್ಬ ಯಾವನಾದರೂ ಸುಣ್ಣಗಾರನನ್ನು ಗೊತ್ತುಮಾಡಬೇಕು".

"ಹೂಂ!".

ಅಯೂಬಖಾನ ಕಂಟ್ರಾಕ್ಟರನ ಮಾತಿಗೆ ಕೇವಲ ಹೂಂಗುಟ್ಟುತ್ತಿದ್ದ. ಮನೆಯನ್ನು ಕೂಡ ಚೆನ್ನಾಗಿ ನೋಡಲಿಲ್ಲ. ಅವನ ನೋಟ ಹರಿದ ಕಡೆಯಿಂದ ಆ ಹುಡುಗಿಯ ಚಂಚಲ ನಯನಗಳು ಅವನನ್ನು ಎದುರುಗೊಳ್ಳುತ್ತಿದ್ದವು. ಎಲ್ಲಿಂದಲೋ ಏನೋ ಅವನಿಗೆ ಕೇಳಿಬರುತ್ತಿದ್ದಿತು— "ಹುಜೂರರ ಪ್ರಕೃತಿ ಚೆನ್ನಾಗಿದೆಯೇ?"

ಆ ಹುಡುಗಿಯೂ ಮೇಸ್ತ್ರಿಗಳೂ ಕೆಲಸದಲ್ಲಿ ನಿರತರಾಗಿದ್ದುದು ಗೊತ್ತಿದ್ದರೆ ಅಯೂಬಖಾನ ತಲೆಬಾಗಿಸಿಕೊಳ್ಳುತ್ತಿದ್ದ. ಅವನ ಹೃದಯದಲ್ಲಿ ಅಲ್ಲೋಲ ಕಲ್ಲೋಲ; ಅವನ ಮನಸ್ಸು ಅವನ ವಶದಲ್ಲಿರಲಿಲ್ಲ. ಸಾರಾಯಿ ಕುಡಿತದ ಗುಂಗು ಅವನಿಗೆ ಮೊದಲಿಂದಲೂ ರೂಢಿಯೇ. ಈ ಹೊಸ ಸನ್ನಿವೇಶವಂತೂ ಅವನ ಹೃದಯಸಾಗರದಲ್ಲಿ ಬಿರುಗಾಳಿಯನ್ನೆಬ್ಬಿಸಿಬಿಟ್ಟಿದ್ದಿತು. ಅವನ ಪರಿಸ್ಥಿತಿ ಅಲೆಗಳ ಹೊಡೆತಕ್ಕೆ ಸಿಕ್ಕ ಹುಲ್ಲು ಕಡ್ಡಿಯಂತೆ ಆಗಿತ್ತು.

ಇವೆಲ್ಲದರ ಬುಡದಲ್ಲಿ ಇದ್ದ ಸತ್ಯವೇನು? ಅಯೂಬಖಾನ ಹಿಂದೆ ಎಷ್ಟೋ ಸಲ ಪ್ರೇಮಜಾಲದಲ್ಲಿ ಸಿಲುಕಿದ್ದ. ಅವನಿಗೆ ಸೌಂದರ್ಯವನ್ನೂ ಸುಂದರಿಯರನ್ನೂ ಅರಿಯುವ, ಗುರುತಿಸುವ ಜ್ಞಾನ ಸಾಕಷ್ಟಿದ್ದಿತು. ಅದೇ ಅವನನ್ನು ಹೊಸ ರೂಪದಿಂದ ಬೆನ್ನಟ್ಟಿ ಬಂದಿದ್ದಿತೇನು? ಇಲ್ಲ. ಇದು ಪ್ರೇಮವಲ್ಲ; ಸೌಂದರ್ಯವೂ ಅಲ್ಲ. ಅದರ ಪ್ರತಿಭೆಯೂ ಇರಲಿಲ್ಲ. ಮನೆಯನ್ನು ತಲುಪುವುದರೊಳಗಾಗಿ ತಾನು ಪ್ರೇಮಜಾಲದಲ್ಲಿ ಸಿಲುಕಿಲ್ಲವೆಂಬ ಅರಿವು ಸಂಪೂರ್ಣವಾಗಿ ಅಯೂಬಖಾನನಿಗೆ ಆಗಿಬಿಟ್ಟಿದ್ದಿತು. ಆದರೆ ಈ ಗಾಬರಿಯೇಕೆ? ಈ ದುಗುಡವೇಕೆ?

ಮನೆಗೆ ಹೋದಕೂಡಲೆ ಅಯೂಬಖಾನ ಎರಡು ಬಾರಿ ನಮಾಜು ಮಾಡಿದ. ಈ ದಿನ ನಮಾಜಿನಲ್ಲಿ ಅವನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾದಷ್ಟು ಹಿಂದೆ ಎಂದೂ ಆಗಿರಲಿಲ್ಲ. ಆದರೆ ಅದೇನು ಅಚ್ಚರಿಯೊ? ಆ ಕೂಲಿಕಾರ ಹರೆಯದ ಹುಡುಗಿಯ ಚಂಚಲ ನೇತ್ರಗಳು ಮಾತ್ರ ಅವನನ್ನು ಸದಾ ದಿಟ್ಟಿಸಿ ನೋಡುತ್ತಲೇ ಇದ್ದುವು. ಅವನ ಹೃದಯ ದಡದಡ ಹೊಡೆದುಕೊಳ್ಳುತ್ತಿದ್ದಿತು. ಪ್ರಕೃತಿ ಸ್ವಲ್ಪ ಅಶಾಂತವಾಗಿದ್ದಿತು. ಇಷ್ಟಾದರೂ ಅವನ ಪ್ರಾರ್ಥನೆಯಲ್ಲಿ ಯಾವ ವ್ಯತ್ಯಾಸವೂ ಉಂಟಾಗಲಿಲ್ಲ. ದೇವರೂ ಕೋಪಗೊಳ್ಳಲಿಲ್ಲ. ಪ್ರಾರ್ಥನೆ ಮಾಡುವಾಗ ಅವನು ಸಂತೋಷದ ನಿಟ್ಟುಸಿರು ಬಿಡುತ್ತಿದ್ದ. ಹಿರಿಯ ಬೇನೆಯಿಂದ ಪಾರಾಗಿ ಗುಣಹೊಂದಿದ ರೋಗಿಯ ಕಣ್ಣಿನ ಆನಂದಾಶ್ರುವಿನಂತೆ ಅವನ ಕಣ್ಣಲ್ಲಿ ಕಂಬನಿ ಹರಿಯುತ್ತಿತ್ತು.

"ವಿಚಿತ್ರ . . . . ವಿಚಿತ್ರ . . . ." ಎಂಬ ಮಾತಿನ ಹೊರತ ಅಯೂಬಖಾನನ ಬಾಯಿಂದ ಬೇರೆ ಏನೂ ಹೊರಬೀಳಲಿಲ್ಲ.

ಮರುದಿನ ಬೆಳಗ್ಗೆ ಎದ್ದಾಗ ತಾನೊಬ್ಬ ಬೇರೆಯ ವ್ಯಕ್ತಿಯಾಗಿರುವ ನೆಂದು ಅವನಿಗನಿಸಿತು. ದಿನವೂ ತನ್ನ ಸಾದಾ ಉಡುಗೆ, ನಮಾಜು . . ಜಪದ ಕಂರಿಯ ಸರ ಇವೆಲ್ಲವೂ ತನಗೆ ಶಿಕ್ಷೆ ಕೊಡಲು ಬಂದ ಸಾಮಗ್ರಿ ಯೆಂದು ಅವನು ತಿಳಿಯುತ್ತಿದ್ದ. ಆದರೆ ಈದಿನ ಅವು ಅವನಿಗೆ ಬಹಳ ಮೆಚ್ಚುಗೆಯವಾದವು. ಆಳುಮಗನು ಬೆಳಗಿನ ತಿಂಡಿಯನ್ನು ತಂದಾಗ ಅವನೊಡನೆ ಅತ್ಯಂತ ಪ್ರೀತಿಯಿಂದ ಮಾತನಾಡಿದ. ಎಂದೂ ಇಲ್ಲದ ಈ ಬಗೆಯನ್ನು ಕಂಡು ಆಳುಮಗ ಗಾಬರಿಯಾದ. ಅವನಿಗೆ ದಿನವೂ ಕೆಂಡದಂಥ ಕಣ್ಣುಗಳನ್ನೂ ಕೋಪಾಗ್ನಿ ಹೊತ್ತಿ ಉರಿ ಯುತ್ತಿದ್ದ ಮುಖವನ್ನೂ ನೋಡುವುದು ರೂಢಿಯಾಗಿತ್ತು. ಭೇಟಿಯಾ ಗಲು ಬಂದ ಒಬ್ಬಿಬ್ಬರು ಸಹ ಈದಿನ ಸಂತೋಷಪಟ್ಟುಕೊಂಡು ಹೋದರು. ನಿಜವಾಗಿಯೂ ಅಮಲ್ದಾರ್ ಅಯೂಬಖಾನರು ಪರಮಾ ತ್ಮನ ಸೇವಕರು ಎಂಬ ಅಭಿಪ್ರಾಯವನ್ನು ಅವರು ಈದಿನ ತಮ್ಮೊಡನೆ ಒಯ್ದರು. ಅಯೂಬಖಾನ ಮನೆಯನ್ನು ನೋಡಲು ಹೋದ. ಅಲ್ಲಿ ಕಂಟ್ರಾಕ್ಟರನ ಕೂಡ ಮಾತನಾಡದೆ ಕೂಲಿಕಾರರ ಕೂಡ ಮಾತನಾಡ ತೊಡಗಿದ. ಮಾತನಾಡುವ ರೀತಿಯೂ ಕೂಲಿಕಾರರ ಹಾಗೆಯೇ ಇದ್ದಿತು. ಎಂದೂ ನೋಡದ ಒಬ್ಬ ಮುದುಕ ಮೇಸ್ತ್ರಿ ಅವನಿಗೆ ಬಹಳ ಮೆಚ್ಚುಗೆಯವನಾದ ಅವನ ಹತ್ತಿರ ಹೋಗಿ ಕುಳಿತು ಅತ್ಯಂತ ಸಲುಗೆ ಯಿಂದ ಮನಬಿಚ್ಚಿ ಮಾತನಾಡಲಾರಂಭಿಸಿದ.

"ಏನಪ್ಪಾ, ಈ ದಿನದಿಂದ ನೀನು ಕೆಲಸ ಸುರುವು ಮಾಡಿರು ವೆಯಾ?"

"ಇಲ್ಲ ಹುಜೂರ್! ನಾವು ಕೆಲಸ ಸುರುವು ಮಾಡಿ ಬಹಳ ದಿನ ಗಳಾದವು" ಎಂದು ಮೇಸ್ತ್ರಿ ಉತ್ತರವಿತ್ತ.

"ಆದರೆ, ನಾನು ನಿನ್ನನ್ನು ಮೊದಲು ನೋಡಿದುದು ಇದೇ ಮೊದಲ ನೆಯ ದಿನ, ಮೊದಲನೆಯ ಬಾರಿ.

"ಹುಜೂರ್! ಬಡ ಮನುಷ್ಯರನ್ನು ಯಾರು ನೋಡುತ್ತಾರೆ?

ದೊಡ್ಡವರೇ ದೊಡ್ಡವರಿಗೆ ಕಾಣಿಸುತ್ತಾರೆ" ಎಂದು ನಸುನಗುತ್ತ ಮೇಸ್ತ್ರಿ ಅಂದ.

"ಹೌದು. ಸರಿಯಾಗಿ ಹೇಳುತ್ತೀಯೆ" ಎಂದು ಅಯೂಬಖಾನ ಸಿಟ್ಟಾಗುವುದರ ಬದಲು ಈ ದಿನ ಸಂತೋಷಗೊಂಡ. ತನ್ನ ಮತ್ತು ಮೇಸ್ತ್ರಿಯ ನಡುವೆ ಇರುವ ಅಂತರ ಕಳೆಯಲಿ, ತಮ್ಮಿಬ್ಬರ ನಡುವೆ ಇರುವ ಗೋಡೆ ಬಿದ್ದುಹೋಗಲಿ ಎಂಬ ಇಚ್ಛೆ ಅವನ ಹೃದಯದಲ್ಲಿ ಉದ್ಭವಿಸಿತು. ಮೊದಲು ತಾನು ಹೀಗೆ ಮಾಡಲು ಪ್ರಯತ್ನಿಸಿದರೆ ತನ್ನ ಬುದ್ಧಿಯೆ ಭ್ರಮಿಸಿ ಹೋಗಬಹುದಾಗಿದ್ದಿತೆಂಬುದು ಇವೊತ್ತು ಅವನಿಗೆ ಸ್ಪಷ್ಟವಾಗಿ ಕಾಣತೊಡಗಿದ್ದಿತು.

"ಹೌದಪ್ಪ, ಹೌದು ನೀನು ಸರಿಯಾಗಿಯೇ ಹೇಳುತ್ತಿರುವೆ" ಎಂದು ಒಂದು ದೀರ್ಘವಾದ ಉಸಿರು ಬಿಟ್ಟು ಅಯೂಬಖಾನ: "ನೀನು ಸುಮಾರು ಒಂದು ತಿಂಗಳಿಂದ ಇಲ್ಲಿ ಕೆಲಸ ಮಾಡುತ್ತಿರುವೆ. ನೀನು ಇರುವಿಯೋ ಇಲ್ಲವೋ ಎಂಬುದೂ ನನಗೆ ಗೊತ್ತಿಲ್ಲ .... ಆದರೆ ಇತ್ತಿತ್ತಲಾಗಿ ನನ್ನ ಪ್ರಕೃತಿಯಲ್ಲಿ ಸ್ವಲ್ಪ ಸ್ವಲ್ಪ ಬದಲಾವಣೆಯಾಗತೊಡ ಗಿದೆ. ಈಗ ನನಗೆ ಗೊತ್ತಾಗತೊಡಗಿದೆ ರಸೂಲನು 'ಶ್ರೀಮಂತರು ಸ್ವರ್ಗಕ್ಕೆ ಹೋಗುವುದು ಸೂಜಿಯ ಕಣ್ಣಿನೊಳಗಿಂದ ಒಂಟಯು ಪಾರಾ ಗುವಷ್ಟು ಕಠಿನವಾಗಿದೆಯೆ'ಂದು ಏಕೆ ಹೇಳಿದನೆಂಬುದು. ನಾನು ನನ್ನ ಯೌವನವನ್ನು ಬಹಳ ಕೆಟ್ಟರೀತಿಯಿಂದ ಕಳೆದೆ. ಮೊನ್ನೆ ಮೊನ್ನೆ ನನ್ನ ಇಬ್ಬರೂ ಮಕ್ಕಳು ಒಂದೇ ವಾರದಲ್ಲಿ ಸತ್ತರು. ಬಹಳ ದಿನಗಳಾಗಿಲ್ಲ. ಮಕ್ಕಳು ಸಾಯುವಾಗ ದೇವರೂ ಇದ್ದಾನೆ, ಶಕ್ತಿವಂತನಿದ್ದಾನೆ ಎಂಬುದು ಗೊತ್ತಾಯಿತು ದೇವರನ್ನು ಮರೆತವನಿಗೆ ಹಾನಿಯೇ ಹಾನಿಯಾಗು ತ್ತೆಂಬುದೂ ಗೊತ್ತಾಯಿತು."

"ಹೌದು, ಹುಜೂರ್! ಇಡಿಯ ಪ್ರಪಂಚ ಪರಮಾತ್ಮನದೇ ಆಗಿರು ವಾಗ ಆತನನ್ನು ಮರೆತರೆ ನಮಗೆ ಪ್ರಪಂಚವಾದರೂ ಹೇಗೆ ದಕ್ಕೀತು?" ಎಂದು ಮೇಸ್ತ್ರಿ ಸಂಬುಗೆಯಿಂದ ಬುದ್ಧಿವಂತಿಕೆಯಿಂದ ನುಡಿದ.

"ಹೌದು, ಸರಿಯಾಗಿಯೆ ಹೇಳುತ್ತೀ ... ಆದ್ದರಿಂದಲೇ ನಾನು ಶ್ರೀಮಂತಿಕೆಯಿಂದ ಇರುತ್ತಿದ್ದ ನನ್ನ ಹಳೆಯ ಮನೆಯನ್ನು ಬಿಟ್ಟುಬಿಡ

ಬೇಕೆಂದೂ ಈ ಹೊಸಮನೆಯಲ್ಲಿ ಇದ್ದುಕೊಂಡು ದೇವರನ್ನು ಪ್ರಾರ್ಥಿಸ ಬೇಕೆಂದೂ ಬಯಸಿದೆನು."

ಮೇಸ್ತ್ರಿ ಏನೋ ಹೇಳಬೇಕೆನ್ನುತ್ತಿದ್ದವನು ಅಷ್ಟಕ್ಕೆ ತಡೆದು ನಿಂತ. ಅಯೂಬಖಾನ ಮಾತನ್ನು ಮುಂದುವರಿಸಿದ "ನಾನು ಇಲ್ಲಿ ತೀರ ಬಡವರಂತೆ ಜೀವನವನ್ನು ಸಾಗಿಸುವೆ . ಬಡವರ ಕೂಡ ಇರುವೆ .... ಎಲ್ಲರ ಗೆಳೆಯನಾಗಿ ... ಎಲ್ಲರ ಬಂಧುವಾಗಿ ...."

ಅಯೂಬಖಾನ ಸ್ವಲ್ಪ ಹೊತ್ತು ಸುಮ್ಮನೆ ಯೋಚಿಸುತ್ತಾ ನಿಂತ. ಹೃದಯದೊಳಗಿನ ಮಾತು ಅತ್ಯಂತ ಸರಳವಾಗಿ ಈರೀತಿ ಹೊರಬರುವು ದಿಲ್ಲ. ಮೇಸ್ತ್ರಿ ಒಂದು ತಣಿಯುಸಿರನ್ನು ಬಿಟ್ಟು ಕೆಲಸದಲ್ಲಿ ತೊಡಗಿದ. ಇಬ್ಬರಿಗೂ ತಮ್ಮಲ್ಲಿ ಗೆಳೆತನವುಂಟಾಗಿದೆಯೆಂಬುದು ಗೊತ್ತಾಯಿತು. ಇಬ್ಬರಿಗೂ ಬಹಳ ಸಂತೋಷವಾಯಿತು. ಅಯೂಬಖಾನನಿಗೆ ಕೆಳಗಿನ ತರಗತಿಯವರೊಡನೆ ಮಾತನಾಡಲು ಅನಿಸುತ್ತಿದ್ದ ಅಲ್ಪ ಸ್ವಲ್ಪ ನಾಚಿಕೆಯೂ ಈಗ ಇಲ್ಲದಂತಾಯಿತು.

ಅಲ್ಲಿ ಇಲ್ಲಿ ನೋಡುತ್ತ ಅಯೂಬಖಾನ ತನ್ನನ್ನು ಚಂಚಲನಯನ ಗಳಿಂದ ಆಕರ್ಷಿಸಿದ, ತನ್ನಲ್ಲಿ ಹೊಸ ಹುರುಪನ್ನು ಹುಟ್ಟಿಸಿದ ಆ ಹರೆ ಯದ ಕೂಲಿಯ ಹುಡುಗಿಯಿದ್ದಲ್ಲಿಗೆ ಹೋದ. ಆ ಹುಡುಗಿ ಒಂದು ಸಲ ನೇರವಾಗಿ ಇವನನ್ನು ನೋಡಿ, ತನ್ನ ಕಾರ್ಯದಲ್ಲಿ ತೊಡಗಿದಳು. ಅಯೂಬಖಾನನಿಗೆ ಈ ನೋಟವೂ ಬಹು ಪ್ರಿಯವಾಗಿ ತೋರಿತು. ದೀರ್ಘ ಸ್ನೇಹದ ಸಹಾನುಭೂತಿಯನ್ನು ಸಹೃದಯ ಮೈತ್ರಿಯಿಂದ ಕೂಡಿದ ಪ್ರೀತಿಯನ್ನು – ಎಷ್ಟೋ ತಿಂಗಳುಗಳಿಂದ ಕೂಡಿದ್ದ ಗೆಳೆತನ ದಲ್ಲಿಯೂ ಕಾಣಲಾಗದಂಥ ಪ್ರೀತಿಯನ್ನು – ಅದು ಹೊರಗೆಡವಿತು. ಕುಡಿನೋಟದಲ್ಲಿದ್ದ ಶಕ್ತಿ ಮಾತಿನಲ್ಲಿ ಬರಬಹುದೇ ಎಂಬ ಮಾತನ್ನು ಅಯೂಬಖಾನ ಅರಿತುಕೊಂಡ. ಆದರೆ ಈ ಕೂಲಿಯ ಹುಡುಗಿ ತನ್ನ ರಾಣಿ ಏಕೆ ಆಗಲಾರಳೆಂಬುದು ಮಾತ್ರ ಅವನಿಗೆ ತಿಳಿಯದಾಯಿತು. ಈದಿನ ಅವನು ಎಲ್ಲರ ಗೆಳೆಯ, ಎಲ್ಲರ ಬಂಧು. ಪ್ರತಿಯೊಬ್ಬ ಗಂಡಸೂ ಹೆಂಗಸೂ ತನ್ನ ಬಗ್ಗೆ ಪ್ರೀತಿಯನ್ನು ತೋರಿಸುವರೆಂಬ ಆಶೆ ಅವನಿಗಿತ್ತು. ಆದುದರಿಂದಲೇ ಅವನು ಇಲ್ಲಿ ನಿರಾಶನಾಗಲಿಲ್ಲ.

ಮೇಸ್ತ್ರಿಗಳು ಅವನೊಡನೆ ಸಲಿಗೆಯಿಂದ ಮಾತನಾಡಲಾರಂಭಿಸಿದರು. ಅಯೂಬಖಾನನಿಗೂ ದಿನವೂ ಅವರೊಡನೆ ಮಾತನಾಡುವುದರಿಂದ ಸಂತೋಷವಾಗುತ್ತಿದ್ದಿತು ಪ್ರತಿದಿನವೂ ಅವನು ಒಂದು ಹೊಸ ಮಾತನ್ನು ಹೃದಯದಲ್ಲಿಟ್ಟುಕೊಂಡು ಮನೆಗೆ ಬರುತ್ತಿದ್ದ. ಬಗಲಲ್ಲಿ ಒಂದು ಬೆಲೆಯುಳ್ಳ ವಸ್ತುವನ್ನು ಬಿಗಿಯಾಗಿ ಹಿಡಿದಿಟ್ಟುಕೊಂಡು ಬರುವಂತೆ ಅದನ್ನು ಪರಮಾತ್ಮನ ಎದುರಿಗೆ ಇಡುತ್ತಿದ್ದ. ಅವನ ಪಾಲಿಗೆ ದೇವರ ಭೇಟಿಯಂತೆ ಆಗಿಬಿಟ್ಟಿದ್ದಿತು. ಅವನು ಜೀವನದಲ್ಲಿ ರಸವನ್ನು ತುಂಬುವುದಕ್ಕಾಗಿ ದಿನವೂ ಹೊಸಮಾತನ್ನು ತರುತ್ತಿದ್ದ ಹೊಸ ನಗುವನ್ನು ನಗುತ್ತಿದ್ದ, ಹೊಸ ಕಂಬನಿಗಳನ್ನು ಸುರಿಸುತ್ತಿದ್ದ ಮೇಸ್ತ್ರಿಗಳೊಡನೆ ಮಾತನಾಡುವಾಗ ದಿನವೂ ಅವನಿಗೆ ಸತ್ಯ–ಪ್ರೀತಿಯಿಂದ ತುಂಬಿದ ಒಂದಿಲ್ಲೊಂದು ಹೊಸಮಾತು ಸಿಕ್ಕೇ ಸಿಗುತ್ತಿದ್ದಿತು ಈ ಹರೆಯದ ಹುಡುಗಿಯ ಕಣ್ಣುಗಳಲ್ಲಿ ಸತ್ಯಪ್ರೀತಿಯ ಭಾಂಡಾರವೇ ಇದ್ದಿತು. ಅದು ಆಯೂಬಖಾನನ ಹೃದಯದಲ್ಲಿ ಹೊಸ ಆಸೆಯನ್ನು ಹುಟ್ಟಿಸುತ್ತಿದ್ದಿತು. ಅವನು ದಿನವೂ ಪರಮಾತ್ಮನನ್ನು ಪ್ರಾರ್ಥಿಸಿ, ಅವನೆದುರಿಗೆ ತನ್ನ ಹೃದಯದ ಪ್ರತಿಯೊಂದು ಮಾತನ್ನು ಇಡುವಾಗ ಅವನಿಗೆ ತನ್ನಾಶೆ ಫಲಿಸುವ ಎಲ್ಲ ಲಕ್ಷಣಗಳು ಕಾಣಿಸುತ್ತಿರುವಂತೆ ತೋರುತ್ತಿದ್ದಿತು.

ಮನೆ ತಯಾರಾಗಿಬಿಟ್ಟಿದ್ದಿತು ಒಳಗೆ ಮೇಸ್ತ್ರಿಗಳು ಗೋಡೆಗಳಿಗೆ ಸುಣ್ಣ ಹಚ್ಚಿಸುತ್ತಿದರು. ಅಯೂಬಖಾನ ಮನೆಯನ್ನು ನೋಡಲು ಬಂದಿದ್ದ. ಅವನ ಅತ್ಯಂತ ಸ್ನೇಹ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಮೇಸ್ತ್ರಿ ಬಳಿಗೆ ಬಂದು "ಹುಜೂರ್, ಮದುವೆ ಯಾವಾಗ?" ಎಂದು ಕೇಳಿದ.

"ಏಕೆ?"

"ಮನೆಯಲ್ಲಿ ಐದು ಕೋಣೆಗಳಿವೆ ಅವುಗಳಲ್ಲಿ ಯಾರು ಇರಬೇಕು? ತಾವಂತೂ ಹಗಲೂ ರಾತ್ರಿ ನಮಾಜು ಮಾಡುತ್ತಿರುತ್ತೀರಿ."

ಆಯೂಬಖಾನ ನಸುನಕ್ಕನಾಗಲಿ ಈ ಮಾತಿಗೆ ಉತ್ತರ ಕೊಡಲಿಲ್ಲ. ಅವನ ಹೆಂಡತಿ ತೀರಿ ಐದು ವರ್ಷಗಳಾಗಿತ್ತು ಆಗ ಖಾನನು ವಿಲಾಸದಲ್ಲಿ ಮಗ್ನನಾಗಿದ್ದುದರಿಂದ ಎರಡನೆಯ ಮದುವೆ ಮಾಡಿಕೊಳ್ಳುವ

ವಿಚಾರವೂ ಬಂದಿರಲಿಲ್ಲ. ಇವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂದು ಬಯಸುವ ಯಾವ ತಂದೆಯೂ ಇರಲಿಲ್ಲ. ಮೇಸ್ತ್ರಿಯ ಮಾತಿನ ಕಡೆಗೆ ಗಮನ ಕೊಡದೆ ಉತ್ತರವನ್ನೇನೋ ಖಾನ ಮುಂದೆ ಹಾಕಿದ. ಆದರೆ ಮೇಸ್ತ್ರಿಯ ಆ ಮಾತು ಮಾತ್ರ ಅವನ ಹೃದಯದಲ್ಲಿ ಭದ್ರವಾಗಿ ಸೇರಿಕೊಂಡುಬಿಟ್ಟಿತು. ಕೋಣೆಗಳ ಕಡೆಗೆ ಇನ್ನೊಂದು ಸಲ ನೋಡಿದ; ನೋಡುತ್ತ ಯೋಚಿಸಿದ — 'ಮೇಸ್ತ್ರಿಯ ಮಾತು ನಿಜವೇ ಸರಿ. ಮನೆ ಭಣಭಣ ಬರಿದಾಗಿ ಇರುತ್ತದೆ. ಎರಡನೆಯ ಮದುವೆಯನ್ನು ಮಾಡಿಕೊಂಡರೆ ತಪ್ಪೇನು? ವಿಲಾಸವನ್ನು ಬಿಟ್ಟೇ ಬಿಟ್ಟಿದ್ದೇನೆ . . . . ಮೊದಲನೆಯ ಹೆಂಡತಿಗೆ ನಾನು ಬಹಳ ಕಷ್ಟ ಕೊಟ್ಟೆ. ಅದಕ್ಕೆ ಪ್ರತಿಯಾಗಿ ಎರಡನೆಯ ಹೆಂಡತಿಯನ್ನು ಸುಖವಾಗಿ ಇಟ್ಟರೆ . . . .'

ಅವನಿಗೆ ಆ ಹರೆಯದ ಕೂಲಿ ಹುಡುಗಿಯ ನೆನಪು ಆಯಿತು. ಅಯೂಬಖಾನನೊಂದಿಗೆ ಈಗ ಅವಳಿಗೆ ಬಹಳ ಸಲಿಗೆ. ಬಹಳವಾಗಿ ಮಾತನಾಡುತ್ತಿದ್ದಳು. ಅವನಿಗೆ ಆಕೆಯ ಮೊದಲ ನೋಟವನ್ನು ಮರೆಯಲಾಗಲಿಲ್ಲ. ತನ್ನ ಹೃದಯದಲ್ಲಿ ಆ ಸಾಮಾನ್ಯ ಕೂಲಿಯ ಹುಡುಗಿಯನ್ನು ತುಂಬಾ ಆದರಿಸುತ್ತಿದ್ದ. ಆದರೆ ಈದಿನ ಮದುವೆಯ ಮಾತು ಬಂದು ಅದರ ಬಣ್ಣವನ್ನೇ ತಿರುಗಿಸಿಬಿಟ್ಟಿತು. ಈ ರೀತಿ ಮಾಡುವುದು ಒಳ್ಳೆತಲ್ಲ. ತನ್ನ ಮನದ ಭಾವನೆ ಹೀಗಿಲ್ಲವೆಂದು ತನಗೆ ತಾನೇ ಹೇಳಿಕೊಳ್ಳುತ್ತಿದ್ದ. ಅವನ ಕಾಲುಗಳು ಅವನಿಗೆ ತಿಳಿಯದಂತೆಯೇ ಆ ಹುಡುಗಿ ಕೆಲಸ ಮಾಡುವ ಕೋಣೆಗೆ ಅವನನ್ನು ಕರೆದುಕೊಂಡು ಹೋದವು. ಹೊಸ ಆಕಾಂಕ್ಷೆಗಳ ಜತೆಗೆ ಹೊಸ ಜೀವನದ ಆಶೆ ಹುಟ್ಟಿತು. ಕೂಲಿಯ ಹುಡುಗಿ ತನ್ನ ಹೆಂಡತಿಯಾದರೆ ಹೇಗೆ ಕಾಣುವಳೆಂಬುದನ್ನು ನೋಡಲು ಅಯೂಬಖಾನನ ಕಣ್ಣು ಬಯಸಿದವು. ಕೋಣೆಯೊಳಗೆ ಹೋಗಿ ಅವನು ಮೇಸ್ತ್ರಿಗಳ ಕೂಡ ಮಾತನಾಡತೊಡಗಿದ. ತನ್ನ ಗಾಬರಿಯನ್ನು ದೂರ ಮಾಡಿಕೊಳ್ಳುವುದಕ್ಕಾಗಿ, ತಾನು ಆ ಹುಡುಗಿಯ ಸಲುವಾಗಿ ಬಂದಿಲ್ಲವೆಂದು ಮೇಸ್ತ್ರಿಗಳಿಗೆ ಮಂದಟ್ಟು ಮಾಡಿಕೊಡುವುದಕ್ಕಾಗಿ. ಆದರೆ ಈ ಉಪಾಯಗಳು ಬಹಳ ಹೊತ್ತು ಸಾಗಲಿಲ್ಲ. ಸ್ವಲ್ಪ

ಹೊತ್ತು ಮಾತನಾಡಿದ ಬಳಿಕ ಸುಮ್ಮನೆ ನಿಂತ. ಅವನ ಕಣ್ಣೆದುರಿಗೆ ಹೊಸ ಮನೆ, ಹೊಸ ಜೀವನದ ಚಿತ್ರ. ತಾನು ಪ್ರಾರ್ಥನೆ ಮಾಡುತ್ತ ಕುಳಿತಾಗ ತನ್ನ ಹೆಂಡತಿ ಬಂದು ನೋಡಿ ಹೋದ ಹಾಗೆ, ತಾನು ಅವಳನ್ನು ಪ್ರೀತಿಯಿಂದ ನೋಡುತ್ತಿರುವ ಹಾಗೆ, ಇಬ್ಬರೂ ಒಟ್ಟಿಗೆ ಕೋಣೆಯಲ್ಲಿ ಕುಳಿತ ಹಾಗೆ, ಅವಳು ತನ್ನ ಎದುರಿಗೆ ಬೇಕಾದ ವಸ್ತುಗಳನ್ನು ತಂದಿಡುತ್ತಿರುವ ಹಾಗೆ, ಇಬ್ಬರೂ ಉಪವನದಲ್ಲಿ ಕುಳಿತು ಮುಳುಗುತ್ತಿರುವ ಸೂರ್ಯನನ್ನು ನೋಡುತ್ತಿರುವ ಹಾಗೆ, ಇಬ್ಬರೂ ಹೆಗಲ ಮೇಲೆ ಕೈ ಕೈ ಹಾಕಿಕೊಂಡು ಕುಳಿತಿರುವ ಹಾಗೆ— ಚಿತ್ರಗಳು ಒಂದರ ಹಿಂದೊಂದು ಬಂದು ಹೋದಂತೆ ಅವನಿಗೆ ಕಾಣಿಸಲಾರಂಭಿಸಿದ್ದಿತು. ಅಯೂಬಖಾನ ಪುನಃ ಆ ಹರೆಯದ ಹುಡುಗಿಯ ಕಡೆಗೆ ನೋಡಿ ಈ ಶಾಂತಿ ಹೇಗಿದ್ದೀತು ಎಂದುಕೊಳ್ಳುತ್ತಿದ್ದ. ಕೂಲಿಯವಳ ಸಾದಾತನ, ಅವಳ ನಿಷ್ಕಪಟ ಸ್ವಭಾವ, ಅವಳ ಪ್ರೀತಿ ತುಂಬಿದ ನೋಟಗಳು! ಮನೆಯನ್ನು ಅಲಂಕರಿಸುವುದಕ್ಕೆ ಜೀವನವನ್ನು ಸುಖವಾಗಿಡುವುದಕ್ಕೆ ಇವುಗಳಿಗಿಂತಲೂ ಹೆಚ್ಚಿನ ವಸ್ತುಗಳು ಏಕೆ ಬೇಕು? ಬಡವರ ಗೆಳೆತನವೊಂದೇ ಈ ಜೀವನವನ್ನು ಚಿರವಾಗಿಡಲು ತಕ್ಕ ಉಪಾಯ. ಇದನ್ನುಳಿದು ಬೇರೆ ಯಾವ ಉಪಾಯವಿದೆ? ಯಾವ ರೀತಿಯಿಂದಾದರೂ ಸರಿಯೆ, ಈಗ ತಾನು ಒಂದು ಗಳಿಗೆ ಅನುಭವಿಸಿದ ರಮ್ಯಜೀವನದವರೆಗೆ ಹೋಗಿ ಮುಟ್ಟಬೇಕೆಂದೂ ತನ್ನ ಆಕಾಂಕ್ಷೆಗಳನ್ನು ಪೂರೈಸಿಕೊಂಡು ಹೃದಯದ ಭಾರವನ್ನು ಹಗುರಾಗಿಸಿಕೊಳ್ಳಬೇಕೆಂದೂ ಅಯೂಬಖಾನ ಇಚ್ಛಿಸಿದ. ಮನೆಗೆ ಹೋದ ಮೇಲೆ ಊಟ ಮಾಡಿ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡು ನಮಾಜು ಮಾಡಲು ಕುಳಿತ. ಮನಸ್ಸು ನಮಾಜಿಗೆ ಒಪ್ಪಲಿಲ್ಲ. ಏನೋ ಆಲಸ್ಯವುಂಟಾದಂತೆ ಅನಿಸಿತು. ದಿನವೂ ಹರ್ಷದಿಂದ ನಮಾಜು ಮಾಡುವವನು ಈ ದಿನ ಬಲಾತ್ಕಾರದಿಂದ ಮನಸ್ಸನ್ನು ಒಪ್ಪಿಸಿ ನಮಾಜು ಮಾಡುವ ಪ್ರಸಂಗ ಬಂದಿತು. ಹಾಗೂ ಹೀಗೂ ನಮಾಜೇನೋ ಮಾಡಿದನಾಗಲಿ ತನ್ನ ಸ್ಥಿತಿ ಹೀಗಾದುದನ್ನು ನೋಡಿ ಅವನಿಗೆ ಕೆಡಕೆನಿಸಿತು.

"ಅಲ್ಲ, ನನಗೆ ಆದದ್ದಾದರೂ ಏನು! ಇನ್ನು ನಾನು ಪರಮಾರ್ಥ

ಮಾರ್ಗದಿಂದ ಹಿಂತಿರುಗುವೆನೆ ?" ಗಾಬರಿಯಿಂದ ತನ್ನನ್ನು ತಾನೇ ಪ್ರಶ್ನಿಸಿಕೊಂಡ. ಇದರೆ ಅದಕ್ಕೆ ಎಲ್ಲಿಂದಲೂ ಉತ್ತರ ದೊರೆಯಲಿಲ್ಲ. ಕೊನೆಗೆ ಅವನು ಬೇಸತ್ತು ನಮಾಜಿನ ಹಾಳೆಗಳನ್ನು ಅಲ್ಲಿಯೇ ಬಿಟ್ಟು ಮಂಚದ ಮೇಲೆ ಮಲಗಿದ. ನಿಜವಾಗಿಯೂ ಅವನಿಗೆ ತನ್ನ ಮದುವೆಯ ವಿಚಾರವಾಗಿ ಬಹಳ ಯೋಚನೆಯಾಗಿತ್ತು ಅವನನ್ನು ಪ್ರಾರ್ಥನೆ ಯಿಂದ ಆರ್ದ್ರವಾದ ರಸಪೂರ್ಣ ನಯನಗಳು – ಆ ಕೂಲಿಯ ಹುಡು ಗಿಯ ಕಣ್ಣುಗಳು ಅವನನ್ನು ತಮ್ಮೆಡೆಗೆ ಕರೆಯುತ್ತಿದ್ದುವು ಅಯೂಬ ಖಾನನು ವಿಲಾಸವನ್ನು ತಾನಾಗಿಯೇ ಬಿಟ್ಟಿದ್ದ. ಗಂಡಸನ್ನು ಹೆಂಗ ಸನ್ನು ಮರುಳುಗೊಳಿಸಿ ಮೂರ್ಖನನ್ನಾಗಿ ಮಾಡುವ, ಸುಖ ಕೊಡುವ ಪ್ರೀತಿಯನ್ನು ತ್ಯಜಿಸಿದ್ದ. ಹೀಗಿರಲು ದೇವರಿಗೂ ಅವನ ಸೇವಕರಿಗೂ ನಡುವೆ ಈ ಪ್ರೀತಿಯ ಪರದೆ ಹೇಗೆ ಬಂದು ಬಿದ್ದಿತು ? ಅಯೂಬಖಾನ ತನ್ನ ಭಾವೀ ಜೀವನದ ಚಿತ್ರವನ್ನು ಚಿತ್ರಿಸುವುದರಲ್ಲಿ ತಲ್ಲೀನನಾಗಿದ್ದುದ ರಿಂದ ಈ ತೊಡಕಿನಿಂದ ಆದಷ್ಟು ದೂರವಾಗಿರಲು ಇಚ್ಛಿಸಿದನಾಗಲಿ ಅವನ ಮನದಲ್ಲಿ ಒಂದು ವಿಚಾರ ಮೂಡಿ, ಮುಳ್ಳಿನಂತೆ ಚುಚ್ಚುತ್ತಿದ್ದಿತು. ತಾನು ಬಯಸುವ ಜೀವನ ಪರಮಾತ್ಮನಿಗೆ ಇಷ್ಟವಿಲ್ಲ. ಬರಿಯ ವಿಚಾರವೇ ಪ್ರಾರ್ಥನೆಯಿಂದ ಇಷ್ಟು ದೂರ ತನ್ನನ್ನು ಒಯ್ದ ಮೇಲೆ ನಿಜವಾದ ಜೀವನ ಎಲ್ಲಿಯ ವರೆಗೆ ನೆಳೆದೊಯ್ದೀತೋ ಯಾರು ಬಲ್ಲರು ?

ಇದರ ಪರಿಣಾಮ ಆಯೂಬಖಾನನ ಪ್ರಕೃತಿಯ ಮೇಲೆ ಹೆಚ್ಚಾಗಿ ಆಯಿತು. ಅವನಿಗೆ ಏನೂ ತೋಚದಂತಾಯಿತು. ಜೀವನ ಮಸು ಕಾಗಿ ಕಾಣಿಸಲಾರಂಭಿಸಿತು. ಅವನು ಕಲ್ಪಿಸಿಕೊಂಡಿದ್ದ ಚಿತ್ರಗಳೂ ಹೊಗೆಯಾಗಿ ಹಾರಿಹೋದುವು ಅವನ ಹೃದಯದಲ್ಲಿ ಕೂಲಿಯ ಹುಡುಗಿಯೊಡನೆ ಮದುವೆ ಮಾಡಿಕೊಳ್ಳಬೇಕೊ ಬಾರದೊ ಎಂಬ ಪ್ರಶ್ನೆ ಒಂದೇ ಎದ್ದು ನಿಂತಿತು ಮದುವೆಯಾಗುವುದರಲ್ಲಿ ಯಾವ ದೋಷವೂ ಇಲ್ಲವೆಂದು ಅವನ ಅಭಿಪ್ರಾಯ ಆದರೆ ಪುನಃ ಯೋಚಿಸಿದ — ಜನರು ಏನು ಅನ್ನುವರು ? ಬಂಧುಬಳಗದವರ, ಮಿತ್ರರ ಬಾಯಿಂದ ದೇವರೇ ಕಾಪಾಡಬೇಕು. ಅವರು ನಿರ್ದೋಷಿಯನ್ನೇ ದಿನವೂ ಗಲ್ಲಿಗೇರಿಸು ತ್ತಾರೆ. ಇಂಥ ಕೆಲಸ ಮಾಡಿದರಂತೂ ತೀರಿತು — ಅವನನ್ನು ತೀವ್ರ

ವಾಗಿ ಅಲ್ಲಗಳೆಯುತ್ತಾರೆ ಹೆಸರನ್ನು ಕೆಡಿಸುತ್ತಾರೆ. ನೆಂಟರನ್ನು ದೇವರು ಇದಕ್ಕಾಗಿಯೇ ಹುಟ್ಟಿಸಿದ್ದಾನೆ. ಅದಿರಲಿ, ಕೂಲಿಯವಳ ಕೂಡ ವಿವಾಹವಾದುದನ್ನು ಕೇಳಿ ಯಾವನು ಸುಮ್ಮನಿರುವನು? ಬೀದಿ ಬೀದಿಯಲ್ಲಿ ನಗೆಯಾಡುವರು ಆಳುಗಳೇ ಈಗ ದೀನರಾಗಿದ್ದವರು ನಾಳೆ ಹಲ್ಲು ಕಿರಿಯುವರು. ಆ ಹುಡುಗಿ ನಾಳೆ ಕುರೂಪಿಯಾಗುವಳು. ತಾನು ಅತ್ಯಂತ ಮೂರ್ಖ ಮನುಷ್ಯನಾಗಬೇಕಾದುದೆ. ಜನರ ಅಭಿಪ್ರಾಯವನ್ನು ತಿರುಗಿಸಲು ದೊಣ್ಣೆ ಹಿಡಿದುಕೊಂಡು ತಿರುಗಾಡಬೇಕೇನು? ಅಯೂಬಖಾನನ ವಿಚಾರ ತರಂಗಗಳು ಹೀಗೆಯೆ ಅದೆಷ್ಟೋ ಹೊತ್ತಿನ ವರೆಗೆ ಸಾಗಿದ್ದವು." ಆಳುಮಗನು ಚಹಾ ತರಲು ತಡಮಾಡಿದುದನ್ನು ನೋಡಿ ಅವನಿಗೆ ಮದುವೆಯ ಪರಿಣಾಮ ಕೆಡುಕಾಗದೆ ಇರದೆಂಬ ಭರವಸೆಯುಂಟಾಯಿತು

ಸಾಯಂಕಾಲದಿಂದ ಮಧ್ಯರಾತ್ರಿಯ ತನಕ ಅಯೂಬಖಾನನ ಪ್ರಕೃತಿ ಚೆನ್ನಾಗಿರಲಿಲ್ಲ. ಘಾಸಿಯಾಗಿದ್ದಿತು ಒಮ್ಮೊಮ್ಮೆ ಆಕಾಂಕ್ಷೆ ಅವನ ಎದುರಿಗೆ ಹೊಸ ಜೀವನವನ್ನು ದಿಲ್‌ರುಬಾದ ರೂಪದಲ್ಲಿ ತಂದು ನಿಲ್ಲಿಸುತ್ತಿದ್ದಿತು. ಒಮ್ಮೊಮ್ಮೆ ಜನರು ತನ್ನನ್ನು ನೋಡಿ ನಗುತ್ತಿರುವ ದೃಶ್ಯ ಕಾಣಿಸುತ್ತಿದ್ದಿತು. ನಮಾಜು–ಪ್ರಾರ್ಥನೆಯಲ್ಲಿ ಮಗ್ನನಾಗಿ ಇದೆಲ್ಲವನ್ನೂ ಮರೆಯುವ ಸಂಭವವಿರಲಿಲ್ಲ. ಇವನ ಮನಸ್ಸು ಇದನ್ನು ಮರೆಯಲು ಒಪ್ಪದು. ಕೊನೆಗೆ ನಿದ್ರೆ ಅವನನ್ನು ವಿಚಾರತರಂಗಗಳಿಂದ ಮುಕ್ತನನ್ನಾಗಿ ಮಾಡಿತು.

ಮರುದಿನ ಮನೆಯನ್ನು ನೋಡಲು ಹೋಗುವ ಹೊತ್ತು ಬಂದಿತು. ಆಗ ಅಯೂಬಖಾನನ ಪ್ರಕೃತಿ ವಿಚಿತ್ರವಾಗಿದ್ದಿತು.

"ಮೊದಲು ಹೊಸ ಜೀವನದ ರೀತಿ ನೀತಿಗಳನ್ನು ನಿರ್ಧರಿಸಿಕೊಳ್ಳಬೇಕು" ಎಂದು ಅವನು ಯೋಚಿಸಿದ. "ಈ ಮನೆ ಮುಂತಾದುವೆಲ್ಲ ಮಾಯೆ. ಅಲ್ಲಿಗೆ ಹೋಗಿ ಏನು ಮಾಡುವುದು?" ಆದರೆ ಹೊಸ ಜೀವನದ ಸೊಗಸು ಬರುವಂತಿರಲಿಲ್ಲ. ಆದುದರಿಂದ ಮನಸ್ಸಮಾಧಾನಕ್ಕಾಗಿ ಅವನು ಹೋದ.

ಮನೆಯೊಳಗೆ ಮೇಸ್ತ್ರಿಗಳಲ್ಲಿ ಜೋರಾಗಿ ವಾದವಿವಾದ ನಡೆದಿದ್ದಿತು.

ಅಯೂಬಖಾನನನ್ನು ನೋಡುತ್ತಲೇ ಮುದುಕ ಮೇಸ್ತ್ರಿ ಬಾಗಿ, ಸಲಾಂ ಮಾಡಿ, "ಹುಜೂರ್! ಆ ಚೆಲುವೆ ಓಡಿಹೋದಳು. ಒಂದೂವರೆ ದಿನದ ಕೂಲಿಯನ್ನು ಕೂಡ ಬಿಟ್ಟು ಹೊರಟು ಹೋದಳು" ಎಂದ.

"ಯಾರು? ಯಾವ ಚೆಲುವೆ?"

ಅಯೂಬಖಾನನಿಗೆ ಆ ಹರೆಯದ ಹುಡುಗಿಯ ಹೆಸರು ಗೊತ್ತಿದ್ದಿತು. ಈ ಸುದ್ದಿಯನ್ನು ಕೇಳಿ ಅವನಿಗೆ ಗಾಬರಿಯಾಯಿತು. ಯಾವ ಪ್ರಶ್ನೆಯೂ ಇದರ ಹೊರತು ಅವನಿಗೆ ಹೊಳೆಯಲಿಲ್ಲ.

"ಅದೇ, ಅವಳೇ ಬಕಪಕ್ಷಿಯಂತೆ ಕಣ್ಣಿದ್ದವಳು. ತಮಗೆ ಅವಳ ಗುರುತು ಇದೆ."

"ಏಕೆ? ಹೇಗೆ ಓಡಿಹೋದಳು?"

"ನಮಗೇನು ಗೊತ್ತು ಹುಜೂರ್? ಈ ಮಂಗಲ ಹೇಳುತ್ತಾನೆ. ಅವಳು ಯಾವನನ್ನೊ ಪ್ರೀತಿಸುತ್ತಿದ್ದಳಂತೆ. ಅವನನ್ನೇ ಕೇಳಿರಿ."

ಮೇಸ್ತ್ರಿ ಮಂಗಲನು ಮೆಲ್ಲನೆ ಹೇಳಿದ. "ಹುಜೂರ್! ಯಾವಾಗ ಇಲ್ಲಿಗೆ ಬಂದಳೊ ಆಗಿನಿಂದ ಮಿರ್ಝಾನ ಕೂಡ ಇರಲಾರಂಭಿಸಿದಳು. ಅವನ ಕೂಡ ಹೋಗಿದ್ದಾಳೆ. ಅವನು ಆಕೆಗೆ ದಿನವೂ ಹೇಳುತ್ತಿದ್ದ - ಕಾನ್‌ಪೂರದಲ್ಲಿ ನಮ್ಮ ಮನೆಯಿದೆ. ನನ್ನ ಕೂಡ ಅಲ್ಲಿಗೆ ಓಡಿ ಬಾ. ನಾನು ಕೂಲಿ ಮಾಡುತ್ತೇನೆ, ನೀನು ರೊಟ್ಟೀ ಸುಡು" ಎಂತ. ಅವಳಿಗೆ ಅದೆಲ್ಲಾ ಏನು ಗೊತ್ತು? ತಂದೆಯಿಲ್ಲ, ತಾಯಿಯಿಲ್ಲ. ಏನು ಕೇಳಿದರೂ ತನ್ನ ಮನಸ್ಸನ್ನೇ ಕೇಳಬೇಕು. ಅದು ಒಪ್ಪಿಗೆ ಕೊಟ್ಟರೆ ತೀರಿತು, ಹೊರಡುವುದು. ಕಾನ್‌ಪೂರದ ಹೆಸರು ಕೇಳಿ ಅವನ ಕೂಡ ಓಡಿಹೋದಳು.

"ಕೂಲಿಯನ್ನೇಕೆ ಬಿಟ್ಟು ಹೋದಳು?"

ಮಂಗಲ ಸ್ವಲ್ಪ ಕೋಪದಿಂದ "ಇದರ ವಿಷಯ ನಮಗೇನು ಗೊತ್ತು ಹುಜೂರ್!" ಎಂದ.

ಮುದುಕ ಮೇಸ್ತ್ರಿ "ಕಾನ್‌ಪೂರಕ್ಕೆ ಗಾಡಿಯು ಇಂದೇ ಹೊರಡುತ್ತದೆ. ಮುಂದೆ ಎಂದೂ ಹೋಗುವುದಿಲ್ಲ! ಎಂದು ಅವರು ಹೇಳುತ್ತಿದ್ದರು" ಎಂದ.

ಅಯೂಬಖಾನನ ತಲೆ ತಿರುಗಲಾರಂಭಿಸಿತು. ಕಾಯಿಲೆಯಾದವರ ಮೋರೆಯಲ್ಲಿ ಕಾಣುವ ನಗೆ ಅವನ ಮುಖದಲ್ಲಿ ಬಂದಿತು. ಏನೂ ಮಾತನಾಡದೆ ಮನೆಯಿಂದ ಹೊರಗೆ ಬಂದು ಮೋಟಾರಿನಲ್ಲಿ ಕುಳಿತ.

"ನಡೆ, ಮನೆಗೆ ನಡೆ. ಅತ್ತಿತ್ತ ತಿರುಗಾಡಿಸುತ್ತ ಮನೆಗೆ ಗಾಡಿ ಹೊಡೆ" ಎಂದು ಡ್ರೈವರಿಗೆ ಹೇಳಿದ.

ಮೋಟಾರು ಅಂಗಳವನ್ನು ಬಿಟ್ಟು ಹೊರಟಿತು. ಅಯೂಬಖಾನ ತಿರುಗಿ ಹೊಸ ಮನೆಯ ಕಡೆಗೆ ನೋಡಲೇ ಇಲ್ಲ.

# ಗುಜರಾತಿ ಸಾಹಿತ್ಯ

ಗುಜ್ಜರಾತಿನ ಸಾಹಿತ್ಯ ಚರಿತ್ರೆ ೧೨ನೆಯ ಶತಮಾನದಿಂದ ಆರಂಭ ವಾಗುತ್ತದೆ. ಸಾಲಿಭದ್ರನ (೧೧೮೫) 'ಭರತೇಶ್ವರ ಬಾಹುಬಲ ರಸ'ವೇ ಮೊದಲನೆಯ ಹಳೆಯ ಗುಜ್ಜರಾತಿ ಕಾವ್ಯವೆಂದು ಪರಿಗಣಿಸಲಾಗಿದೆ. ಇದಕ್ಕೆ ಮೊದಲು ಹೇಮಚಂದ್ರ, ಶ್ರೀಪಾಲ, ರಾಮಚಂದ್ರ ಮೊದಲಾದ ಕವಿಗಳು ಸಂಸ್ಕೃತ ಪ್ರಾಕೃತಗಳಲ್ಲಿ ಕಾವ್ಯಗಳನ್ನು ರಚಿಸಿದ್ದರು ಗುಜ್ಜರಾತಿ ನಲ್ಲಾದ ಜೈನಧರ್ಮದ ವಿಸ್ತಾರದಿಂದ ಧಾರ್ಮಿಕ ಗ್ರಂಥಗಳಿಂದಲೇ ಸಾಹಿತ್ಯ ಚರಿತ್ರೆ ಆರಂಭವಾಗುತ್ತದೆ ವೀರಕಾವ್ಯ ಪದ್ಮನಾಭನಿಂದ (೧೪೫೫) ಆರಂಭವಾಯಿತು. ೧೪ನೆಯ ಶತಮಾನದ ಆರಂಭದಲ್ಲಿ ರಮಾ ನಂದನ ಪ್ರಭಾವದಿಂದ ವೈಷ್ಣವಧರ್ಮ ಪ್ರಸಾರ ಆರಂಭವಾಗಿ ದೇಶ ಭಾಷೆಗೆ ಪ್ರಾಧಾನ್ಯ ದೊರೆಯಿತು. ರಮಾನಂದನ ಶಿಷ್ಯನಾದ ಕಬೀರ್ ಸಂಸ್ಕೃತ ಪ್ರೇಮಿಗಳನ್ನು ಕುರಿತು 'ಪಂಡಿತರು ಸಂಸ್ಕೃತದಲ್ಲಿಯೇ ಮಾತನಾಡುತ್ತಾರೆ. ಭಾಷೆ (ದೇಶಭಾಷೆ) ಯನ್ನು ಪಯೋಗಿಸುವವರನ್ನು ದಡ್ಡರೆಂದು ಕರೆಯುತ್ತಾರೆ. ಪಂಡಿತರು ಹೊಗಳುವುದು ಸಂಸ್ಕೃತ ವೊಂದನ್ನೇ. ಭಾಷೆಯ ಮೂಲಕ ಪ್ರಚೋದನಗೊಂಡ ಭಕ್ತಿ ಶಕ್ತಿಯ ನ್ನಿತ್ತು ಮೋಕ್ಷಕ್ಕೆ ದಾರಿ ಮಾಡಿಕೊಡುತ್ತದೆ. ಸಂಸ್ಕೃತ ಭಾವಿಯ ನೀರಿದ್ದ ಹಾಗೆ, ಭಾಷೆ ಹರಿಯುವ ನದಿಯಿದ್ದ ಹಾಗೆ. ಸದ್ಗುರು ಭಾಷೆಯನ್ನು ಪ್ರೀತಿಸಿ, ಸನ್ಮಾರ್ಗವನ್ನು ನಿರ್ದೇಶಿಸುತ್ತಾನೆ' ಎಂದು ಹೇಳಿದ್ದಾನೆ. ಈ ವೇಳೆಗಾಗಲೆ ಸಂಸ್ಕೃತ ದೇಶಭಾಷೆಯ ತಿಕ್ಕಾಟವಾರಂಭವಾಗಿತ್ತು. ಭಾಷೆಯ ದೀವಿಗೆಯನ್ನು ಎತ್ತಿ ಹಿಡಿದವರು ಸಾಧ್ವಿ ಮೀರಾಬಾಯಿ (೧೧೧೦) ಮತ್ತು ನರಸೀ ಮೇಥಾ (೧೫೫೦-೧೫೮೦). ೧೭ನೆಯ ಶತ ಮಾನದಲ್ಲಿ ಪ್ರೇಮಾನಂದ ಹಳೆಯ ಆಖ್ಯಾನಗಳನ್ನೆತ್ತಿಕೊಂಡು ಕಾವ್ಯ ಗಳನ್ನು ಬರೆದ. ಇವನ ಅನಂತರ ಹಳೆಯ ಗುಜ್ಜರಾತಿ ಮಾಯವಾಗುತ್ತ ಬಂತು. ೧೮ನೆಯ ಶತಮಾನದಲ್ಲಿ ದಯಾರಾಮ ಅದನ್ನು ಪುನ ರುಜ್ಜೀವನಗೊಳಿಸಲು ಸಾಹಸ ಮಾಡಿದ.

ಇಂಗ್ಲಿಷ್ ಪ್ರಭುತ್ವ ಆರಂಭವಾದ ಮೇಲೆ ಆಧುನಿಕ ಸಾಹಿತ್ಯ ಯುಗ ಆರಂಭವಾಯಿತು. ನರ್ಮದಾಶಂಕರ್ ಲಾಲಾ ಶಂಕರನೇ (೧೮೩೩–೧೮೮೬) ಆಧುನಿಕ ಸಾಹಿತ್ಯದ ಆಚಾರ್ಯನೆಂದು ಪರಿಗಣಿಸಲ್ಪಟ್ಟಿದ್ದಾನೆ. ಈ ಕಾಲದಲ್ಲಿ ನವಲ್‌ರಾಮ್ ಲಕ್ಷ್ಮೀರಾಮ್, ರಣಛೋಡ ಭಾಯ್ ಉದಯರಾಮ್, ಮಹೀಪತ್ ರಾಮ್ ರೂಪರಾಮ್, ನಂದಾಶಂಕರ ತುಳಜಾರಾಮ್, ಬೋಲಾನಾಥ್ ಸಾರಾಭಾಯ್ ಮೊದಲಾದವರು ಕತೆ, ಕಾದಂಬರಿ, ನಾಟಕ, ವಿಮರ್ಶೆಗಳನ್ನು ಬರೆಯಲಾರಂಭಿಸಿದರು. ೧೮೮೫ರಲ್ಲಿ ಭಾರತರಾಷ್ಟ್ರೀಯ ಮಹಾಸಭೆ ಉದಯವಾಗಲು ಗುಜರಾತಿನಲ್ಲಿ ಪ್ರಾಚೀನ ವಿದ್ಯಾ ಪುನರುಜ್ಜೀವನದ ಒಂದು ಬಿರುಗಾಳಿ ಎದ್ದಿತು. ೧೯೧೬ರಿಂದ ಗಾಂಧೀ ಯುಗ ಆರಂಭವಾಯಿತು. ಗಾಂಧೀಜಿಯವರ ಗದ್ಯಶೈಲಿ ಗುಜರಾತಿನ ಸಾಹಿತ್ಯಕ್ಕೆ ಹೊಸ ಜೀವಕಳೆಯನ್ನು ತಂದಿತ್ತಿತು ಅವರ ಮೇಲ್ಪಂಕ್ತಿಯನ್ನನುಸರಿಸಿ ಕಾಕಾ ಕಾಲೇಲಕರ್ ಅವರು ಅನೇಕ ಉತ್ತಮ ಸಾಹಿತ್ಯ ಕೃತಿಗಳನ್ನು ನಿರ್ಮಾಣ ಮಾಡಿದರು. ಶುದ್ಧ ಸಾಹಿತ್ಯ ದೃಷ್ಟಿಯಿಂದ ಆಧುನಿಕ ಗುಜರಾತಿ ಸಾಹಿತ್ಯಾಚಾರ್ಯರೆಂದು ಕನ್ಹಯಲಾಲ ಮುನಿಷಿಯವರನ್ನು ಕರೆಯಬೇಕಾಗುತ್ತದೆ. ನಾಟಕ, ಕತೆ, ಕಾದಂಬರಿ, ಇತಿಹಾಸ, ಜೀವನ ಚರಿತ್ರೆ ಎಲ್ಲದರಲ್ಲಿಯೂ ಮುನಿಷಿಯವರದು ಸಿದ್ಧ ಹಸ್ತ. ಸ್ವತಂತ್ರ ಮಾರ್ಗಗಳನ್ನು ಹುಡುಕಿಕೊಂಡು ಪ್ರಸಿದ್ಧರಾಗಿರುವರೆಂದರೆ ಶ್ರೀಮತಿ ಲೀಲಾವತಿ ಮುನಿಷಿ, ಗೌರಿ ಶಂಕರ ಗೋವರ್ಧನರಾಮ್ ಜೋಶಿ, ಶ್ರೀಮತಿ ಜ್ಯೋತ್ಸ್ನಾ ಶುಕ್ಲ, ರಮಣಲಾಲಾ ವಸಂತಲಾಲ್ ದೇಸಾಯಿ, ರಾಮನಾರಾಯಣ ವಿಶ್ವನಾಥ ಫಾಟಕ, ಧನಸುಖಲಾಲ ಕೃಷ್ಣಲಾಲ ಮೇಧಾ, ಕೃಷ್ಣಸಿಂಗ್ ಚಾವ್ಡಾ.

—೨—

## ಶ್ರೀಮತಿ ಸೌ. ಲೀಲಾವತಿ ಮುನಿಷಿ

ಸೌ. ಲೀಲಾವತಿ ಮುನಿಷಿಯವರು – ಗುಜ್ಜರಾತಿನ ಸಾಹಿತ್ಯಿಕ ಆಂದೋಲನಗಳಲ್ಲಿ ಪ್ರಮುಖ ಸ್ಥಾನ ವಹಿಸಿದ ಗುಜ್ಜರಾತಿ ಸಾಹಿತ್ಯದಲ್ಲಿನ ಹೊಸ ಯುಗದ ಪ್ರವರ್ತಕರಲ್ಲಿ ಪ್ರಮುಖರಾದ ಶ್ರೀ. ಕನ್ಹಯ್ಯಲಾಲ ಮುನಿಷಿಯವರ ಧರ್ಮಪತ್ನಿಯವರು. ಶ್ರೀ. ಮುನಿಷಿಯವರೊಂದಿಗೆ 'ಗುಜರಾತ' ಎಂಬ ಸಾಹಿತ್ಯ ಪತ್ರಿಕೆಯನ್ನು ಸಂಪಾದಿಸುವ ಕಾರ್ಯದಲ್ಲಿ ಸಹಕರಿಸುತ್ತಿದ್ದರು. 'ರೇಖಾಚಿತ್ರೋ ಅನೇ ಬೀಜೋ ಲೇಖೋ' ಎಂಬ ಲೇಖನ ಸಂಗ್ರಹ– ಕುಮಾರ ದೇವಿ ಎಂಬ ನಾಟಕ – ಜೀವನ ಮಾಥೀ ಜಡೇಲಿ ಎಂಬ ಕಥಾಸಂಗ್ರಹ — ಹೀಗೆ ಸಾಹಿತ್ಯದ ಅನೇಕ ಪ್ರಕಾರಗಳನ್ನು ಪ್ರಕಟಿಸಿದ್ದಾರೆ. ಇಲ್ಲಿ ಎತ್ತಿಕೊಂಡ ಕತೆ 'ಬಾಳಮಿತ್ರ' ಎಂಬ ಮಕ್ಕಳ ಮಾಸಪತ್ರಿಕೆಗಾಗಿ ಬರೆದುದು. ಹೆಸರಿಗೆ ಮಕ್ಕಳಿಗಾಗಿ ಎಂದಿದ್ದರೂ ಅದರಲ್ಲಿನ ಉಪರೋಧ ಆ ಎಳೆಯ ಜೀವಗಳಿಗೇನು ತಿಳಿಯ ಬಲ್ಲದು ?

ವಿಧುರರು, ಮಡಿದು ಹೋದ ಮಡದಿಗಾಗಿ ಊಟ ಬಿಟ್ಟು, ನೀರು ಬಿಟ್ಟು ಶೋಕಿಸಿ ಕೊನೆಗೆ ಆ ಶೋಕವನ್ನೆಲ್ಲ ಮರೆತು ಹೊಸ ಸಂಸಾರ ಹೂಡುವ ಸಿದ್ಧತೆ ಮಾಡುವರು ಎಂಬುದನ್ನು ಇಲ್ಲಿ ಚಿತ್ರಿಸಿದೆ. ಅರಸನು ರಾಣಿಯ ಚಿತ್ರದಲ್ಲಿ ಕ್ರಮೇಣ ಬದಲು ಮಾಡುತ್ತ ನಡೆದ ರೀತಿ – ಆ ಚಿತ್ರ ರಾಣಿಯ ರೂಪವನ್ನು ಬಿಟ್ಟು ಆ ತರುಣಿಯ ರೂಪ ಹೊಂದುವುದು – ಮುಂತಾದ ಸನ್ನಿವೇಶಗಳನ್ನು ನೋಡಿ ಸೊಗಸೆನಿಸ ದಿರದು. ಭಾರತದ ರಾಜಕೀಯ ಆಂದೋಲನ ಸಮರದಲ್ಲಿ ಮುನಿಷಿ ದಂಪತಿಗಳು ಕಾರಾಗೃಹವಾಸದ ಕಠಿನ ಜೀವನವನ್ನು ಕಳೆದಿರುವರು.

# ರಾಣಿಯ ಚಿತ್ರ

ಅನುವಾದಕ : **ಹ. ಪೀ. ಜೋಶಿ**

ಹಿಂಗೊಬ್ಬ ಅರಸನಿದ್ದನು. ಆತನ ರಾಣಿ ಚತುರಳೂ ಸುಸ್ವರೂಪಿಯೂ ಆಗಿದ್ದಳು. ಅವಳ ಮೇಲೆ ಆತನ ಪ್ರೇಮ ನಿರತಿಶಯವಿತ್ತು. ಅವಳ ಹೊರತು ಆತನ ಮನಸ್ಸು ಇನ್ನಾವುದರಲ್ಲೂ ರಮಿಸುತ್ತಿರಲಿಲ್ಲ.

ಆದರೆ ಮೃತ್ಯುವಿಗೇನು ಆ ಮಾತು? ಒಂದು ದಿನ ಅರಸನು ಬೇಟೆಗೆ ಹೋಗಿದ್ದ. ರಾಣಿಯು ಮಧ್ಯಾಹ್ನ ದೇವರ ದರ್ಶನಕ್ಕಾಗಿ ಹೋಗಿದ್ದಳು. ಎಂದಾದರೂ ಹೊತ್ತು ಏರುವುದರೊಳಗಾಗಿ ಹೋಗಿ ಬರುತ್ತಿದ್ದಳು. ಇಂದು ಯಾವುದೋ ಕಾರಣದಿಂದ ತಡವಾಯಿತು. ಹೂವಿನಂಥ ಎಳೆಯ ಜೀವ, ಬಿಸಿಲಿನ ತಾಪದಿಂದ ಬಳಲಿ ಹಾಸಿಗೆ ಹಿಡಿದಳು. ಅರಸನು ಬೇಟೆಯಿಂದ ಮರಳಿ ಬರುವುದರೊಳಗಾಗಿ ಪ್ರಾಣ ಬಿಟ್ಟಳು.

ಅರಸನು ಮರಳಿ ಬಂದ ಊರಲ್ಲಿ ಎಲ್ಲೆಲ್ಲಿಯೂ ಉದಾಸೀನತೆ. ಆತನಿಗೆ ಭಯವಾಯಿತು. ಅಂಜಂಜುತ್ತ ಅರಮನೆಗೆ ಹೋದ. ಅಲ್ಲಿ ಮಂತ್ರಿ ದುಃಖದಿಂದ ಆದ ಸಂಗತಿಯನ್ನು ಹೇಳಿದ. ಆಮೇಲೆ ಕೇಳುವುದೇನು? ಅರಸ ಬಹು ಪರಿಯಾಗಿ ಶೋಕ ಮಾಡತೊಡಗಿದ. ಯಾರು ಆತನನ್ನು ಶಾಂತಗೊಳಿಸಬಲ್ಲರು?

ಅಂದಿನಿಂದ ರಾಜ್ಯಕಾರಭಾರದಲ್ಲಿ ಅರಸನಿಗೆ ಅಲಕ್ಷ್ಯವಾಯಿತು. ಆತನು ರಾಣಿಯ ಒಂದು ಸುಂದರವಾದ ಚಿತ್ರವನ್ನು ಬರೆದಿಟ್ಟುಕೊಂಡು ಏಕಾಂತದಲ್ಲಿ ಕಾಲಕಳೆಯಹತ್ತಿದ. ಮಂತ್ರಿಗೆ, ಪ್ರಜೆಗಳಿಗೆ ವಿಚಾರ ಬಿತ್ತು ಅರಸನ ಮನಸ್ಸು ಸ್ಥಿರವಾಗುವುದು ಹೇಗೆ?

ಅರಮನೆಯಲ್ಲಿ ಅನುಭವಿಕ ಜಾಣರಿದ್ದರು. ಅವರೆಂದರು, "ಮದುವೆಯಾದರೆ ಮನಸ್ಸು ನೆಟ್ಟಗೆ ಬಂದೀತು" ಎಂದು. ಮಂತ್ರಿ ಅರಸನ

ಬಳಿ ಮದುವೆಯ ಮಾತು ಎತ್ತಿದ. ಅರಸನು ಮೊದಲ· ಸುದ್ದಿಗಂತೂ ಹರಿಹಾಯ್ದ ಮಂತ್ರಿ ಒಳ್ಳೆಯ ಚತುರ ಮೆಲ್ಲಮೆಲ್ಲನೆ ಮನಸು ಒಲಿಸಿದ ಅರಸನದೊಂದೇ ಕಟ್ಟು–"ಮೊದಲಿನ ರಾಣಿಯಂತೆಯೇ ಹುಡುಗಿ ಸಿಕ್ಕರ ಮದುವೆಯಾಗುವೆನು" ಎಂದು

ಎರಡು ಸೂಲುಗಳು ಒಂದರಂತೊಂದಿರುವುದಿಲ್ಲ ಪ್ರತಿ ರಾಣಿ ಯಂತಿದ್ದವಳು ಸಿಗುವ ಬಗೆ! ಎಷ್ಟೋ ಹುಡುಗಿಯರನ್ನು ತೋರಿಸಿ ದರು. ಒಬ್ಬಳೂ ಮನಸ್ಸಿಗೆ ಬರಲಿಲ್ಲ. ಮಂತ್ರಿ ನಿರುಪಾಯನಾದ. ಆದರೂ ನಿರಾಶನಾಗಲಿಲ್ಲ. ತನ್ನ ಯತ್ನ ನಡಸಿಯೇ ಇದ್ದ.

ಒಂದು ದಿನ ಅರಸ ತನ್ನ ಮಹಲಿನಲ್ಲಿ ಕುಳಿತಿದ್ದ. ಮಧ್ಯಾಹ್ನ ಮೀರಿ ಹೋಗಿತ್ತು. ಅಷ್ಟರಲ್ಲಿ ಆತನಿಗೆ ಮಂಜುಲವಾದ ಗಾಯನ ಕೇಳ ಬಂತು. ಏನು ಎಂದು ಹೊರಗೆ ನೋಡಿದನು. ಒಬ್ಬ ತರುಣಿ ಹೊರಟಿದ್ದಳು. ನಿಂತಲ್ಲಿಯೇ ಊರಿದಂತೆ ನಿಂತುಕೊಂಡ. ಈ ಇಂಪು ದನಿಯವಳು ಯಾರು?

ಆಮೇಲೆ ಆತನು ರಾಣಿಯ ಚಿತ್ರ ತೆರೆದು ನೋಡಿದ. ರಾಣಿಯ ಉಡುಪುತೊಡಪುಗಳು ಇವಳ ಉಡುಪು ತೊಡಪುಗಳಷ್ಟು ಬೆಲೆಯುಳ್ಳವು ಗಳಾಗಿರಲಿಲ್ಲ. ಇಷ್ಟು ಬೆಲೆಯುಳ್ಳವುಗಳಂತೂ ಅವು ಇರಲೇ ಬೇಕು. ತಾನೂ ಚಿತ್ರಕಾರನೇ. ಚಿತ್ರವನ್ನು ತಿದ್ದಿದ ಎಷ್ಟೋ ಹೊತ್ತಿನ ವರೆಗೆ ಕುಂಚವನ್ನಾಡಿಸಿ ರಾಣಿಯ ಉಡುಪು ತೊಡಪುಗಳನ್ನು ಆ ಅವಳ ಉಡುಪುತೊಡಪುಗಳಂತೆ ಬದಲು ಮಾಡಿದ.

ಮರುದಿನ ಅದೇ ವೇಳೆಗೆ ಆವಳು ಬೀದಿಯಲ್ಲಿ ನಡೆದಿದ್ದಳು. ಎದುರು ನೋಟ. ಅವಳ ಕಣ್ಣುಗಳು ವಿಶಾಲವಾಗಿದ್ದವು. ಕೂದಲು ಕಪ್ಪು. ಮೇಲ್ಪಟ್ಟಿ ಬಲು ಮಾಟ. ಅವಳು ಕ್ಷಣಹೊತ್ತು ಮಿಂಚಿ ಮಾಯವಾದಳು. ಅವಳು ಹೋದ ಬಳಿಕ ಅರಸು ರಾಣಿಯ ಚಿತ್ರ ತೆರೆದು ನೋಡಿದ. ಆತನಿಗೆನಿಸಿತ್ತು, ರಾಣಿಯ ಕಣ್ಣುಗಳು ತೀರ ಸಣ್ಣ ವಾಗಿರುವವು. ಕುಂಚದಿಂದ ತಿದ್ದಿದ. ಕ್ಷಣಹೊತ್ತು ನೋಡಿದ. ಮೇಲೆ ನಿಸಿತು. ರಾಣಿಯ ಕೂದಲುಗಳಿಗೆ ಅಚ್ಚಕಪ್ಪು ಬಣ್ಣ ಒಪ್ಪಬೇಕು. ಅದರಂತೆ ತಿದ್ದಿದ.

ಮುಂದೆ ಮೂರು ನಾಲ್ಕು ದಿನ ಅವಳು ಹಾಡುತ್ತ ಹೋಗುತ್ತಲೇ ಇದ್ದಳು. ಅರಸ ಅವಳನ್ನು ಸೂಕ್ಷ್ಮವಾಗಿ ನೋಡಿ ನೋಡಿದಂತೆ ಚಿತ್ರವನ್ನು ತಿದ್ದುತ್ತ ನಡೆದ.

ಮುಂದೆ ಕೆಲದಿನ ಅವಳು ಬರಲಿಲ್ಲ. ಅರಸನ ಮನಸ್ಸು ಆ ವೇಳೆಯಾದ ಕೂಡಲೆ ಚಡಚಡ ಮಾಡುತ್ತಿತ್ತು.

ಒಂದು ದಿನ ಅರಸ ಮಂತ್ರಿಗೆ "ಪ್ರತಿರಾಣಿಯಂತಿದ್ದ ಹುಡುಗಿ ಸಿಕ್ಕಿರುವಳು ಮತ್ತು ತಾನು ಮದುವೆಯಾಗಲು ಸಿದ್ಧನಿರುವೆನು" ಎಂದು ಹೇಳಿದ.

ಮಂತ್ರಿ ಆವಳನ್ನು ಕರೆಸಿ ಚಿತ್ರಕ್ಕೆ ಹೋಲಿಸಿ ನೋಡಿದ. ಅವಳು ಪ್ರತಿರಾಣಿಯ ಚಿತ್ರದಂತಿದ್ದಳು. ಜಗತ್ತಿನಲ್ಲಿ ಇಂಥ ಸಾಮ್ಯವು ಶಕ್ಯವಿರಬಹುದೇ ಎಂಬ ಶಂಕೆ ಮಂತ್ರಿಯ ಮನಸ್ಸಿನಲ್ಲಿ ಬರಲಿಲ್ಲ!

ಅರಸು ಆವಳನ್ನು ಮದುವೆಯಾಗಿ ತನ್ನ ಉದಾಸೀನತೆಯನ್ನು ಬಿಟ್ಟು ಎಂದಿನಂತೆ ರಾಜ್ಯಕಾರಭಾರದಲ್ಲಿ ತೊಡಗಿದ.

# ತಮಿಳು ಸಾಹಿತ್ಯ

ದ್ರಾವಿಡ ಭಾಷೆಗಳಲ್ಲಿ ತಮಿಳು ಹೆಚ್ಚು ಪುರಾತನವಾದುದು, ಸಾಹಿತ್ಯದಲ್ಲಿ ಬಹಳ ಮುಂದುವರಿದುದು. ಅನ್ಯ ಭಾಷೆಗಳಂತೆಯೇ ತಮಿಳಿನಲ್ಲಿಯೂ ಸಾಹಿತ್ಯದ ರಚನೆ ಮೊದಲು ಪದ್ಯದಲ್ಲೇ ಆಯಿತು. ಬಳಿಕ ಗದ್ಯ ಸಾಹಿತ್ಯ ಹುಟ್ಟಿತು

ತಮಿಳು ಸಾಹಿತ್ಯ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದವರೆಗೆ ಹೋಗುತ್ತದೆಂದು ವಿದ್ವಾಂಸರ ಅಭಿಪ್ರಾಯ. ಕ್ರಿಸ್ತಾನಂತರ ಳನೆಯ ಶತಮಾನದ ವರೆಗೆ ಮಧುರೆಯ ಪಾಂಡ್ಯರಾಜರ ಆಶ್ರಯದಲ್ಲಿ 'ಸಂಗಂ ಸಾಹಿತ್ಯ' ವಿಪುಲವಾಗಿ ಬೆಳೆಯಿತು. ತಿರುವಳ್ಳುವರ್ ಕವಿಯ "ಕುರುಳ್" ಗ್ರಂಥವೂ ಈ ಕಾಲದಲ್ಲಿಯೇ ಜನ್ಮ ತಾಳಿತು. ಆ ಕಾಲದಲ್ಲಿಯೇ 'ಶಿಲಪ್ಪದಿಕಾರಂ,' 'ಮಣಿಮೇಖಲೈ' ಮೊದಲಾದ ಮಹಾ ಕಾವ್ಯಗಳು ಹುಟ್ಟಿದವು ಶೈವ, ವೈಷ್ಣವ ಭಕ್ತರು ತಮ್ಮ 'ತೇವಾರಂ' 'ತಿರುವಾಚಕ' 'ತಿರುವಾಯಿ ಮೊಳಿ'ಗಳ ಮೂಲಕ ಜನತಾ ಸಾಹಿತ್ಯದ ಪಥಪ್ರದರ್ಶಕ ರಾದರು ಆನಂತರ ಕಂಬ ರಾಮಾಯಣವೂ ವಿಲ್ಲಿಪುತ್ತುರಾರ್ ಭಾರತವೂ ಹುಟ್ಟಿ ತಮಿಳು ಸಾಹಿತ್ಯದಲ್ಲಿ ಒಂದು ಕ್ರಾಂತಿಯನ್ನುಂಟು ಮಾಡಿದವು. ಹತ್ತನೆಯ ಶತಮಾನದಿಂದ ಹದಿನೇಳನೆಯ ಶತಮಾನದ ವರೆಗೆ ಮಹಾಕಾವ್ಯಗಳ ವ್ಯಾಖ್ಯಾನಗಳು ಹುಟ್ಟಿದವು. ವಿಜಯನಗರದ ಅರಸರ ಕಾಲದಲ್ಲಿಯೂ ಕೆಲವು ಉತ್ತಮ ತಮಿಳು ಕಾವ್ಯಗಳು ಹುಟ್ಟಿದವು. ಹದಿನೇಳನೆಯ ಶತಮಾನಾನಂತರ ಅಲ್ಲಿ ಇಲ್ಲಿ ಒಂದೊಂದು ಪ್ರೌಢ ಕಾವ್ಯ ಹುಟ್ಟಿದರೂ, ತಮಿಳು ಸಾಹಿತ್ಯದ ಮಹಾಪ್ರವಾಹ ನಿಂತು ಹೋದಂತೆಯೇ.

ಆಧುನಿಕ ತಮಿಳು ಸಾಹಿತ್ಯದ ಪಥಪ್ರದರ್ಶಕರಲ್ಲಿ ಸ್ವರ್ಗೀಯ ಮಾಧವಯ್ಯ, ಚಕ್ರವರ್ತಿ ರಾಜಗೋಪಾಲಾಚಾರ್ಯರು ಮೊದಲಾದ ವರು ಪ್ರಮುಖರೆಂದು ಹೇಳಬಹುದು. ತಮಿಳಿನಲ್ಲಿ ಮೊಟ್ಟ ಮೊದಲು

ಕತೆಗಳನ್ನು ಬರೆಯಲು ತೊಡಗಿದವರು ಸ್ವರ್ಗೀಯ ಮಾಧವಯ್ಯನವರು. ಇವರು ಸಮಾಜ ಸುಧಾರಣಾವಾದಿಗಳಾಗಿದ್ದುದರಿಂದ ಇವರ ಕತೆಗಳಲ್ಲಿ ಸಮಾಜ ಸುಧಾರಣೆಯ ಸನ್ನಿವೇಶ, ವಸ್ತು ಕಾಣುವವು. ಆದರೆ ರಾಜ ಗೋಪಾಲಾಚಾರ್ಯರ ಕತೆಗಳಲ್ಲಿಯ ವಸ್ತು ಇಂದಿನ ನಿರುದ್ಯೋಗ, ಬಡತನ, ಉದ್ಯೋಗ-ವ್ಯವಸಾಯ, ವ್ಯಭಿಚಾರ, ಭಿಕ್ಷೆಯ ಸಮಸ್ಯೆಗಳು.

ಈಗಿನ ಹೊಸ ಪದ್ಧತಿಯಿಂದ ಕತೆಗಳನ್ನು ಮೊಟ್ಟಮೊದಲು ಬರೆಯಲಾರಂಭಿಸಿದವರು ಪಿಚ್ಚು ಮೂರ್ತಿ ಅವರು. ಆಧುನಿಕ ತಮಿಳು ಕಥಾ ಸಾಹಿತ್ಯದ ಮುಂದಾಳುಗಳು ಇವರು. ಜೀವನದ ಚಿಕ್ಕ ಚಿಕ್ಕ ಸನ್ನಿವೇಶಗಳನ್ನು ಎತ್ತಿಕೊಂಡು ಮನೋಹರವಾಗಿ, ಬಾಲಮನವನ್ನು ಹೃದಯಂಗಮವಾಗಿ, ತದ್ರೂಪವಾಗಿ ಕತೆಗಳಲ್ಲಿ ಒಡಮೂಡಿಸುವುದರಲ್ಲಿ ಕುಶಲರಾಗಿದ್ದಾರೆ. ಹಾಸ್ಯರಸವನ್ನು ಮನವಾರೆ ಹರಿಸುವುದರಲ್ಲಿ ಕೃಷ್ಣಮೂರ್ತಿ, ಎಸ್. ವಿ ವಿ. ಮತ್ತು ಎಸ್. ಜಿ. ಶ್ರೀನಿವಾಸಾಚಾರ್ಯರು ಸಮರ್ಥರು ಆಧುನಿಕ ತಮಿಳು ಕತೆಗೆ ಪೂರ್ಣರೂಪವನ್ನು ಕೊಟ್ಟವರು ಕು ಪ. ರಾಜಗೋಪಾಲನ್ ಅವರು. ರಾಜಗೋಪಾಲನ್ ಅವರು ಸೌಂದರ್ಯಾನುಭೂತಿ, ಸೂಕ್ಷ್ಮಭಾವವ್ಯಂಜನೆಯನ್ನು ಕಲೆಗಳಲ್ಲಿ ಚೆನ್ನಾಗಿ ಚಿತ್ರಿಸುವರು. ಈ ಬಗೆಯಿಂದ ತಮಿಳು ಕಥಾಸಾಹಿತ್ಯವನ್ನು ಭಿನ್ನಭಿನ್ನವಾದ ಬಗೆಗಳಲ್ಲಿ ಉನ್ನತಿಯ ಮಟ್ಟಕ್ಕೇರಿಸಲು ಅನೇಕ ತರುಣ ಸಾಹಿತಿಗಳು ನೆರವಾಗಲಾರಂಭಿಸಿದರು. ಅವರಲ್ಲಿ ಬಿ. ಎಸ್. ರಾಮಯ್ಯ, ಜಗನ್ನಾಧ ಅಯ್ಯರ್, ಕುಮಾರ ಸ್ವಾಮಿ, ಚಿದಂಬರ ಸುಬ್ರಹ್ಮಣ್ಯಂ, ವೃದ್ಧಾಚಲಂ, ಶಂಕರರಾಂ, ಕೆ. ಎಸ್. ಸುಬ್ರಹ್ಮಣ್ಯಂ, ಕೆ. ಚಂದ್ರಶೇಖರನ್, ಕೆ. ವಿ. ಜಗನ್ನಾಥನ್ ಮೊದಲಾದವರು ಹೆಸರಾದವರು.

---

# ಶ್ರೀ. ತ. ನಾ. ಕುಮಾರಸ್ವಾಮಿ

ಶ್ರೀ. ಕುಮಾರಸ್ವಾಮಿ ಅವರು 'ವಿಷವೃಕ್ಷ', 'ಆನಂದ ಮಠ' 'ಮಾತಂಗಿನಿ', 'ಸೌದಾಮಿನಿ', 'ಕಪಾಲ ಕುಂಡಲ' ಮುಂತಾ ಕಾದಂಬರಿಗಳನ್ನು ಬಂಗಾಳೀ ಭಾಷೆಯಿಂದಲೇ ತಮಿಳು ಭಾಷೆ ಅನುವಾದ ಮಾಡಿ, ತಮಿಳು ಜನರ ಪ್ರೇಮಕ್ಕೆ ಪಾತ್ರರಾಗಿದ್ದಾರೆ. ಇವರು ತಮಿಳು ಭಾಷೆಯಲ್ಲಿ ಬರೆದಿರುವ ಅನೇಕ ಸ್ವಾರಸ್ಯವಾದ ಕಿರುಗತೆಗಳು ತಮಿಳು ಭಾಷೆಯ ವರ್ತಮಾನ ಮತ್ತು ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು ತಮಿಳು ನಾಡಿನ ಸುಪ್ರಸಿದ್ಧ ಕತೆಗಾರರಲ್ಲಿ ಒಬ್ಬರಾಗಿದ್ದಾರೆ. ಮದರಾಸಿನಲ್ಲಿ ಸುಮಾರು ೫೦ ವರ್ಷಗಳಿಂದ ಪ್ರಕಾಶಕ ರೆಂದು ಹೆಸರುವಾಸಿ ಪಡೆದಿರುವ ಅಲಯನ್ಸ್ ಕಂಪೆನಿಯವರು ಇವರ ಕಥೆಗಳು ಕೆಲವನ್ನು ಶೇಖರಿಸಿ "ತಮಿಳುನಾಡಿನ ಕಥೆ ಗೊಂಚಲು – ನಂ. ೩" ಎಂದು ಪ್ರಕಾಶಿಸಿರುವರು.

# ಕಾನೂನು ಪರೀಕ್ಷೆ

ಅನುವಾದಿಕೆ: **ಸೌ. ಜಯಲಕ್ಷ್ಮಿ ಆರ್. ಶ್ರೀನಿವಾಸನ್**

ದೊಡ್ಡ ಗಡಿಯಾರದಲ್ಲಿ ಗಂಟೆ ಒಂಬತ್ತೂವರೆ ಹೊಡೆಯಿತು. ಇನ್ನೂ ಒಂದೂವರೆ ಗಂಟೆ ಆದ ಮೇಲೆ ಶೇಷಗಿರಿಗೆ ಬಿಡುಗಡೆ. ಅವನ ತಂದೆ ಶಿವರಾಮಯ್ಯರ್ ಅವರು ದೀಪವನ್ನು ಆರಿಸಿಬಿಟ್ಟು ಮಲಗಿಬಿಡುವರು. ಶೇಷುವಿನ ಕೈಯಲ್ಲಿರುವ 'ಪೀನಲ್ ಕೋಡ್' ಪುಸ್ತಕ ಪದೇ ಪದೇ ಜಾರಿ ಕೆಳಗೆ ಬೀಳುತ್ತಿದ್ದಿತು. ಕಾಮುವನ್ನು– ಅವನ ಹೆಂಡತಿ ಕಾಮಾಕ್ಷಿಯನ್ನು ಕಾಣಲು ಅವನ ಮನಸ್ಸು ತಳಮಳಿಸುತ್ತಿದ್ದಿತು. ಕಳ್ಳತನದಿಂದ ಮಹಡಿಗೆ ಹೋಗುವಾಗ ಅಪ್ಪ ನೋಡಿ ಬಿಟ್ಟರೆ ಏನು ಮಾಡುವುದು? ತಮ್ಮ ಮಗನ ಕೆಲಸದ ಸಾಮರ್ಥ್ಯ ಶಿವರಾಮಯ್ಯರವರಿಗೆ ಚೆನ್ನಾಗಿ ಗೊತ್ತಿತ್ತು.

ಹೊರಗೆ ಬೆಳದಿಂಗಳು. ಮಾರ್ಗಶಿರಮಾಸವಾದುದರಿಂದ ಒಳ್ಳೆಯ ಮಂಜುಕೂಡ. ಆ ರಸ್ತೆಯಲ್ಲಿ ಮನುಷ್ಯರ ಓಡಾಟವೇ ಇಲ್ಲ; ನಿಶ್ಶಬ್ದ. ಪಕ್ಕದರಸ್ತೆ ರಾಮಸುಬ್ಬಯ್ಯರ ಮನೆಯಲ್ಲಿ ಕಾಲಕ್ಷೇಪ ನಡೆಯುತ್ತಿತ್ತು. ಕುಂಜೂ ಭಾಗವತರ ಧ್ವನಿ ಆ ರಾತ್ರಿ ಸಮಯದಲ್ಲಿ ತೋಳದ ಕೂಗಿನಂತೆ ಶೇಷುವಿಗೆ ಕೇಳಿಸಿತು. ತಾಯಿ ಸುಬ್ಬಲಕ್ಷಮ್ಮ ಸ್ವಲ್ಪ ಭಕ್ತಿ ಶ್ರದ್ಧೆ ಇದ್ದಾಕೆ. ಹರಿಕಥೆಯೆಂದರೆ ಪ್ರಾಣ. ಅಂದು ಮನೆಯ ಕೆಲಸಗಳನ್ನು ಬೇಗ ಮುಗಿಸಿಕೊಂಡು ಆಕೆ ಭಾಗವತರ ಕಥೆಯನ್ನು ಕೇಳಲು ಹೋಗಿದ್ದಳು.

ಶೇಷುವಿಗೆ ಓದುವುದರಲ್ಲಿ ಆಸಕ್ತಿ ಕುಂದುತ್ತ ಬಂದಿತು. ಚಳಿಗಾಲ ಬರಲು, ಅವನ ತಂದೆಗೆ ಗೂರ್ಲು ರೋಗ ಬಂದುಬಿಟ್ಟಿತು. ಅವರು ಪದೇ ಪದೇ ಕೆಮ್ಮುವುದು ಕೇಳಬರುತ್ತಿತ್ತು. ಅಂಗಳದಿಂದ ಮಹಡಿಯ ಕಡೆಗೆ ನೋಡಿದ. ಅವರ ಕೊಠಡಿಯಲ್ಲಿ ದೀಪ ಉರಿಯುತ್ತಿದ್ದಂತೆ

ತೋರಲಿಲ್ಲ. ಧೈರ್ಯ ಹುಟ್ಟಿತು. ಮರುಕ್ಷಣವೇ, ಅವರು ನಿದ್ರೆ ಮಾಡದೆ ಎಚ್ಚರವಾಗಿದ್ದರೆ ಏನು ಮಾಡುವುದೆಂಬ ಅಧೈರ್ಯ. ಸಾಹಸದಿಂದ ಧೈರ್ಯ ತಂದುಕೊಂಡು ಮಹಡಿಯ ಮೆಟ್ಟಿಲುಗಳನ್ನೇರಿ, ಹತ್ತಿಯ ಮೇಲೆ ನಡೆಯುವಂತೆ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ತನ್ನ ಮಲಗುವ ಮನೆಯ ಕಡೆಗೆ ಹೋದ. ಭಯವಿಲ್ಲ. ಅಪ್ಪನ ಕೊರಡಿಯ ಬಾಗಿಲು ಮುಚ್ಚಿಯೇ ಇದ್ದಿತು ಅಯ್ಯೋ . . . ಇದೇನು ? ಅವನು ನೆನೆದುದಕ್ಕೆ ವ್ಯತಿರಿಕ್ತವಾಗಿ ಆ ಕೊಠಡಿಯ ಕದ ತೆರೆದುಕೊಳ್ಳುತ್ತಿದೆಯಲ್ಲಾ ! ಶಿವರಾಮಯ್ಯರ ಎತ್ತರವಾದ ವ್ಯಕ್ತಿ ಆ ಕತ್ತಲೆಯಲ್ಲಿ ಮೆಲ್ಲಗೆ ಬಂದು ಅವನ ಎದುರಿಗೆ ನಿಂತಿತು.

"ಶೇಷೂ . . . . !"

"ಏನೂ ಇಲ್ಲಾಪ್ಪ. ಹಿಂದೂ ಲಾ ತೆಗೆದುಕೊಂಡು ಹೋಗೋಣವೆಂದು ಬಂದೆ" ಎಂದು ಕಳ್ಳನಂತೆ ಪಿಟಪಿಟ ನೋಡಿದ.

"ಗೊತ್ತೋ ನಿನ್ನ ವಿಷಯವೆಲ್ಲಾ. ಆ ಪುಸ್ತಕ ಕೆಳಗೆ ಬೀರೂವಿನಲ್ಲೇ ಇದೆ ಮಹಡಿಯಲ್ಲಿ ಬಂದು ಮೊಳೆತಿದೆಯೋ ? ಹೋಗೋ ಕೆಳಗೆ ಹೋಗಿ ಓದು. ಪರೀಕ್ಷೆ ಹತ್ತಿರಕ್ಕೆ ಬಂತು. ಹೋದಸಲ ಪಲ್ಟಿ ಹೊಡೆದದ್ದು ಸಾಲದೇ ? ಹುಡುಗ ನಾಲ್ಕು ಜನರೊಡನೆ ಸೇರಿ ಓದಲೆಂದು ಹಾಸ್ಟಲಿನಲ್ಲಿ ಸೇರಿಸಿದೆ. ಅದರ ಫಲವನ್ನೂ ನೋಡಿದುದಾಯಿತು. ದಿನಾ ತಪ್ಪದೇ ಸಿನೀಮಾಗೆ ಹೋಗಲು ಪ್ರಾರಂಭಿಸಿದೆ. ಪರೀಕ್ಷೆಯಲ್ಲಿ ಸೊನ್ನೆ ಸಂಪಾದಿಸಿದೆ. ಹಣೇಬರಹವೆಂದು ಓದಿ ಪ್ಯಾಸ್ ಮಾಡಿದ ಮೇಲೆ ನಿನ್ನ ಹೆಂಡತಿಯೊಡನೆ ಎಷ್ಟು ದಿವಸಗಳು ಬೇಕಾದರೂ ಇರು. ಯಾರು ತಡೆಯುತ್ತಾರೆ. ಓದೋ ಹೋಗಿ ! " ಎಂದು ಕಠಿನವಾಗಿ ಹೇಳಿದರು.

ಶೇಷುವಿನ ಮುಖದಲ್ಲಿ ಆದ ವಿಕಾರ ಆಗ ಕತ್ತಲೆಯಾಗಿದ್ದುದರಿಂದ ಕಾಣಲಿಲ್ಲ. ಉತ್ತರ ಹೇಳದೆ ಆ ಸ್ಥಳವನ್ನು ಬಿಟ್ಟು ಜಾರಿ ಕೆಳಗೆ ಹೋಗಿಬಿಟ್ಟ.

* * *

ಪನ್ನೇರಳೇ ಮರದ ಎಲೆಗಳ ಮೇಲೆ ಚೆಲ್ಲಾಡುತ್ತಿತ್ತು ಚಂದ್ರಿಕೆ.

ಶೇಷುವಿನ ಮಲಗುವ ಕೊಠಡಿಯಲ್ಲಿ ಅಲ್ಲಾಡುವ ಎಲೆಗಳ ನೆರಳೊಡನೆ ಬೆಳದಿಂಗಳು ಹರಡಿದ್ದಿತು. ಇಂತಹ ಒಂದು ರಮ್ಯವಾದ ಚಳಿಗಾಲದ ಚಂದ್ರಿಕೆಯಲ್ಲಿ ಯಾವನಿಗೆ ತಾನೇ ಓದಿನ ಮೇಲೆ, ಅದರಲ್ಲೂ ಸಾರವಿಲ್ಲದ ಒಂದು ನ್ಯಾಯ ಪುಸ್ತಕವನ್ನು ಓದುವುದರಲ್ಲಿ ಬುದ್ಧಿ ಓಡುತ್ತದೆ? ಅವನಿಗೆ ಕೆಳಗಿರಲು ಆಗಲಿಲ್ಲ. ಬಂದದ್ದು ಬರಲೆಂದು, ಧೈರ್ಯ ತಂದು ಕೊಂಡು ತನ್ನ ಕೊಠಡಿಯೊಳಗೆ ನುಗ್ಗಿದ. ಅಲ್ಲಿ ತೋರಿದ ಒಂದು ದೃಶ್ಯ ಅವನನ್ನು ಕ್ರೋಧಪರವಶನನ್ನಾಗಿ ಮಾಡಿತು ಹಾಲಿನಂತೆ ಚಂದ್ರ ಕಿರಣಗಳು ಸುರಿಯುವ ಈ ರಾತ್ರಿಯಲ್ಲಿ ಹೀಗೆ ಮೈಮರೆತು ನಿದ್ರೆಮಾಡುವುದೇ? ಛೆ!

ಶೇಷುವಿನ ತಾಯಿ, ತನ್ನ ಮಗ ಓದಿಕೊಂಡು ಮಹಡಿಗೆ ಬರುವವರೆಗೆ ಸೊಸೆಯೊಡನೆಯೇ ಮಾತನಾಡಿಕೊಂಡಿರುವುದು ವಾಡಿಕೆ; ಚಿಕ್ಕವಳಾದ ಸೊಸೆಯನ್ನು ಒಂಟಿಯಾಗಿ ಬಿಟ್ಟರೆ ಭಯಪಟ್ಟುಕೊಂಡಾಳು ಎಂದು. ಆದರೆ ಇಂದು ಅತ್ತೆಯವರಿಗೆ ಭಾಗವತರ ಕಾಲಕ್ಷೇಪವೇ ಸೊಸೆಗಿಂತ ಮುಖ್ಯವಾಗಿತ್ತು. ಕಾಮು ಒಂಟಿಯಾಗಿ ತನ್ನ ಕೊಠಡಿಯಲ್ಲಿರಬೇಕಾಯಿತು. ಅತ್ತೆಯವರು ಬರುತ್ತಾರೆ, ಬರುತ್ತಾರೆ ಎಂದು ನೋಡಿದಳು. ಎಷ್ಟು ಹೊತ್ತು ಎಚ್ಚೆತ್ತಿರುವುದು? ಒಂದು ತೆಳುವಾದ ನೀಲೀ ಬಣ್ಣದ ಕಂಬಳಿಯನ್ನು ಮೈಮೇಲೆ ಹೊದ್ದುಕೊಂಡು, ಎರಡು ಸುಂದರವಾದ ಕಣ್ಣುರೆಪ್ಪೆಗಳನ್ನು ಮುಚ್ಚಲು ಕಾಮು ನಿದ್ರಾವಶಳಾದಳು. ಒಂದು ಚಿಕ್ಕ ದೀಪ ಅತ್ಯಲ್ಪ ಪ್ರಕಾಶದೊಡನೆ ಉರಿಯುತ್ತಿತ್ತು. ಶೇಷಗಿರಿ ಕೊಠಡಿಯೊಳಗೆ ನುಗ್ಗಿ, ಕಾಮು ಮಲಗಿದ್ದ ಮಂಚದ ಸಮೀಪಕ್ಕೆ ಬಂದು ಅವಳ ಮುಖಕ್ಕೆ ಮುಖವಿಟ್ಟು ಬಹು ಮೃದುವಾದ ಧ್ವನಿಯಲ್ಲಿ, "ಕಾಮು .... ಕಾಮಾಕ್ಷಿ" ಎಂದು ಎಬ್ಬಿಸಿದ.

ಅರ್ಧ ನಿದ್ರಾವಸ್ಥೆಯಲ್ಲಿ ಯಾರಾದರೂ ತನ್ನನ್ನು ಎಬ್ಬಿಸಿಬಿಟ್ಟಲ್ಲಿ ಕಾಮಾಕ್ಷಿ ಬೆಚ್ಚಿಬೀಳುವುದು ವಾಡಿಕೆ. ಶೇಷು ಎಬ್ಬಿಸುವಾಗ ಮೊದಲು ಅವಳು 'ಊಂ' ಎಂದು ಗೊಣಗುಟ್ಟುತ್ತಾ, ಪಕ್ಕದಲ್ಲಿದ್ದ ಉದ್ದವಾದ ದಿಂಬನ್ನು ತಬ್ಬಿಕೊಂಡು ಪುನಃ ನಿದ್ರೆ ಹೋದಳು. ಶೇಷಗಿರಿ ಅವಳ ಮೈ ಮೇಲಿದ್ದ ಹೊದ್ದಿಕೆಯನ್ನು ತೆಗೆದುದೇ ತಡ. ಕಾಮು ಕನವರಿ

ಸುತ್ತಾ, "ಯಾರು . . . . ಯಾರು ? . . . ಅಯ್ಯೋ ಕಳ್ಳ ! . . . ." ಎಂದು ಕಿರಿಚಲಾರಂಭಿಸಿದಳು.

ಅದೇ ಸಮಯದಲ್ಲಿ ಪಕ್ಕದ ಕೊಠಡಿಯಿಂದ ಶೇಷುವಿನ ತಂದೆ "ಏನೇಮ್ಮಾ . . . ಏನು ? " ಎಂದು ಭಯಪಟ್ಟವರಾಗಿ ವಿಚಾರಿಸಿದರು.

ಕೆಲಸ ಕೆಟ್ಟುಹೋಯಿತು. ಅವರು ಎದ್ದು "ಅಮ್ಮಾ ಕಾಮು ! ಇಗೋ ಬಂದೆ. ಹೆದರಬೇಡ . . . ." ಎಂದು ಹೇಳಿದರು. ಅವರು ಬರುವ ಶಬ್ದ ಕೇಳಿಸಿತು.

ಕಾಮು ಕಣ್ಣುಗಳನ್ನು ಹಿಸುಕುತ್ತಾ ಎದ್ದು ನೋಡಿದಳು. ಎದುರಿಗೆ ನಿಂತಿರುವವನು ಕಳ್ಳನಲ್ಲ. ತನ್ನ ಗಂಡ ಶೇಷಗಿರಿಯೆಂದು ಅರಿತಳು. ಅವಳ ನಿದ್ರೆ ಮಾಯವಾಯಿತು. ಶೇಷುವಿಗೆ ಭಯದಿಂದ ಮುಖ ಬಿಳುಪೇರಲು, ಈ ಇಕ್ಕಟ್ಟಿನಿಂದ ತಪ್ಪಿಸಿಕೊಳ್ಳಲು ದಾರಿ ಹುಡುಕುತ್ತಲಿದ್ದ. ತಂದೆ ಕೊಠಡಿಯ ಸಮೀಪಕ್ಕೆ ಬಂದುಬಿಟ್ಟರು. ಏನು ಮಾಡುವುದೆಂದು ಒದ್ದಾಡಿದ. ಕಾಮುವಿನ ಎರಡು ಕೈಗಳನ್ನೂ ಹಿಡಿದುಕೊಂಡು, "ಕಾಮು! ನನ್ನನ್ನು ಕಾಪಾಡು. ಯಾವುದೋ ಕೆಟ್ಟ ಕನಸನ್ನು ಕಂಡೆನೆಂದು ಅಪ್ಪನಿಗೆ ಸಮಾಧಾನ ಹೇಳಿಬಿಡು. ಅಗೋ ಬಂದುಬಿಟ್ಟರು. ಒಂದು ಬೆಕ್ಕು ಮೈಮೇಲೆ ಬಿದ್ದು ಕಿಟಕಿಯ ಮೂಲಕ ಓಡಿಬಿಟ್ಟಿತೆಂದಾದರೂ ಹೇಳಿಬಿಡು " ಎಂದು ಅಂಗಲಾಚಿದ.

ಕಾಮು ಉತ್ತರ ಹೇಳಲು ಬಾಯಿ ತೆರೆದಳು. ಅಷ್ಟರಲ್ಲಿ ಮಾವನವರ ವ್ಯಕ್ತಿ ತೋರಲು ತಟ್ಟನೆ ನಿಲ್ಲಿಸಿಬಿಟ್ಟಳು. ಮಂಚದ ಒಂದು ಕಡೆ ದೊಡ್ಡ ದಿಂಬಿನ ಮರೆಯಲ್ಲಿ ಕಣ್ಣು ಮಿಟಕಿಸುವುದರೊಳಗಾಗಿ, ಶೇಷು ಮೈಯನ್ನು ಹುದುಗಿಸಿ ಮಲಗಿಕೊಂಡು, ಮೈ ಹೊರಗೆ ಕಾಣಿಸದಂತೆ ಕಾಮುವಿನ ನೀಲಿ ಹೊದ್ದಿಕೆಯಿಂದ ತನ್ನನ್ನು ಮುಚ್ಚಿಕೊಂಡುಬಿಟ್ಟ.

ಶಿವರಾಮಯ್ಯರು ಒಳಗೆ ಬಂದು ಬಿಟ್ಟರು. "ಏನೇಮ್ಮಾ ! ಏನನ್ನು ನೋಡಿ ಹೆದರಿದೆ ? " ಎಂದು ಕೇಳಿದರು. ಅವಳೂ ಇಷ್ಟರೊಳಗೆ ಚೇತರಿಸಿಕೊಂಡುಬಿಟ್ಟಳು. ಮಾವನವರೊಡನೆ ಅವಳು ಸಹಜವಾಗಿ ಪಳಗಿರುವುದರಿಂದ, ಸಂಕೋಚಪಡದೆ "ಏನೂ ಇಲ್ಲಾಪ್ಪ ! ಕೆಟ್ಟ ಕನಸನ್ನು ಕಂಡೆ, ಕಳ್ಳ ಬಂದುಬಿಟ್ಟಂತೆ. ಒಂದು ಬೆಕ್ಕು ನನ್ನ ಮೇಲೆ

ಬಿದ್ದು ಕಿಟಕಿಯ ಮೂಲಕ ಒಡಿತು. ಅದರಿಂದಲೇ ಹೆದರಿದೆ" ಎಂದಳು ಶೇಷಗಿರಿ ಹೇಳಿಕೊಟ್ಟಂತೆಯೇ.

"ಆ ಶನಿ ಹಿಡಿದವಳಿಗೆ ಈ ಕಾಲಕ್ಷೇಪವನ್ನು ಕೇಳಲು ಹೋಗದಿದ್ದಲ್ಲಿ ವೈಕುಂಠ ಲಭಿಸದೋ? ಏನಪ್ಪಾ, ತಿಳಿಯದ ಹುಡುಗಿ ಒಂದೇ ಇದೆಯಲ್ಲಾ ಮನೆಯಲ್ಲಿ. ಹುಡುಗ ಓದುಬಿಟ್ಟು ಬರುವ ತನಕ ಒಂಟಿಯಾಗಿ ಇರುವುದೆ ಎಂದು ಯೋಚಿಸುತ್ತಾಳೆಯೇ? ಹೀಗೆ ಕದವನ್ನು 'ಡಾರ್' ಎಂದು ತೆರೆದುಬಿಟ್ಟು ಹೋದರೆ ಕಳ್ಳ ಕೂಡ ಒಂದು ದಿನ ಬಂದು ಧುಮುಕುವನು. ಶುದ್ಧ ಅವ್ಯವಸ್ಥೆ ಹೆಂಗಸು" ಎಂದು ತಮ್ಮ ಕುಟುಂಬವನ್ನು ಒಂದು ಸಾರಿ ಬಾಯಿ ತುಂಬಾ ಆಶೀರ್ವದಿಸಿದರು.

"ಅಪ್ಪಾ! ನನಗೆ ಈಗ ಏನೂ ಭಯವಿಲ್ಲ. ನೀವು ನಿದ್ರೆಯನ್ನು ಕೆಡಿಸಿಕೊಳ್ಳಬೇಡಿ. ಹೋಗಿ ಮಲಗಿಕೊಳ್ಳಿ. ಅನ್ಯಾಯವಾಗಿ ನಿಮ್ಮನ್ನು ಎಬ್ಬಿಸಿಬಿಟ್ಟೆ. ನಾನು ಕದವನ್ನು ಮುಚ್ಚಿಕೊಂಡು ಮಲಗಿಕೊಳ್ಳುತ್ತೇನೆ" ಎಂದಳು ಕಾಮು.

"ಹೋಗುತ್ತೇನೆ. ಕಣ್ಣುಗಳನ್ನು ಒರಸಿಕೊಂಡು, ನೀರಿನಿಂದ ಬಾಯಿ ಮುಕ್ಕಳಿಸಿ ಮಲಗಿಕೋ. ಅಮ್ಮಾ! ನಾನು ಹೋಗುತ್ತೇನೆ. ಜಾಗ್ರತೆ" ಎಂದು ಹೇಳಿ ಅವರು ಹೊರಗೆ ಹೋದರು.

* * *

ಅವರು ಮರೆಯಾದರೋ ಇಲ್ಲವೋ ಶೇಷಗಿರಿ ಕಂಬಳಿಯನ್ನು ಬೀಸಾಡಿಬಿಟ್ಟು ಎದ್ದು ಕುಳಿತ. ತಲೆದಿಂಬಿನ ಮರೆಯಲ್ಲಿ ಅಷ್ಟುಹೊತ್ತು ಹುದುಗಿಕೊಂಡಿದ್ದುದರಿಂದ ಅವನಿಗೆ ಉಸುರು ಕಟ್ಟಿತ್ತು. ತಲೆಯ ಕೂದಲು ಕೆದರಿ ಹೋಗಿ ಮುಖ ಕೆಂಪೇರಿ "ಎಲ್ಲವೂ ನಿನ್ನಿಂದ" ಎಂದು ಕಾಮುವನ್ನು ಬೈದ.

ಕಣ್ಣುಗಳು ಆಶ್ಚರ್ಯದಿಂದ ಅರಳಲು, ಕಾಮು "ನನ್ನಿಂದ ಏನು" ಎಂದಳು.

"ನಿನ್ನಿಂದಲೇ. ನೀನು ಏಕೆ ಹಾಗೆ ಕಿರಿಚಿದೆ? ನನ್ನ ಹೊರತು ಬೇರೆ ಯಾರು ಬಂದು ನಿನ್ನನ್ನು ಮುಟ್ಟುವರು?"

"ತಮಾಷೆಯಾಗಿದೆಯಲ್ಲಾ. ನೀವು ಈರೀತಿ ಬರುತ್ತೀರೆಂದು

ನನಗೆ ಹೇಗೆ ಗೊತ್ತು ? ಮೈಮರೆತು ನಿದ್ರೆ ಮಾಡುತ್ತಿರುವಾಗ ಮುಟ್ಟಿದರೆ ಯಾರು ತಾನೇ ಬೆದರದೆ ಇರುವರು ?"

ಶೇಷು ಕ್ರೋಧ ಉಕ್ಕಿ ಬರುತ್ತಿರಲು, "ಯಾಕೆ ನಿದ್ರೆ ಮಾಡಿದೆ ? ಅದೇ ನಿನ್ನ ತಪ್ಪು" ಎಂದ.

"ಹೀಗೆ ಕಳ್ಳತನದಿಂದ ಹೊದ್ದಿಕೆಯನ್ನು ಎಳೆದುಬಿಡುವುದು ತಪ್ಪಲ್ಲವೇನು ?"

"ತಪ್ಪೋ ! ಕಾಮು, ನಿನ್ನ ನಿದ್ರೆಯನ್ನು ನಾನು ಭಂಗ ಮಾಡಿದುದು ತಪ್ಪೆ ? ಕ್ಷಮಿಸು. ಆದರಿಂದಲೇ ಹೀಗೆ ಕಷ್ಟಪಡುತ್ತಿದ್ದೇನೆ" ಎಂದು ಹೇಳಿ, ಕಾಮುವನ್ನು ಒಂದು ತರಹವಾಗಿ ನೋಡಿಬಿಟ್ಟು ಅಸಮಾಧಾನದೊಡನೆ ಕೊಠಡಿಯನ್ನು ಬಿಟ್ಟು ಹೊರಟುಹೋದ.

ಆದರೆ ತಕ್ಷಣ ಅವನು ಹಿಂತಿರುಗಬೇಕಾಯಿತು. ಶಿವರಾಮಯ್ಯರು ತಮ್ಮ ಕೊಠಡಿಯಲ್ಲಿ ದೀಪವನ್ನು ದೊಡ್ಡದಾಗಿ ಹೊತ್ತಿಸಿ ಇಟ್ಟು, ತಲೆಗೆ ಕಂಬಳಿಯ ಕುಲಾವಿಯನ್ನು ಹಾಕಿಕೊಳ್ಳುತ್ತಿದ್ದರು. ಆ ದಾರಿಯಲ್ಲಿ ಹೋದರೆ ಶೇಷಗಿರಿ ಖಂಡಿತ ಸಿಕ್ಕಿಬೀಳುತ್ತಿದ್ದ.

ನಿಟ್ಟುಸಿರು ಬಿಡುತ್ತಾ, ಶೇಷು ಪುನಃ ತನ್ನ ಕೊಠಡಿಗೇ ಬಂದು, "ನಿನ್ನಿಂದಲ್ಲವೇ ಇದೆಲ್ಲಾ? ಅಪ್ಪನನ್ನು ಕರೆಯದಿದ್ದರೆ" ಎಂದ.

ಕಾಮಾಕ್ಷಿ ತನ್ನ ಪತಿಯ ಮೇಲೆ ಸ್ವಲ್ಪವೂ ಪಶ್ಚಾತ್ತಾಪಗೊಳ್ಳಲಿಲ್ಲ. ಅವನ ಸಂಕಟವನ್ನು ಕಂಡು ಅವಳಿಗೆ ನಗೆ ತಡೆಯಿಲ್ಲದೆ ಬಂದಿತು. ತಲೆಯನ್ನು ವಕ್ರವಾಗಿಟ್ಟುಕೊಂಡು, "ನನ್ನ ನಿದ್ರೆಯನ್ನು ಕೆಡಿಸಿದುದೂ ಅಲ್ಲದೆ ಈ ಚಳಿಯಲ್ಲಿ ಗಡಗಡನೆ ಮೈ ನಡುಗುವಂತೆ ಹೊದ್ದಿಕೆಯನ್ನೂ ತೆಗೆದುಕೊಂಡಿರಿ" ಎಂದಳು.

"ಈ ಮನೆಯಲ್ಲಿ ಬೇರೆ ಹೊದ್ದಿಕೆಯೇ ಇಲ್ಲವೆ, ಹೋಗಿ ನಿನ್ನ ತೌರುಮನೆಯವರು ಕೊಟ್ಟ ಹೊದ್ದಿಕೆಗೆ ಆಶೆಪಟ್ಟು ತೆಗೆದುಕೊಂಡೆನೇನು ?" ಅದರ ಮೇಲೆ ಶೇಷಗಿರಿಗೆ ಮಾತನಾಡಲು ಸಂದರ್ಭ ಒದಗಲಿಲ್ಲ. ಪುನಃ ಆ ಭಯಂಕರ ತಂದೆ ಅಲ್ಲಿಗೆ ಬರುವ ಶಬ್ದ ಕೇಳಬಂತು.

"ಅಯ್ಯೋ ! ಎಷ್ಟು ಹೊತ್ತು ನಾನು ಉಸಿರುಕಟ್ಟಿಕೊಂಡು ಸಾಯಬೇಕೋ, ಈ ದಿಂಬಿನ ಅಡಿಯಲ್ಲಿ . . . . ! ಕಾಮೂ ! ಅವರನ್ನು

ಹೇಗಾದರೂ ಮಾಡಿ ಹೊರಟುಹೋಗುವಂತೆ ಮಾಡು" ಎಂದು ಮೆಲ್ಲಗೆ ಗೋಗರೆಯುತ್ತಾ ಕಾಮುವನ್ನು ಬೇಡಿಕೊಂಡ.

ಮಾವನವರು ಕೊಠಡಿಯೊಳಕ್ಕೆ ಬಂದೊಡನೆ, ಕಾಮಾಕ್ಷಿ ಇನ್ನೂ ನಿದ್ರೆಮಾಡದೆ ಕುಳಿತಿರುವುದನ್ನು ಕಂಡು, "ಏನೇಮ್ಮಾ! ಇನ್ನೂ ಮಲಗಲಿಲ್ಲವೇ? ಭಯವಾಗಿದೆಯೇನು?" ಎಂದು ಕೇಳಿದರು.

"ಭಯವೇನು? ನೀವು ನನಗಾಗಿ ನಿದ್ರೆಯನ್ನು ಕೆಡಿಸಿಕೊಳ್ಳಬೇಡಿ, ಅಪ್ಪಾ!" ಎಂದಳು.

"ಇರಲಿ, ಅಮ್ಮಾ! ಆ ಮೆದಳು ಇಲ್ಲದವಳು ಬರುವವರೆಗೆ ನಾನು ಇಲ್ಲೇ ಇರುತ್ತೇನೆ" ಎಂದು ಹೇಳುತ್ತಾ ಒಂದು ಕುರ್ಚಿಯ ಮೇಲೆ ಕುಳಿತುಬಿಟ್ಟರು.

ಕಾಮು ಮಂಚದ ಓರೆಗೆ ಅಂಟಿಕೊಂಡು ಕುಳಿತಿದ್ದಳು. ಚಳಿಯಿಂದ ಆವಳ ಮೈ ನಡುಗಿತು.

"ಅಮ್ಮಾ! ಪಕ್ಕದಲ್ಲಿರುವ ಆ ದಿಂಬನ್ನು ಜರುಗಿಸಿಬಿಟ್ಟು ಇನ್ನು ಮಲಗಿಕೊ. ನಿನ್ನ ಹೊದ್ದಿಕೆಯೆಲ್ಲಿ? ತೆಗೆದು ಹೊದ್ದುಕೊ" ಎಂದರು.

"ಬಹಳ ಸೆಕೆಯಾಗಿದೆ, ಅಪ್ಪಾ . . . . ಹೊದ್ದಿಕೆ ಬೇಡ."

"ಈ ಕಾಲದಲ್ಲೇ ಸೆಕೆ? ಇಗೋ ತಲೆಯಿಂದ ಹಿಡಿದು ಕಾಲಿನವರೆಗೆ ನಾನು ಕಂಬಳಿಯನ್ನು ಸುತ್ತಿಕೊಂಡಿರುವೆನು. ನನಗೆ ಗಡಗಡನೆ ನಡುಗು. ಆಮೇಲೆ ನೆಗಡಿ ಹಿಡಿದುಕೊಂಡು ಜ್ವರ ಬಂದುಬಿಡುತ್ತದೆ. ಹೊದ್ದಿಕೆಯನ್ನು ತೆಗೆದುಕೊಡುವೆನು" ಎಂದು ಅದನ್ನು ತೆಗೆಯಲು ಎದ್ದರು.

ಗುಟ್ಟು ರಟ್ಟಾಗಿಹೋಗಿಬಿಟ್ಟೀತು ಎಂದು ಹೆದರಿ, "ಬೇಡಾಪ್ಪಾ" ಎಂದು ಹೇಳಿ ಕಾಮು ತಟ್ಟನೆ ತನ್ನ ಮಾವನವರ ಸಮೀಪಕ್ಕೆ ಬಂದು ಕುಳಿತುಬಿಟ್ಟಳು.

"ನನಗೆ ಚಳಿಯಿಲ್ಲ . . . . ಸ್ವಲ್ಪ ಭಯದಿಂದಲೇ ನಡುಗುತ್ತಿದ್ದೆ. ಆ ಬೆಕ್ಕು . . . . ಅಪ್ಪಾ! ನೆನಸಿಕೊಂಡರೂ ಕೂಡ ಭಯವಾಗಿದೆ. ಉರಿಯುವ ಕೊಳ್ಳಿಯಂತೆ ಎಷ್ಟು ದೊಡ್ಡ ಕಣ್ಣು ಅದಕ್ಕೆ?" ಎಂದು ಹೇಳಿ ಧೈರ್ಯದಿಂದ ವರ್ತಿಸಿದಳು. ಆದರೆ ಆ ಮುದಿಗೊಡ್ಡು ಸ್ವಲ್ಪ

ಸ್ವಲ್ಪದರಲ್ಲಿ ಜರುಗುವ ಹಾಗೆ ಕಾಣಲಿಲ್ಲ. ನೀಲಿ ಕಂಬಳಿಯ ಮರೆಯಲ್ಲಿ ಹುದುಗಿಕೊಂಡಿದ್ದ ಒಂದು ಆತ್ಮಕ್ಕೆ ಕಾಮುವನ್ನು ಹೊಡೆಯಬೇಕೆನ್ನುವಷ್ಟು ಕ್ರೋಧ. ಅವರನ್ನು ಆಚೆಗೆ ಕಳುಹಿಸದೆ ಮಾತಿಗೆ ಜಾಗ ಕೊಟ್ಟು ನಿಲ್ಲಿಸುತ್ತಾಳಲ್ಲಾ! ಇಲ್ಲಿ ಒಂದು ಪ್ರಾಣಿ ಹೀಗೆ ತಪಿಸುತ್ತಿದೆ ಎಂಬುದನ್ನೂ ಮರೆತು!!

ಇಷ್ಟರಲ್ಲಿ ಕಾಲಕ್ಷೇಪಕ್ಕೆ ಹೋಗಿದ್ದ ಸುಬ್ಬಲಕ್ಷ್ಮಿ ಹಿಂತಿರುಗಿ ಬಂದಳು. ಶಿವರಾಮಯ್ಯರು ತಮ್ಮ ಕುಟುಂಬವನ್ನು ನೋಡಿದೊಡನೆಯೇ ಪರಿಹಾಸ್ಯವಾಗಿ, "ಸತ್ಕಥೆಯನ್ನೆಲ್ಲಾ ಕೇಳಿಯಾಯಿತೋ, ಇಲ್ಲವೋ? ಇನ್ನು ಎಷ್ಟು ದಿವಸಗಳೊಳಗೆ ವೈಕುಂಠಯಾತ್ರೆ ಲಭಿಸುವುದು?" ಎಂದರು.

"ನಾನು ವೈಕುಂಠಕ್ಕೆ ಹೋಗುತ್ತೇನೆ, ಹೋಗುವುದಿಲ್ಲ, ನಿಮಗೇನು ಅಷ್ಟೊಂದು ಪರಿಹಾಸ್ಯ ನನ್ನನ್ನು ನೋಡಿದರೆ?" ಎಂದಳು ಸುಬ್ಬಲಕ್ಷ್ಮಿ.

"ಇಲ್ಲ. ಮನೆಯಲ್ಲಿ ಅರಿಯದ ಹುಡುಗಿಯೊಂದು ಒಂಟಿಯಾಗಿದೆಯಲ್ಲಾ ಎಂದು ನಿನಗೆ ತೋರಲಿಲ್ಲವಲ್ಲಾ. ಅವಳನ್ನು ನೋಡಿಕೊಳ್ಳುವವರು ಯಾರು?"

ಸುಬ್ಬಲಕ್ಷ್ಮಮ್ಮ ನಗುತ್ತಾ ತನ್ನ ಸೊಸೆಯನ್ನು ನೋಡಿ "ಮನೆಯಲ್ಲಿ ದೊಡ್ಡವರಾಗಿ ನೀವು ಇದ್ದೀರಿ. ಹುಡುಗ ಇದ್ದಾನೆ. ಕಟ್ಟುಕಾವಲಿರಲು ಚಿಕ್ಕ ಮಗುವೇನು ಅವಳು?" ಎಂದಳು.

ಶಿವರಾಮಯ್ಯರು ಹುಬ್ಬು ಗಂಟುಹಾಕಿಕೊಂಡು, "ನಿನ್ನ ಮಗನನ್ನು ಈ ಕೆಲಸಕ್ಕೆ ಹಾಕಿಬಿಟ್ಟರೆ ಅವನು ಓದಿದ ಹಾಗೆಯೇ. ಭೇಷ್" ಎಂದರು.

"ಆ ಕಾಲದಲ್ಲೇ ಒಂದು ಕಥೆಗೋ ಕಾಲಕ್ಷೇಪಕ್ಕೋ ನನ್ನನ್ನು ಹೋಗಲು ಬಿಡುತ್ತಿರಲಿಲ್ಲ. ಇಷ್ಟೊಂದು ಪ್ರಾಯವಾದ ಮೇಲೆ ನನ್ನಿಷ್ಟದಂತೆ ಹೋಗುವುದು ನಿಮಗೆ ಹಿಡಿಯಲಿಲ್ಲವೋ, ಏನು? ಸಾಕು. ನೀವು ಏಕೆ ನಿದ್ರೆಗೆಡುತ್ತೀರಿ? ಶೀನು ಬರಲು ಇನ್ನೂ ಹೊತ್ತಾಗಬಹುದು. ನಾನು ಕಾಮುವನ್ನು ನೋಡಿಕೊಳ್ಳುತ್ತೇನೆ. ಹೋಗಿ" ಎಂದಳು.

ಶಿವರಾಮಯ್ಯರು ಮಲಗಲು ತಮ್ಮ ಕೊಠಡಿಗೆ ಹೋದರು. ಸುಬ್ಬಲಕ್ಷ್ಮಿ ದೃಷ್ಟಿ ಮಂಚದ ಓರೆಯಲ್ಲಿ ಬಿದ್ದಿತು. ನೀಲೀ ಹೊದಿಕೆಯ

ಕೆಳಗೆ ದಿಂಬು ಅಲ್ಲಾಡುವುದು ಅವಳಿಗೆ ಗೊತ್ತಾಗಲಿಲ್ಲ. "ಇದು ಏನೇ, ಹಾಸಿಗೆ ಅರ್ಧಭಾಗ ಮುಚ್ಚಿಕೊಂಡಿದೆಯಲ್ಲಾ? ಅದನ್ನು ಜರುಗಿಸಿಬಿಟ್ಟು ಮಲಗಿಕೊ. ಎಷ್ಟು ಹೊತ್ತು ಎಚ್ಚರವಾಗಿರುವೆ ?" ಎಂದಳು.

ಕಾಮು ತಟ್ಟನೆ, "ಮಲಗಿಕೊಂಡರೆ ನಿದ್ರೆ ಹತ್ತಲಿಲ್ಲ, ಅಮ್ಮಾ ! ಆ ದಿಂಬು ಪಕ್ಕದಲ್ಲಿರುವುದರಿಂದ ಏನೂ ಕಷ್ಟವಿಲ್ಲ" ಎಂದಳು.

ಸುಬ್ಬಲಕ್ಷ್ಮಿ ಅವಳ ಮಾತನ್ನು ಕೇಳದೆ, ಇರಲಿ : ಅದನ್ನು ಒಂದು ಕಡೆಗೆ ತಳ್ಳಿಬಿಡುತ್ತೇನೆ. ಧಾರಾಳವಾಗಿ ನೀನು ಮಲಗಿಕೋ ಎಂದು ಹೇಳುತ್ತಿರುವಾಗಲೇ ಆ ದಿಂಬು ತಾನಾಗಿಯೇ ಎದ್ದು ನಿಂತಿತು. ಸುಬ್ಬಲಕ್ಷ್ಮಿ ಮೂಗಿನಮೇಲೆ ಬೆರಳಿಟ್ಟುಕೊಂಡು ಬೆಕ್ಕಸಬೆರಗಾಗಿ, "ಶೇಷು . . . . ನೀನೇನೋ ಧಾಂಡಿಗ" ಎಂದಳು.

ಅವನ ಕಣ್ಣುಗಳಿಂದ ನೀರು ಬರುವ ಸಮಯ. ಆದರೆ ಅದು ಹೇಗೋ ಹಬೆಯಾಗಿ ಆರಿಹೋಯಿತು ವಿದ್ಯುಚ್ಛಕ್ತಿ ತಗುಲಿದವನಂತೆ ಪಕ್ಕನೆ ಎದ್ದ. ಅಯ್ಯೋ ರಾಮ ! ಅವನಿಗೆ ಬಂದೊದಗಿದ ವಿಪತ್ತು ಅಷ್ಟರಲ್ಲಿಯೇ ಮುಗಿಯಲಿಲ್ಲ. ಆ ಹಾಳು ಬ್ರಾಹ್ಮಣ ಮಫ್ಲರನ್ನು ಆ ಕೊಠಡಿಯಲ್ಲೇ ಮರೆತುಬಿಡಬೇಕೆ? ಅದನ್ನು ತೆಗೆದುಕೊಂಡು ಬರಲು ಪುನಃ ಅಲ್ಲಿಗೆ ಬಂದರು. ಮಗನನ್ನು ಕಂಡೊಡನೆ ಅವರ ಮುಖ ಕೆಂಪೇರಿತು. "ಇದರೊಳಗೆ ಓದು ಮುಗಿಸಿಬಿಟ್ಟೆಯಾ ? ಗಂಟೆ ಎಷ್ಟು? ಎಂದು ಶೇಷುವನ್ನು ಕೇಳಿದರು.

ಗಂಟಲೊಳಗೆ ಗುಂಡಗೆ ಒಂದು ಬಿಂದು ತಡೆಯಲು, "ಏಕೆ . . ? ಹನ್ನೊಂದು" ಎಂದ ಶೇಷು.

"ಇಲ್ಲವೇ ಇಲ್ಲ. ಇನ್ನೂ ಮೂವತ್ತು ನಿಮಿಷಕ್ಕೆ ಮೇಲೆ ಇದೆ ಹನ್ನೊಂದು ಹೊಡೆಯುವುದಕ್ಕೆ ಛೀ ! ಹೋಗು ಕೆಳಗೆ ಹೋಗಿ ಓದು" ಎಂದರು.

ಈ ಬಗೆಯ ಕರುಣಾಮಯ ಸನ್ನಿವೇಶಗಳಲ್ಲಿ ಶೇಷುವಿನ ತಾಯಿ ಅವನ ಕಡೆ ವಹಿಸಿಕೊಂಡು ಮಾತನಾಡುವ ವಾಡಿಕೆ. ಅದರಂತೆಯೇ ಇಂದೂ ಆಕೆ, "ಅವನು ಕೆಳಗೆ ಹೋಗಿ ಓದುವುದೇನೂ ಬೇಡ. ಸೊಳ್ಳೆ ಉಪದ್ರವ ಬಹಳ ಜಾಸ್ತಿ ರಸ್ತೆ ಕಡೆಯ ಕೊಠಡಿಯಲ್ಲಿ. ಮಗುವಿಗೆ

ಮಲೇರಿಯಾ ಬಂದರೆ ಆಮೇಲೆ ಯಾರು ಅನುಭವಿಸುವರು ? ಎಲ್ಲಿ ಓದಿದ ರೇನು ? ಪಾಠ ಒಂದೇ ತಾನೇ ?" ಎಂದಳು.

ತನ್ನ ತಾಯನ್ನು ವಿಶ್ವಾಸದೊಡನೆ ಶೇಷಗಿರಿ ನೋಡಿದ.

"ಹಾಗಾದರೆ ನನ್ನ ಕೊಠಡಿಗೆ ಹೋಗಿ ಅಲ್ಲಿ ಓದಿಕೋ. ಈ ದಿನ ಹೇಗಾದರೂ ಮಾಡಿ 'ಚೀಟಿಂಗ್ ಚಾಪ್ಟ'ರನ್ನು (Cheating Chapter) ಮುಗಿಸಿಬಿಡಬೇಕು . . . . ಗೊತ್ತಾಯಿತೆ " ಎಂದರು.

" ಸರಿ " ಎಂದ ಶೇಷು, ಬಾಗಿದ ತಲೆಯನ್ನು ಮೇಲಕ್ಕೆತ್ತದೆ.

ತಾಯಿಗೆ ಮಗ ಪಡುತ್ತಿರುವ ಪಾಡು ತಿಳಿಯಿತು. ಏನೆಂದರೂ ಸ್ತ್ರೀ ಜನ್ಮಗಳಿಗೆ ಊಹಿಸುವ ಶಕ್ತಿ ಹೆಚ್ಚು. ಸುಬ್ಬಲಕ್ಷಮ್ಮ ಪತಿಯನ್ನು ನೋಡಿ "ಅವನು ಅಲ್ಲಿಗೆ ಬಂದುಬಿಟ್ಟರೆ ನಾನು ನಿದ್ರೆಮಾಡಬೇಡವೆಂದು ತೋರುತ್ತದೆ. ದೀಪವಿದ್ದರೆ ನಾನು ಕಣ್ಣು ಮುಚ್ಚಲಾರೆ. ಅವನು ಇಲ್ಲಿಯೇ ಓದಲಿ " ಎಂದಳು.

"ಇದೇನೋ ಇಂದು ಹೊಸ ತರಹವಾಗಿದೆಯಲ್ಲಾ" ಎಂದರು ಅಯ್ಯರು.

ಆಕಳಿಸುತ್ತಾ, "ಸಾಕು ! ಮೈಯೆಲ್ಲಾ ಕೊರೆಯುತ್ತಿದೆ. ನಿದ್ರೆ ಬರುತ್ತಿದೆ, ನನಗೆ" ಎಂದಳು ಸುಬ್ಬಲಕ್ಷ್ಮಿ.

"ಸರಿ. ನೀನು ಕಾಮುವನ್ನು ಆ ಕೊಠಡಿಗೇ ಕರೆದುಕೊಂಡು ಹೋಗು. ಶೇಷು ಇಲ್ಲಿಯೇ ಓದಲಿ" ಎಂದು ಬೇರೊಂದು ದಾರಿಯನ್ನು ಕಂಡುಹಿಡಿದರು ಅಯ್ಯರು.

ಅದಕ್ಕೂ ಸುಬ್ಬಲಕ್ಷ್ಮಿ ಜಗ್ಗಲಿಲ್ಲ. "ನಿಮ್ಮೊಡನೆ ನಾನು ಬಹಳ ವಿಷಯಗಳು ಮಾತನಾಡಬೇಕು. ಕಾಮು ಸಂಗಡವಿದ್ದರೆ ಮಾತನಾಡ ಲಾಗುವುದಿಲ್ಲ" ಎಂದು ಹೇಳಿ ತಕ್ಷಣ ಮಗನನ್ನು ಕುರಿತು, "ಅಪ್ಪಾ, ಶೇಷೂ ! ನೀನು ಇಂದು ಇಲ್ಲಿಯೇ ಓದಿಕೊ. ಕಾಮುವಿಗೂ ಜೊತೆ ಯಾಗಿರುವುದು. ಇದರಿಂದ ಯಾರಿಗೂ ಕಷ್ಟವಿಲ್ಲ. ಅವಳ ಪಾಡಿಗೆ ಅವಳು ಮಲಗುತ್ತಾಳೆ" ಎಂದಳು

ಶೇಷುವಿಗಿಂತ ಬೇರೆ ಯಾರಿಗೆ ತಾಯಿಯಮೇಲೆ ಪ್ರೀತಿ ಜಾಸ್ತಿ ಇರುವುದು ? ಆಕೆಯ ವಚನದಂತೆ ನಡೆಯಲು ಸಮ್ಮತಿಸಿದ. ಅಯ್ಯರು

ತಮ್ಮ ಹೆಂಡತಿಯ ಮಾತುಮೀರಿ ಏನು ಹೇಳಲೂ ಸಾಧ್ಯವಿಲ್ಲದೆ "ಊಂ! ಚೆನ್ನಾಗಿ ಓದೋ. ಹೆಚ್ಚು ನನ್ನಿಂದ ಹೇಳಲು ಸಾಧ್ಯವಿಲ್ಲ. ನಿನ್ನ ಕ್ಷೇಮ ಕ್ಕಾಗಿಯೇ ಹೇಳುತ್ತೇನೆ " ಎಂದರು.

"ಅಪ್ಪಾ! ನೀವು ಬೇಕಾದರೆ ನೋಡಿ, ಈ ಸಾರಿ ಪರೀಕ್ಷೆಯಲ್ಲಿ . . . ." ಎಂದ ಶೇಷು

"ಗಟ್ಟಿಯಾಗಿ ಓದು. ನನ್ನ ಕಿವಿಗೆ ಕೇಳಿಸುವಂತೆ. ಹಾಗೆ ಓದಿದ ರೇನೇ ಮೆದುಳಿಗೆ ಹತ್ತುವುದು. ಈ ದಿನ ಹೇಗಾದರೂ ಮಾಡಿ 'ಚೀಟಿಂಗ್'ನ್ನು ಮುಗಿಸುವುದಕ್ಕೆ ನೋಡು. ನಾಳಿಯ ದಿನ ಅದರ ಮೇಲೆ ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ " ಎಂದರು.

ತಾಯಿ ತಂದೆ ಕೊಠಡಿಯಿಂದ ಹೊರಗೆ ಹೊರಟುಹೋದ ಮೇಲೆ, ಶೇಷಗಿರಿ ಕದವನ್ನು ಮುಚ್ಚಿದ. ಕಾಮು ಇಷ್ಟರೊಳಗೆ ಮಂಚದ ಮೇಲೆ ಮಲಗಿ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು.

"ಕಾಮೂ!" ಎಂದು ಅವಳ ಸಮೀಪಕ್ಕೆ ಬಂದು ಕೂಗಿದ ಶೇಷು.

ಅದಕ್ಕೆ ಉತ್ತರವೇ ಇಲ್ಲ.

ಶೇಷು ಪ್ರಾರಂಭಿಸಿಬಿಟ್ಟ. "ಚಿನ್ನಾ! ಇಗೋ ನನ್ನನ್ನು ನೋಡು. ಹೊರಗೆ ಬೆಳದಿಂಗಳು ಎಷ್ಟು ಸುಂದರವಾಗಿ ಬೆಳಗುತ್ತಿದೆ ಕಣ್ಣು ತೆರೆ ಯುವುದಿಲ್ಲವೇ? ನನ್ನಮೇಲೇನಾದರೂ ಕೋಪವೇ? ಏಕೆ ಮಾತ ನಾಡುವುದಿಲ್ಲ? "

ನಾಚಿಕೆಯೊಡನೆ ಕಣ್ಣು ಮುಚ್ಚಿಕೊಂಡು, " ಸುಂದರವಾಗಿಯೇ ಬೆಳಗುತ್ತಿದೆ ಬೆಳದಿಂಗಳು ನಿಮ್ಮ ಮೇಲೆ ನನಗೆ ಏನು ಕೋಪ" ಎಂದಳು ಕಾಮಾಕ್ಷಿ.

"ಹಾಗೆಯೇ "

"ಇಂಥಾ ರಾತ್ರಿ ಹಾಗೆಯೇ."

"ಕಣ್ಣು ತೆರೆದು ಸ್ವಲ್ಪ ನೋಡು. ಕಿಟಕಿ ಬಾಗಿಲುಗಳನ್ನು ಚೆನ್ನಾಗಿ ತೆರೆಯಲೇ? ನಿನಗೆ ಚಳಿಯಾದರೆ ಬೇಡ."

ಕಾಮು ಮಾರುತ್ತರಗೊಡಲಿಲ್ಲ. ತನ್ನನ್ನೇ ಎವೆಯಿಕ್ಕದೇ ನೋಡು ತ್ತಿರುವ ಶೇಷುವನ್ನು ನೇರವಾಗಿ ನೋಡಲು ನಾಚಿಕೆಗೊಂಡಳು. ಅವ

ನನ್ನು ಓರೆಗಣ್ಣಿನಿಂದ ನೋಡುವಾಗ ಅವಳಿಗೆ ನಗು ಬಂದುಬಿಟ್ಟಿತು. "ಆ ಪಕ್ಕವನ್ನು ಮಾತ್ರ ಮುಚ್ಚಿಬಿಟ್ಟರೆ ಒಳ್ಳೆಯದು" ಎಂದಳು.

"ಈಗ ಎಲ್ಲಿ ಹೋಯಿತು ನಿನ್ನ ನಿದ್ದೆ? ಮಾಯಗಾತಿ! ನನ್ನನ್ನು ಅವಸ್ಥೆಗೆ ಸಿಕ್ಕಿಸಿ ತಮಾಷೆ ನೋಡಿದೆಯಲ್ಲವೇ?" ಎಂದ.

"ನೀವು ಬಹಳ ಒಳ್ಳೆಯವರೇನು? ನಾನು ನಿದ್ರೆ ಮಾಡುತ್ತಿದ್ದರೆ, ನಿಮಗೇಕೆ ಅಷ್ಟೊಂದು ಕೋಪ ಬರಬೇಕು? ನಿಮಗೆ ನಿದ್ರೆ ಬಾರದಿದ್ದರೆ ನನಗೂ ಬರಬಾರದೇ, ಏನು?" ಎಂದಳು.

"ಹುಚ್ಚೀ! ಇಂಥಹ ರಾತ್ರಿಯಲ್ಲಿ ಯಾರಿಗೆ ತಾನೇ ನಿದ್ರೆ ಹತ್ತುವುದು?"

"ಇದೆಲ್ಲವೂ ನಿಮ್ಮ 'ಪೀನಲ್ ಕೋಡ್'ನಲ್ಲಿ ಬರೆದಿದೆಯೇನು?"

"ಹೌದು. ಇಂತಹ ರಾತ್ರಿಗಳಲ್ಲಿ ನಿದ್ರಿಸಿದರೆ ಎಂತಹ ದಂಡನೆಯೋ, ಅದೂ ಕೂಡ ಬರೆದಿದೆ ಆ ಪುಸ್ತಕದಲ್ಲಿ. ಅದೇನೆಂದು ಹೇಳಲಿ."

ಕಾಮು ಶೇಷುವಿನ ಬಾಯನ್ನು ತನ್ನ ತೆಳುವಾದ ಕರದಿಂದ ಮುಚ್ಚಿ, "ಸಾಕು, ನೀವು ಪಾಠವನ್ನು ಓದಿ. ಈಗ ಬೇಡ. ನಾಳೆಯ ದಿನ ಅಪ್ಪಾವರು ಪ್ರಶ್ನೆ ಕೇಳುವಾಗ ಹೇಳಿ. ಅಪ್ಪಾ ಬಂದುಬಿಟ್ಟಾರು. ಗಟ್ಟಿಯಾಗಿ ಓದಿ" ಎಂದಳು ಹಾಸ್ಯವಾಗಿ ನಗುತ್ತಾ.

ಅದೇ ಸಮಯದಲ್ಲಿ ಬಾಗಿಲು ತಟ್ಟುವ ಶಬ್ದ ಕೇಳಬಂದಿತು. ಹೊರಗಿನಿಂದ ಶಿವರಾಮಯ್ಯರು, "ಶೇಷೂ, ಶೇಷೂ!" ಎಂದು ಕೂಗಿದರು. ಒಂದೂ ತಿಳಿಯದವನ ಹಾಗೆ ಪುಸ್ತಕವನ್ನು ತೆಗೆದು ಓದುವವನಂತೆ ಮೇಜಿನ ಹತ್ತಿರಕ್ಕೆ ಹೋಗಿ ದೀಪವನ್ನು ದೊಡ್ಡದು ಮಾಡಿದ. ಅಯ್ಯೋ ಗ್ರಹಚಾರವೇ, 'ಪೀನಲ್ ಕೋಡ್' ಪುಸ್ತಕವನ್ನೇ ತರಲು ಮರೆತುಬಿಟ್ಟಿದ್ದ. ಕಾನೂನು ಸಂಬಂಧವಾದ ಪುಸ್ತಕ ಆ ಕೊಠಡಿಯಲ್ಲಿ ಎಲ್ಲಿ ಹುಡುಕಿದರೂ ಸಿಗಲಿಲ್ಲ. ಕಡೆಗೆ ಗೂಡನ್ನು ಹುಡುಕಿ ನೋಡುವಲ್ಲಿ, ಅಮ್ಮನ 'ಮಹಾ ಭಾರತ ವಚನ' ಎಂಬ ದೊಡ್ಡ ಪುಸ್ತಕ ಸಿಕ್ಕಿತು. ಅದಾದರೂ ಸಿಕ್ಕಿತಲ್ಲಾ ಎಂದು ದೊಡ್ಡ ಧ್ವನಿಯಲ್ಲಿ ತಾನು ಬಾಯಿಪಾಠ ಮಾಡಿದ್ದ ಕೆಲವು ಕಾನೂನುಗಳನ್ನು ಹೇಳಿಕೊಂಡು ಓದುವವನಂತೆ ನಟಿಸಿದ.

ತಂದೆಯವರು ಹತ್ತು ಹನ್ನೆರಡು ಸಾರಿ ಕರೆದನಂತರವೆ ಅವನು ಎದ್ದು ಬಂದು ಕದವನ್ನು ತೆರೆದದ್ದು.

ಶಿವರಾಮಯ್ಯರಿಗೆ ಒಳಗೊಳಗೆ ಸಂತೋಷ ಹುಡುಗ ಇಷ್ಟಾದರೂ ಓದುತ್ತಾನಲ್ಲಾ ಎಂದು. ಯಾವುದಕ್ಕೂ ಒಳಗೆ ಬಂದು ತಮ್ಮ ಸೊಸೆ ನಿದ್ರಿಸುತ್ತಿದ್ದಾಳೆಯೆ ಇಲ್ಲವೆ ಎಂದು ನೋಡಿಕೊಂಡು ಹೋದರು. ಶೇಷು ವಿನ ವಿಚಾರದಲ್ಲಿ ನಂಬಿಕೆ ಕಡಿಮೆ ಅವರಿಗೆ. ಕಾಮುವನ್ನು ಎರಡಾವರ್ತಿ ಕರೆದು ನೋಡಿದರು. ನಿದ್ರೆಮಾಡುವವರು ಎಲ್ಲಿಯಾದರೂ ಉತ್ತರ ಹೇಳು ವುದುಂಟೆ? "ಲೋ, ನಿಧಾನವಾಗಿಯೆ ಓದು. ನಿನ್ನ ಗದ್ದಲದಲ್ಲಿ ಕಾಮು ವಿನ ನಿದ್ರೆಗೆ ಭಂಗವಾದೀತು. 'ಚೀಟಿಂಗ್' ಇಂದು ಮುಗಿಸಿಬಿಡ ಬೇಕು" ಎಂದರು.

"ಸರಿಯಪ್ಪ, ಮೆಲ್ಲಗೆ ಓದುತ್ತೇನೆ" ಎಂದ ಪಿತೃವಾಕ್ಯಪರಿಪಾಲಕ.

"ಪುನಃ ಬರುವೆ, ಗಂಟೆ ಇನ್ನೂ ಹನ್ನೊಂದು ಹೊಡೆದಿಲ್ಲ. ಈ ಪಕ್ಕದ ಕಿಟಕಿಯನ್ನು ತೆರೆದು ಬಿಟ್ಟು ಓದು. ನನ್ನ ಕಿವಿಗೆ ಕೇಳಬೇಕು". ಎಂದು ಹೇಳಿ ಹೋದರು ಅಯ್ಯರು.

ಕಾಮು ಸ್ವಲ್ಪವೂ ಅಲುಗಾಡಲಿಲ್ಲ. ನಿದ್ರಿಸುವಂತೆ ಚೆನ್ನಾಗಿ ಅಭಿ ನಯಿಸಿದಳು. ಅವಳ ಕಣ್ಣು ರೆಪ್ಪೆಗಳು ಮಾತ್ರ ಅಧಿಕವಾಗಿ ಅದುಮಿ ಕೊಂಡಿದ್ದುದರಿಂದಲೋ ಏನೋ ಅಲುಗಾಡುತ್ತಿದ್ದವು. ಶೇಷುವನ್ನು ನೋಡುವಾಗಲೆಲ್ಲಾ ಮುಗುಳ್ನಗೆ ಅವಳ ತುಟಿಗಳ ಮೇಲೆ ಕುಣಿಯುತ್ತಿತ್ತು.

ಆ ಪಕ್ಕದ ಕಿಟಕಿಯ ಬಾಗಿಲನ್ನು ಶೇಷು ತೆರೆದುದರಿಂದ, ಒಂದು ಸೂಜಿ ಕೆಳಗೆ ಬಿದ್ದ ಶಬ್ದ ಕೂಡ ಶಿವರಾಮಯ್ಯರ ಕೊಠಡಿಗೆ ಮುಟ್ಟುತ್ತಿತ್ತು ಯಾವ ಸಮಯದಲ್ಲಿ ಬೇಕಾದರೂ ಕಿಟಕಿಯಾಚೆ ಅವರು ಪ್ರತ್ಯಕ್ಷರಾಗು ವರು. ಆದುದರಿಂದ ಶೇಷು ಸ್ವಲ್ಪ ಹುಷಾರಾಗಿರಬೇಕಾಯಿತು. ಶಬ್ದ ಮಾಡದೆ ಕೆಳಗೆ ಹೋಗಿ 'ಪೀನಲ್ ಕೋಡ'ನ್ನು ತೆಗೆದುಕೊಂಡು ಬಂದ. ಕಾಮುವಿನ ತಲೆಯ ಕಡೆಗೆ ಮೇಜನ್ನು ಎಳೆದುಕೊಂಡು, ಅವಳ ಕಿವಿಗಳು ಕಿವುಡಾಗುವಂತೆ ಗಟ್ಟಿಯಾಗಿ ಓದಲಾರಂಭಿಸಿದ. ನಿದ್ರೆ ನಿಜವಾಗಿಯೂ ಕಾಮುವಿನ ಕಣ್ಣುಗಳನ್ನು ಆವರಿಸಿತ್ತು. ಶೇಷು ಇನ್ನೂ ದೊಡ್ಡ ಧ್ವನಿ ಯಿಂದ ಓದಲಿಟ್ಟ. ನಿದ್ರೆ ಸ್ವಲ್ಪ ಹೊತ್ತಿನವರೆಗೆ ಬರಲಿಲ್ಲ. ಅನಂತರ

ಯಾವ ಗಲಭೆಗೂ ಬೆದರದೆ ನಿದ್ರೆ ಕಾಮುವನ್ನು ಆಲಿಂಗಿಸಿತು. ಅವಳ ಸುಂದರವಾದ ಕೈ ಮೇಜಿನ ಮೇಲೆ ಮೆಲ್ಲಮೆಲ್ಲನೆ ಬಾಗಿತು. ಇನ್ನೂ ದೊಡ್ಡ ಧ್ವನಿಯಲ್ಲಿ ಶೇಷು ಒದುತ್ತಲಿದ್ದ.

ಕಿಟಕಿಯ ಪಕ್ಕದಲ್ಲಿ ಹೊರಗಡೆ ಅವನ ತಾಯಿ ಬಂದುನಿಂತು "ಲೊ, ಶೇಷು, ನೀನು ಓದಿದುದು ಸಾಕು. ದೀಪವನ್ನು ಆರಿಸಿಬಿಟ್ಟು ಮಲಗಿಕೊ. ನೀನು ಹೀಗೆ ಗಂಟಲನ್ನು ಕಿತ್ತುಕೊಂಡು ಓದಿದರೆ ರಸ್ತೆಯ ಕೊನೆಯ ಮನೆಯವರೂ ಕೂಡ ಎದ್ದು ಬಂದು ಬಿಡುವರು" ಎಂದಳು.

"ಇಲ್ಲಮ್ಮಾ ಅಪ್ಪನೆ ಹಾಗೆ ಓದ ಹೇಳಿದರು".

"ನಿಮ್ಮ ತಂದೆ ಮಾತು ಇರಲಿ. ಪಕ್ಕದಲ್ಲಿ ಒಬ್ಬಳು ಮಲಗಿದ್ದಾಳಲ್ಲಾ ಎಂಬ ಜ್ಞಾನವಿಲ್ಲವೇನು ನಿನಗೆ ? ಪುಸ್ತಕವನ್ನು ಮುಚ್ಚಿಟ್ಟುಬಿಟ್ಟು ಮಲಗಿಕೊ ಅಪ್ಪಾ ".

ಅವಳ ಹಿಂದೆಯೆ ಶಿವರಾಮಯ್ಯರೂ ಬಂದುನಿಂತು, "ಲೇ, ಅವನು ಪರೀಕ್ಷೆಗೆ ಓದಬೇಡವೇನು? ಶೇಷು ! ನೀನು ಬಾಯಿಪಾಠಮಾಡಿದುದನ್ನು ಒಂದು ಸಾರಿ ಹೇಳಿ ನೋಡಿಕೊ. 'ಚೀಟಂಗ್' ಮುಗಿಸಿ ಬಿಟ್ಟೆಯಾ?" ಎಂದು ಕೇಳಿದರು.

"ಮುಗಿದು ಹೋದಂತೆಯೇ: ಇನ್ನು ಸ್ವಲ್ಪವೇ ಬಾಕಿ" ಎಂದ ಶೇಷು ಪರಮ ಸಾಧುವಂತೆ. ಅಷ್ಟರಲ್ಲಿ ಅವನ ತಾಯಿ " ಶೇಷೂ ! ಈ ಕಿಟಕಿಯನ್ನು ಮುಚ್ಚಿಕೊ. ಬೆಳಕು ಬಂದರೆ ಕಣ್ಣು ಚುಚ್ಚುತ್ತದೆ. ನಿದ್ರೆ ಬರುವುದಿಲ್ಲವೆನ್ನುತ್ತದೆ. ಏಳು, ದೀಪವನ್ನು ಊದಿಬಿಟ್ಟು ಮಲಗಿಕೊ. ನೀನು ಎಷ್ಟು ಓದಿದರೂ ಅವರಿಗೆ ತೃಪ್ತಿಯೇ ಇಲ್ಲ. ನಾಳೆಯಾಗಲಿ ಮಿಕ್ಕ ಓದೆಲ್ಲಾ" ಎಂದಳು.

"ಲೋ, ಕಿಟಕಿಯನ್ನು ಮುಚ್ಚಿಕೊಂಡು ಓದು. ಅವಳಿಗೆ ಬೆಳಕು ಆಗುವುದಿಲ್ಲವಂತೆ. ಮೈಗೂ ಸ್ವಲ್ಪ ಚೆನ್ನಾಗಿಲ್ಲ, ಇಂದು ನಿನ್ನ ಅಮ್ಮನಿಗೆ" ಎಂದು ಹೇಳಿ, ಕಿಟಕಿಯನ್ನು ಪಟಾರ್ ಎಂದು ಮುಚ್ಚಿಬಿಟ್ಟು ಮಲಗಲು ಹೋದರು.

ಆಗ ಅವರು ಹೊಂದಿದ ಸಂತೋಷವನ್ನು ಹೇಳಲು ಅಸಾಧ್ಯ. ತಮ್ಮ ಕುಟುಂಬವನ್ನು ಕುರಿತು "ನೋಡಿದೆಯೇನೆ ನನ್ನ ಸಾಮರ್ಥ್ಯ.

ಹುಡುಗ ಒಂದು ಸಾರಿ ಪರೀಕ್ಷೆಯಲ್ಲಿ 'ಫೇಲ್' ಆದುದರಿಂದ ಈಗ ಮನಸ್ಸಿಟ್ಟು ಓದಲಾರಂಭಿಸಿದ್ದಾನೆ. ಗಂಟೆ ಹನ್ನೊಂದು ಯಾವಾಗಲೋ ಹೊಡೆದಾಯಿತು. ಓದುವ ಜೋರಿನಲ್ಲಿ ಅವನು ಗಮನಿಸಲೇ ಇಲ್ಲ. ನಾನೂ ಗಡಿಯಾರವನ್ನು ತಿರುಗಿಸಿ ಅರ್ಧಗಂಟೆ ನಿಧಾನವಾಗಿಯೇ ಓಡುವಂತೆ ಮಾಡಿಬಿಟ್ಟೆ ಶೇಷು ಈಸಲ ಖಂಡಿತ ಮೊದಲನೆ 'ಕ್ಲಾಸ್' ನಲ್ಲಿ 'ಪಾಸ್' ಮಾಡಿಬಿಡುತ್ತಾನೆ" ಎಂದರು.

ಈಕಡೆ ಶೇಷು "ಚೀಟಿಂಗ್" ಅಧ್ಯಾಯವನ್ನು ಮುಗಿಸಿಕೊಂಡು ದೀಪವನ್ನು ಆರಿಸಿದ ಕಾಮುವಿನ ನಿದ್ರೆಯೂ ಅದೇ ಸಮಯದಲ್ಲಿ ಭಂಗಹೊಂದಿತು. ಚಂದ್ರಿಕೆ ಅಂದು ನಿರುಪಯೋಗವಾಗಲಿಲ್ಲ.

# ತೆಲುಗು ಸಾಹಿತ್ಯ

ಹನ್ನೊಂದನೆಯ ಶತಮಾನದಲ್ಲಿ ಜನ್ಮ ತಳೆದ ನನ್ನಯ್ಯ ಭಟ್ಟಾರಕನ 'ಮಹಾಭಾರತ'ದಿಂದಲೇ ಆಂಧ್ರ ಸಾಹಿತ್ಯ ಮೊದಲಾದದ್ದು. ೧೨ನೆಯ ಶತಮಾನದಲ್ಲಿ ನನ್ನೆಚೋಡ ಕವಿಯ 'ಕುಮಾರ ಸಂಭವ' ಹೊರಬಿತ್ತು. ಒರಂಗಲ್ಲಿನ ಕಾಕತೀಯರ ಕಾಲದಲ್ಲಿ ತೆಲುಗು ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು ಪ್ರತಾಪರುದ್ರ ಸ್ವಯಂ ಕವಿಯೂ (ನೀತಿ ಸಾರ ಎಂಬ ಗ್ರಂಥವನ್ನು ಅವನೇ ಬರೆದಿದ್ದಾನೆ) ಕವಿಗಳ ಆಶ್ರಯ ದಾತನೂ ಆಗಿದ್ದ. ಪಾಲ್ಕುರಿಕೆ ಸೋಮನಾಥ ಅವನ ಆಸ್ಥಾನ ಕವಿಯಾಗಿದ್ದ. ಪ್ರತಾಪರುದ್ರನ ಅಣ್ಣನ ಮಗನಾದ ಗಣಪತಿದೇವನ ಕಾಲದಲ್ಲಿ ತಿಕ್ಕಣ್ಣ ವರ್ಧಿಸಿದ. ೧೪ನೆಯ ಶತಮಾನದಲ್ಲಿ 'ಕವಿತ್ರಯ'ರಲ್ಲಿ ಒಬ್ಬನಾದ ಎರಣ್ಣ 'ಹರಿವಂಶ'ವನ್ನು ಬರೆದ. ವಿಜಯನಗರದ ಅರಸರು ತೆಲುಗು ಸಾಹಿತ್ಯ ಪೋಷಕರಾಗಿದ್ದರು. ಕೃಷ್ಣದೇವರಾಯನ ಕಾಲದಲ್ಲಿ 'ಅಷ್ಟದಿಗ್ಗಜ'ಗಳು ವರ್ಧಿಸಿದರು. ಕೃಷ್ಣದೇವರಾಯನೇ 'ಆಮುಕ್ತ ಮಾಲ್ಯದ' ಎಂಬ ತೆಲುಗು ಕಾವ್ಯವನ್ನು ಬರೆದಿದ್ದಾನೆಂದು ಪ್ರತೀತಿ. ರಾಮರಾಯನ ಕಾಲದಲ್ಲಿ ಮೂರು ಮಹಾಕವಿಗಳು ಪಿಂಗಳಿ ಸೂರಣ್ಣ, ರಾಮರಾಜ ಭೂಷಣ, ತೆನಾಲಿ ರಾಮಕೃಷ್ಣ ತೆಲುಗು ಸಾಹಿತ್ಯವನ್ನು ಬೆಳಸಿದರು.

ಕಾಕತೀಯರ ಕೈಕೆಳಗಿದ್ದ ನಾಯಕರು ಸಣ್ಣಪುಟ್ಟ ರಾಜ್ಯಗಳನ್ನು ಸ್ಥಾಪಿಸಿದರು. ಅವರಲ್ಲಿ ಸರ್ವಜ್ಞ ಸಿಂಗಮ ಭೂಪಾಲ ಕವಿಕುಲ ಆಶ್ರಯ ದಾತನಾಗಿದ್ದ. ಶ್ರೀನಾಥ ಕವಿ ಅವನ ಆಸ್ಥಾನದಲ್ಲಿದ್ದ ಮತ್ತು 'ಭಾಗವತ ಪುರಾಣ' ಬರೆದ. ಬಮ್ಮೆರ ಪೋತನ ಅವನ ಸಮಕಾಲೀನ.

೧೫ನೆಯ ಶತಮಾನದ ತೆಲುಗು ಸಾಹಿತ್ಯದಲ್ಲಿ ಬಂದ ಕ್ರಾಂತಿ ಕವಿ ಯೆಂದರೆ 'ವೇಮನ'.

೧೮ನೆಯ ಶತಮಾನದಲ್ಲಿ ದಿತ್ತಕವಿ ನಾರಾಯಣ ತನ್ನ 'ರಂಗರಾಜ ಚರಿತ್ರೆ'ಯಲ್ಲಿ ವಿಜಯನಗರದರಸನಿಗೂ, ಡೂಪ್ಲೆಯ ಪ್ರಬಲ ಸಹಾಯಕನಾದ ಬುಸ್ಸಿಗೂ ಆದ ಸಮರ ಕಥೆಯನ್ನು ಚಿತ್ರಿಸಿದ್ದಾನೆ.

ಆಧುನಿಕ ತೆಲುಗು ಸಾಹಿತ್ಯ ಇಂಗ್ಲಿಷ್ ಶಿಕ್ಷಣದ ಪ್ರಭಾವದಿಂದಲೇ ರೂಪಗೊಂಡಿತು. ವೀರೇಶಲಿಂಗಂ ಪಂತುಲು ಅವರ 'ಆಂಧ್ರ ಕವುಲ ಚರಿತ್ರ' ನವೋದಯಕ್ಕೆ ಕಾರಣವಾಯಿತು. ಆದರೆ ಆಧುನಿಕ ಆಂಧ್ರ ಸಾಹಿತ್ಯಾಚಾರ್ಯ ಪದವಿ 'ಕನ್ಯಾಶುಲ್ಕ' ಕರ್ತೃವಾದ ಗುರುಜಾಡಾ ಅಪ್ಪಾರಾಯರಿಗೆ ಮೀಸಲು. ಈಚೆಗೆ ಕಾವ್ಯ ಜಗತ್ತಿನಲ್ಲಿ ರಾಯಪ್ರೋಲು ಸುಬ್ಬರಾಯರು ರವೀಂದ್ರ ಸಂಪ್ರದಾಯವನ್ನು ಬೆಳಸಿದರು. ಎನ್. ಸುಬ್ಬರಾಯರ 'ವೆಂಕಿ ಪಾಟ್ಲು' ಜನಪದ ರೀತಿಯಲ್ಲಿ ಬರೆಯಲ್ಪಟ್ಟಿರುವ ಪ್ರಗತಿಶೀಲ ಕಾವ್ಯ. ಗದ್ಯ ಶೈಲಿಯನ್ನು ಬೆಳಸುವುದಕ್ಕೆ ವೀರೇಶಲಿಂಗಂ ಪಂತುಲು ಅವರು ಸಾಹಸ ಮಾಡಿದರು. ಆದರೆ ಅದು ರೂಪಗೊಂಡದ್ದು ಕಟ್ಟೀಮಂಚಿ ರಾಮಲಿಂಗರೆಡ್ಡಿ, ರಾಳ್ಲಪಲ್ಲಿ ಅನಂತ ಕೃಷ್ಣಶರ್ಮ, ಗುಡಿಪಾಟಿ ವೆಂಕಟಾಚಲಂ ಅವರಿಂದ. ಸಣ್ಣ ಕಥಾ ಬೆಳವಣಿಗೆಗೆ ಪಾನುಗಂಟಿ ಲಕ್ಷ್ಮೀನರಸಿಂಹರಾವ್, ಮಾಡಪಾಟಿ ಹನುಮಂತರಾವ್, ಅಕ್ಕಿರಾಜು ಉಮಾಕಾಂತ ಮತ್ತು ಶ್ರೀಪಾದ ಸುಬ್ರಹ್ಮಣ್ಯಶಾಸ್ತ್ರಿ ಇವರು ಬಹಳ ಶ್ರಮಿಸಿದ್ದಾರೆ ಆಧುನಿಕ ಸಣ್ಣ ಕಥಾ ಲೇಖಕರಲ್ಲಿ ಚಿಂತಾ ದೀಕ್ಷಿತುಲು, ಮುನಿ ಮಾಣಿಕ್ಯಂ, ಕೃಷ್ಣಶಾಸ್ತ್ರಿ, ಅಡಿವಿ ಬಾಪಿರಾಜು ಇವರು ಮುಖ್ಯರಾಗಿದ್ದಾರೆ.

## ಚಿಂತಾದೀಕ್ಷಿತುಲು

ಚಿಂತಾದೀಕ್ಷಿತುಲು ಅವರು ತೆಲುಗಿನಲ್ಲಿ ಪ್ರತಿಭಾಶಾಲಿಗಳಾದ ಸಾಹಿತಿಗಳು. ಸಾಹಿತ್ಯದ ಎಲ್ಲ ಅಂಗಗಳಲ್ಲೂ ಇವರ ಪ್ರತಿಭೆ ಒಡ ಮೂಡಿದೆ. ತೆಲುಗು ಸಾಹಿತ್ಯದಲ್ಲಿ ಇವರ ಸ್ಥಾನ ಉನ್ನತವಾದುದು.

ಇವರು ನಾಟಕ, ಕತೆ, ಕವಿತೆ ಎಲ್ಲವನ್ನೂ ಬರೆದಿದ್ದಾರೆ. ಇವರ ಚಿಕ್ಕಮಕ್ಕಳ ಗೀತಗಳು ಅತ್ಯಂತ ಮಧುರವಾಗಿವೆ. ಬಾಲಕರಿಗೆ ಪ್ರಿಯ ವಾಗಿವೆ. ಇವರ ಕತೆಗಳಲ್ಲೂ ಬಾಲಕರ ಮನದ ವ್ಯಾಪಾರ ಅತ್ಯಂತ ಸುಂದರವಾಗಿ ಒಡೆದು ಕಾಣುತ್ತದೆ. ಇವರು ಸುಮಾರು ನೂರಕ್ಕೆ ಮೇಲ್ಪಟ್ಟು ಕತೆಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಉಚ್ಚಶೃಂಗಾರದ ಸುಂದರ ಚಿತ್ರಗಳು ಕಂಗೊಳಿಸುವುವು. ದಾರ್ಶನಿಕ ವಿವೇಚನೆ ಕೂಡ ಇವರ ಕತೆಗಳಲ್ಲಿ ನೋಡಬಹುದು. ಸರಳ ಪ್ರಕೃತಿಯ ಸುಸಂಸ್ಕೃತ ಕಲಾವಿದರಿವರು

# ಭಿಲ್ಲರ ರಾಣಿ

ಅನುವಾದಕ: **ಅ. ತಿ. ಶಾಮಾಚಾರ್ಯ**

ಕರ್ನೂಲಿನಿಂದ ಶ್ರೀಶೈಲಕ್ಕೆ ಹೋಗುವಾಗ ದಾರಿಯಲ್ಲಿ ನಾಗಲೂಟಿ ಎಂಬ ಹಳ್ಳಿಯ ಬಳಿ ಯಾತ್ರಿಕರು ವಸತಿ ಮಾಡುತ್ತಾರೆ ಆ ಸಣ್ಣ ಹಳ್ಳಿಯಲ್ಲಿ ಒಕ್ಕಲಿರುವವರೆಲ್ಲ ಭಿಲ್ಲರೆ. ಈಚೆಗೆ ಅದಕ್ಕೆ ಬೈರಾಗಿಕಟ್ಟೆ, ಮಂಡಿಕಟ್ಟೆ ಎಂಬುದಾಗಿ ಹೆಸರು ಬಂದಿದೆ.

ನಾಗಲೂಟಿಯಲ್ಲಿ ಒಂದು ದೇವಾಲಯವಿದೆ. ಅದರೆದುರಿನಲ್ಲಿ ಕಿಚ್ಚುರಿ ಹೊತ್ತಿಸಿಕೊಂಡು ಯಾತ್ರಿಕರು ರಾತ್ರಿಯನ್ನು ಕಳೆಯುತ್ತಾರೆ. ಹಲವರು ದೇವಾಲಯದ ಮಾಳಿಗೆಯ ಮೇಲಕ್ಕೆ ಹತ್ತಿ ಮಲಗುತ್ತಾರೆ.

ನಾಗಲೂಟಿಯಿರುವುದು ಕಾಡಿನ ಮಧ್ಯದಲ್ಲಿ. ಮಾವಿನ ಮರಗಳು ಬಿದುರುಪೊದೆಗಳು ಅಲ್ಲಿ ಬೇಕಾದಷ್ಟು ಬೆಳದಿವೆ. ಮಾಘಮಾಸದಲ್ಲಿ ತಾಳೆ ಮರಗಳು ತುಂಬಾ ಹೂ ಬಿಡುತ್ತವೆ. ಆ ಹೂಗಳ ಇನಿಗಂಪು ರಾತ್ರಿ ಹೊತ್ತಿನಲ್ಲಿ ನಾಗಲೂಟಿಯ ತುಂಬಾ ಎಲ್ಲೆಲ್ಲೂ ವ್ಯಾಪಿಸುತ್ತದೆ. ಆಗಲೇ ಮಾವಿನಕಾಯಿಯೂ ಗಿಣಿಗಳ ಗುಂಪೂ ಬರುವುದಕ್ಕೆ ಪ್ರಾರಂಭ. ಭಿಲ್ಲರು ಆ ಕಾಯಿ ಹಣ್ಣು ತಿಂದು ಹೊಟ್ಟೆ ತುಂಬಿಕೊಳ್ಳುತ್ತಾರೆ.

ಬೇಸಗೆ ಕಾಲದಲ್ಲಿ ನಾಗಲೂಟಿಯಲ್ಲಿ ದುಷ್ಟಮೃಗಗಳ ಭಯ. ಆಗಾಗ ರಾತ್ರಿಯ ಹೊತ್ತು ನೀರು ಕುಡಿಯುವುದಕ್ಕೆಂದು ಒಂದೊಂದು ಹೆಬ್ಬುಲಿ ಆ ಪ್ರದೇಶಕ್ಕೆ ಬರುವುದುಂಟು. ಅದಕ್ಕೋಸ್ಕರವೇ ಯಾತ್ರಿಕರು ನಿದ್ದೆ ಮಾಡದೆ ಕಿಚ್ಚುರಿಯ ಸುತ್ತಲೂ ಕೂಡುತ್ತಾರೆ.

ನಾಗಲೂಟಿಯ ಹತ್ತಿರ ಸಣ್ಣದೊಂದು ನೀರಿನ ಹೊಂಡವಿದೆ. ಆ ಹೊಂಡದೊಳಕ್ಕೆ ಪಾತಾಳಗಂಗೆ ಯಾವಾಗಲೂ ಧಾರಾವಾಹಿಯಾಗಿ ಬಂದು ಬೀಳುತ್ತಿರುತ್ತದೆ. ಆ ಹೊಂಡದಲ್ಲಿಯೇ ಯಾತ್ರಿಕರು ಸ್ನಾನ ಮಾಡುವುದು. ಗ್ರಾಮಸ್ಥರು ಕುಡಿಯುವುದೂ ಅದೇ ನೀರು. ರಾತ್ರಿಯ

ಕಾಡು ತುಂಬ 'ನಲ್ಲಮಲೆ' (ಕರಿಯಗುಡ್ಡ) ಬೆಟ್ಟಗಳು. ಅಲ್ಲಲ್ಲಿ ಭಿಲ್ಲರ ಪಾಳ್ಯಗಳು ಅನೇಕವಾಗಿವೆ. ನಾಗಲೂಟಿಯೂ ಅಂಥದೊಂದು ಭಿಲ್ಲರ ಪಾಳ್ಯ. ಈ ಬೆಟ್ಟಗಳಲ್ಲಿಯೇ ಪುಣ್ಯಕ್ಷೇತ್ರಗಳಿರುವುದು. ಶ್ರೀ ಶೈಲವು ಅವುಗಳಲ್ಲೆಲ್ಲಾ ಬಹಳ ಮಹಿಮಾವಂತವಾದುದೆಂದು ಪ್ರಸಿದ್ಧಿ ಗೇರಿದೆ. ಶ್ರೀಶೈಲದ ಮೇಲಿನ ಕಲ್ಲುಗಳೆಲ್ಲ ಶಿವಲಿಂಗವೇ ಅಂತೆ. ಅಲ್ಲಿನ ಭಿಲ್ಲರೆಲ್ಲ ಸಿದ್ಧರೇ !

ಶ್ರೀಶೈಲದಿಂದ 'ನಲ್ಲಮಲೆ' ಬೆಟ್ಟಗಳವರೆಗೂ ಇರುವ ಕಾಡಲ್ಲಿನ ಗಿಡಗಳಿಗೂ ಕೂಡ ಮಹತ್ವ ದೊರೆತಿದೆ.

ಒಂದು ವರ್ಷ ಶಿವರಾತ್ರಿಗೆಂದು ಶ್ರೀಶೈಲಕ್ಕೆ ಹೋಗಿದ್ದ ಹಲವು ಯಾತ್ರಿಕರು ತಿರುಗಿ ಬರುವಾಗ ನಾಗಲೂಟಿಯ ಹತ್ತಿರ ತಂಗಿ ಅಡಿಗೆ ಮಾಡಿಕೊಳ್ಳುತ್ತಿದ್ದರಂತೆ. ಅಂದು ಅವರಿಗೆ ಒಂದು ಮೊಲವು ಆಹಾರ. ಗಡಿಗೆಯಲ್ಲಿ ಮಾಂಸ ಹಾಕಿದ ಮೇಲೆ ಪಲ್ಯ ಕಲಿಸಲು ಏನೂ ಇಲ್ಲದೆ ಪಕ್ಕದಲ್ಲಿ ಬಿದ್ದಿದ್ದ ಒಂದು ಕಟ್ಟಿಗೆಯಿಂದ ಆ ಪಲ್ಯವನ್ನು ಕಲೆಸುವ ಹೊತ್ತಿಗೆ ಮಡಿಕೆಯಿಂದ ಮೊಲವು ಧುಡುಂ ಎಂದು ಹೊರಗೆ ಧುಮುಕಿ ಓಡಿಹೋಯಿತಂತೆ. ಸಂಜೀವನಿಗಿರುವಂಥ ಪ್ರಭಾವ ನಲ್ಲಮಲೆ ಬೆಟ್ಟಗಳ ಮೇಲಿರುವ ಹಲವು ಗಿಡಗಳಿಗೆ ಇದೆಯೆಂದು ಹೇಳುವುದು ವಾಡಿಕೆ.

ಮನುಷ್ಯನಿಗೆ ಹಸಿವೇ ಇಲ್ಲದೆ ಹೋದರೆ ಎಷ್ಟು ಹಾಯಿ, ಯಾವ ತೊಂದರೆಯೂ ಇಲ್ಲದೆ ನಿಶ್ಚಿಂತೆಯಾಗಿ ಭಗವನ್ನಾಮಸ್ಮರಣೆ ಮಾಡುತ್ತ ಕಾಲ ಕಳೆಯಬಹುದಲ್ಲ ಅಂದುಕೊಂಡ ಒಬ್ಬ ಬ್ರಾಹ್ಮಣ. ಕಂಡ ಕಂಡ ಬೈರಾಗಿಗಳನ್ನೆಲ್ಲಾ ಆಶ್ರಯಿಸಿ ಅವನು ಹಸಿವಾಗದಂತೆ ಮಾಡಿಕೊಳ್ಳಲು ಪ್ರಯತ್ನ ಮಾಡಿದ. ಒಂದು ದಿನ ಮಲೆಬೆಟ್ಟಗಳಲ್ಲಿ ಒಬ್ಬ ಸಿದ್ಧ ಅವನ ಕಣ್ಣಿಗೆ ಬಿದ್ದ. ಆ ಸಿದ್ಧ ಯಾವುದೋ ಹಸಿರು ಕುಡಿಸಿ ಆ ಬ್ರಾಹ್ಮಣನಿಗೆ ಹಸಿವಿಲ್ಲದಂತೆ ಮಾಡಿದ. ಆ ಗಳಿಗೆಗೆ ಸಂತೋಷವಾದರೂ, ಆ ಬ್ರಾಹ್ಮಣನು ಆಮೇಲೆ ಪಟ್ಟ ಪಾಡು ಅಷ್ಟಿಷ್ಟಲ್ಲ. ಭಗವನ್ನಾಮಸ್ಮರಣೆ ಹಾಗಿರಲಿ, ತನಗೆ ಏನೋ ಕಾಯಿಲೆ ಆಗಿದೆ ಎಂದು ತಿಳಿದು ಎಷ್ಟೆಷ್ಟೋ ಔಷಧಗಳನ್ನು ನುಂಗಿದ. ಏನೂ ಲಾಭವಾಗಲಿಲ್ಲ. ಕೊನೆಗೊಬ್ಬ ಬೈರಾಗಿಯ ದರ್ಶನವಾಯಿತು. ಆ ಬೈರಾಗಿ ಅವನಿಗೆ ಔಷಧ ಕೊಟ್ಟ.

ಆ ಔಷಧದ ಪ್ರಭಾವಕ್ಕೆ ಆ ಬ್ರಾಹ್ಮಣ ಮೊದಲು ನುಂಗಿದ್ದ ಹಸಿರೆಲ್ಲ ತಿರುಗಿ ಬಂತು. ಆ ಹಸಿರನ್ನು ತಿಂದು ಆ ಬೈರಾಗಿ ತನ್ನ ಹಸಿವನ್ನು ಜಯಿಸಿ ಯೋಗ ಸಮಾಧಿಯನ್ನು ಪ್ರವೇಶಿಸಿದ.

ನಾಗಲೂಟಿ ಪಾಳೆಯದಲ್ಲಿ ಬಿದಿರಿನ ಗುಡಿಸಿಲುಗಳು ಬಹಳ. ಒಂದು ಗುಡಿಸಿಲು ಮಾತ್ರ ಒಂಟಿಯಾಗಿ ದೂರದಲ್ಲಿ ಹೊಂಡದ ಬಳಿಯಲ್ಲಿ ಒಂದು ಮಾವಿನಮರದ ಕೆಳಗೆ ಇದೆ. ಆ ಗುಡಿಸಿಲಿನಲ್ಲಿರುವವರು ಒಬ್ಬ ಭಿಲ್ಲತಿ, ಒಬ್ಬ ಭಿಲ್ಲಹುಡುಗ.

ಭಿಲ್ಲತಿ ಮುದುಕಿ. ಕಪ್ಪು ಮೈ. ಹರೆಯದಲ್ಲಿ ರೂಪವತಿಯಾಗಿದ್ದಿರಬೇಕು ಭಿಲ್ಲಹುಡುಗನ ಮೈ ಮಾಸಿದ ಬಿಳುಪು. ನೀಲಿಬಣ್ಣದ ಕಣ್ಣು, ಕಂದುಬಣ್ಣದ ಕೂದಲು ವಯಸ್ಸು ಇಪ್ಪತ್ತು ಇರಬಹುದು. ಆ ಮುದುಕಿಯ ಮಗ ದಿನವೂ ಬೇಟೆಯಾಡಿ ತನಗೂ ತನ್ನ ತಾಯಿಗೂ ಸಾಕಾಗುವಷ್ಟು ಆಹಾರವನ್ನು ತರುವುದು ಅವನ ಕೆಲಸ. ಮುದುಕಿಯಾವಾಗಲೂ ಗುಡಿಸಿಲ ಮುಂದೆ ಎಲ್ಲಿಯೋ ಅನ್ಯಮನಸ್ಕಳಾಗಿ ಕೂತಿರುತ್ತಾಳೆ. ಅಲ್ಲಿನ ಭಿಲ್ಲರೆಲ್ಲರಿಗೂ ಆಕೆ ರಾಣಿ. ಅವರು ಕರೆಯುವುದೂ ಹಾಗೆಯೇ.

ಆಕೆಯನ್ನು ನೋಡಿ, ಭಿಲ್ಲರ ರಾಣಿ ಎಂದು ಆಕೆಯನ್ನು ಕರೆಯುವುದನ್ನು ಕೇಳಿ ಯಾತ್ರಿಕರು ಆಕೆ ಒಬ್ಬ ಸಿದ್ಧಳಿರಬೇಕೆಂದು ಭಾವಿಸಿ ತೆಂಗಿನಕಾಯಿ, ಬಾಳೆಹಣ್ಣು ಮುಂತಾದುವನ್ನೆಲ್ಲ ಆಕೆಗೆ ಸಮರ್ಪಿಸುತ್ತಾರೆ. ಆ ಹಣ್ಣುಗಳ ಮೇಲಾಗಲಿ ಯಾತ್ರಿಕರ ಮೇಲಾಗಲಿ ಮುದುಕಿಯ ದೃಷ್ಟಿ ಎಂದೂ ಹೋಗಿಲ್ಲ ಆಗಾಗ ಏನೇನೋ ಗೊಣಗುಟ್ಟುವುದುಂಟು. "ಕಡಲುಗಳು, ಕಡಲುಗಳ ನಡುವೆ ಒಂದು ದೇಶ. ಆ ದೇಶದಲ್ಲಿ ಊರುಗಳು. ಒಂದೂರಿನಲ್ಲಿ ನನ್ನ ಒಡೆಯ." ಯಾತ್ರಿಕರಿಗೆ ಈ ಮಾತು ಅರ್ಥವಾಗುತ್ತಿರಲಿಲ್ಲ.

ಮುದುಕಿಗೆ ಎಳೆತನದಲ್ಲಿ ತಾಯಿ ತಂದೆ ಇಟ್ಟ ಹೆಸರು ಲಚ್ಚಿ. ನಡುವೆ ಬಂದ ಹೆಸರು ಬೆಸ್ಸಿ. ಕೊನೆಗೆ ಈಗಿನ ಹೆಸರು ಭಿಲ್ಲರ ರಾಣಿ. ಮಗನ ಹೆಸರು ವೀರಭದ್ರ.

ಆಕೆ ಯಾರೊಡನೆಯೂ ಮಾತನಾಡದಿದ್ದರೂ ಮಗನೊಡನೆ

ಮಾತ್ರ ಪ್ರಸ್ತಾಪಿಸುತ್ತಾಳೆ. ಸಮುದ್ರಗಳನ್ನು ದಾಟಿ, ದೇಶಗಳನ್ನು ದಾಟಿ ತನ್ನನ್ನು ತನ್ನ ಮಗ ಕರೆದುಕೊಂಡು ಹೋಗುತ್ತಾನೆಯೇ ? ಎಂದು ಕೇಳುವಳು. ಸಮುದ್ರಗಳ ಮಧ್ಯದಲ್ಲಿರುವ ದೇವತೆಗಳ ದೇಶವನ್ನು ನೋಡಬೇಕೆಂದು ಅವನಿಗೆ ಕುತೂಹಲವುಂಟೆಂದು ಆಕೆ ಕಂಡುಕೊಂಡಿದ್ದಾಳೆ. ಅಲ್ಲಿ ಕಾಡು ಉಂಟೆ, ಬೇಟೆಯಾಡಬಹುದೇ ? ಅಲ್ಲಿಯೂ ಭಿಲ್ಲರಿದ್ದಾರೆಯೆ ? ಎಂದು ಅವನ ಪ್ರಶ್ನೆ. ಅಲ್ಲಿ ನಮ್ಮ ದೇವರಿದ್ದಾನೆ. ದೊಡ್ಡವನಾದ ಮೇಲೆ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವೆಯಾ ? ಎಂದು ಆಕೆಯ ಹಂಬಲದ ಮಾತು. ಆಕೆಯ ಮಾತು ಅರ್ಥ ಮಾಡಿಕೊಳ್ಳದೆ ಉತ್ತರ ಕೊಡುವುದೇ ಇಲ್ಲ ವೀರಭದ್ರ.

ಮಗ ಹಿಡಿದು ತಂದ ಕ್ಷುದ್ರಜಂತುಗಳೂ ಕಾಯಿ, ಹಣ್ಣು, ಬಿದರಕ್ಕಿ, ಜೇನು ಮೇಣಗಳು ಆಕೆಯ ದೇಹಪೋಷಣೆಗೆ. ಹೃದಯ ಪೋಷಣೆಗೆ ಮಗನ ಆಕೃತಿಯೂ ತನ್ನ ಆಲೋಚನೆಗಳೂ.

ಆಗಾಗ ಆಕೆ ಉದ್ದವಾದ ನಿಟ್ಟುಸಿರನ್ನು ಬಿಡುವಳು. ಅದೇ ಹೊತ್ತಿಗೆ ಗಿಡಮರಗಳ ಎಲೆಗಳ ಮೂಲಕ ಗಾಳಿಯೂ ನಿಟ್ಟುಸಿರು ಬಿಡುತ್ತದೆ.

ಒಮ್ಮೊಮ್ಮೆ ಆಕೆಯ ಕಣ್ಣಿನಿಂದ ನೀರು ಸುರಿಯುತ್ತದೆ. ಮರದೆಲೆಗಳಿಂದ ಆಗಲೆ ಮಂಜಿನ ಹನಿಯೂ ಹೊರಗೆ ಬರುವುದು.

ಆಕೆ ಆಗಾಗ ಮಗನನ್ನಪ್ಪಿಕೊಂಡು ‘ ನೀನೇ ನನ್ನ ದೇವರು ’ ಎನ್ನುವಳು. ‘ನಾನಲ್ಲ ’ ವೆಂದು ಅವನು ಹೇಳುವನು. ಆದರೆ ಆ ಮಾತು ಆಕೆಗೆ ಕೇಳಿಸದಂತೆ ಬಿದಿರಿನ ಪೊದೆಗಳು ಸರಸರ ಸದ್ದು ಮಾಡುವುವು.

## ೨

ಆ ಪ್ರದೇಶದಲ್ಲಿ ವಾಸಮಾಡುವ ಭಿಲ್ಲರೆಲ್ಲರೂ ವೀರಭದ್ರನನ್ನು ಭಿಲ್ಲರರಾಣಿಯ ಮಗನೆಂದು ಕರೆಯುತ್ತಾರೆ. ಅವನನ್ನು ಗೌರವದಿಂದ ಕಾಣುತ್ತಾರೆ. ವೀರಭದ್ರ ಬೇಟೆಯಾಡುವುದರಲ್ಲಿ ನಿಪುಣ. ಬಿಲ್ಲು ಬಾಣ ತೆಗೆದುಕೊಂಡು ಕಾಡಿಗೆ ಹೋದರೆ ಅವನು ಎಂದೂ ಬರಿಗೈಯಲ್ಲಿ ಮನೆಗೆ ಬಂದುದು ಇಲ್ಲ.

ತಾನು ಉಳಿದ ಭಿಲ್ಲರಂತೆ ಅಲ್ಲದೆ ಇರುವುದೂ ತನ್ನನ್ನೂ ತನ್ನ

ತಾಯಿಯನ್ನೂ ಎಲ್ಲರೂ ಗೌರವದಿಂದ ಕಾಣುವುದೂ ಅವನಿಗೆ ಅರ್ಥವಾಗಲಿಲ್ಲ. ಇದಕ್ಕೇನು ಕಾರಣವೆಂದು ಅವನು ಅನೇಕ ಜನರನ್ನು ಕೇಳಿದ, ಏನು ಕಾರಣವೋ ಅವರು ಯಾರೂ ಅವನಿಗೆ ಸರಿಯಾದ ಉತ್ತರ ಹೇಳಲಿಲ್ಲ. ತನ್ನ ತಾಯಿಯಲ್ಲದೆ ಬೇರೆ ಯಾರೂ ತನಗೆ ಸರಿಯಾದ ಕಾರಣ ಹೇಳರೆಂದು ಊಹಿಸಿ, ಒಂದು ದಿನ ತಾಯಿಯನ್ನು ಕೇಳಿದ; ಹೇಳಬೇಕೆಂದು ಕಾಡಿದ ತಾಯಿ ಅನುಮಾನಿಸಿ ಅನುಮಾನಿಸಿ ಕೊನೆಗೆ ಹೇಳಿದಳು. ಆ ಬೆಟ್ಟಗಳ ನಡುವೆ ಪಾತಾಳಗಂಗೆ ಹರಿಯುತ್ತಿದೆಯೆಂದೂ, ಅದು ಕಾಡಿನ ನಡುವೆ ಎಲ್ಲಿಯೋ ಒಂದು ಕಡೆ ಪೂರ್ವದಿಕ್ಕಿಗೆ ಹೊರಳಿ ಹರಿಯುವುದೆಂದೂ, ಹಾಗೆ ಹೊರಳಿದ ಮೂಲೆಯಲ್ಲಿ ನೀರು ಹರಿಯದೆ ನಿಂತು ಇರುವುದೆಂದೂ, ಅಲ್ಲಿಯೆ ಪೀನುಗುಲಗೊಂದಿಯೆಂಬ ಗವಿ ಇದೆ ಎಂದೂ, ಆ ಗವಿಗೆ ಹೋದರೆ ಇಬ್ಬರು ಭಿಲ್ಲರು ಕಾಣಿಸುವರೆಂದೂ, ಆ ಭಿಲ್ಲರನ್ನು ಭೆಟ್ಟಿಯಾಗಿ ತಾನು ಲಚ್ಚಿಯ ಮಗ ಲಚ್ಚಿಯು ಸಮುದ್ರಗಳ ಮಧ್ಯಕ್ಕೆ ಹೊರಡಲಿರುವಳೆಂದು ಹೇಳಬೇಕೆಂದೂ ಅವರೇ ಅವನ ಜನ್ಮವೃತ್ತಾಂತವನ್ನೆಲ್ಲ ಹೇಳುವರೆಂದೂ ಆಕೆ ಹೇಳಿದಳು. ವೀರಭದ್ರನಿಗೆ ಅಲ್ಲಿಗೆ ಹೋಗಬೇಕೆಂದು ಕುತೂಹಲ ಹುಟ್ಟಿತು. ಆದರೆ ತಾಯಿಯೊಬ್ಬಳನ್ನೇ ಬಿಟ್ಟು ಹೊರಡುವುದು ಹೇಗೆ? ಭಿಲ್ಲರರಾಣಿ ಈ ಮಾತನ್ನು ಗ್ರಹಿಸಿ ತನಗೆ ನಾಗಲೂಟಿಯಲ್ಲಿರುವ ಭಿಲ್ಲರೆಲ್ಲರೂ ಸಹಾಯ ಮಾಡುತ್ತಿರುವುದರಿಂದ ಆ ಬಗ್ಗೆ ಅವನು ಚಿಂತಿಸಬೇಕಾಗಿಲ್ಲವೆಂದೂ ಹೇಳಿದಳು.

ವೀರಭದ್ರನು ಪ್ರಯಾಣಕ್ಕೆ ಸಿದ್ಧನಾದ. ಬಿಲ್ಲು ಬಾಣ ತೆಗೆದುಕೊಂಡು ಒಂದು ದೊಡ್ಡ ಮಚ್ಚನ್ನು ಇಳಿಬಿಟ್ಟುಕೊಂಡ. ಉಟ್ಟಿದ್ದ ಅರಿವೆಯಲ್ಲದೆ ಬೇರೆ ಇರಲಿಲ್ಲ. ಬೆಳಗಿನ ಜಾವ ಹೊರಟು, ಹನ್ನೆರಡು ಗಂಟೆಯಾಗುವ ಹೊತ್ತಿಗೆ ಒಂದು ದೊಡ್ಡ ಕೆರೆಯ ಬಳಿಗೆ ಬಂದ. ಅಲ್ಲಿ ಭಿಲ್ಲರ ಪಾಳ್ಯವೂ ಲಂಬಾಣಿಗಳ ಪಾಳ್ಯವೂ ಇತ್ತು.

ಆ ಪಾಳ್ಯದ ಬಳಿಗೆ ಹೋಗದೆ ಅವನು ದಾರಿಯಲ್ಲಿ ಕಿತ್ತುಕೊಂಡ ಮಾವಿನಕಾಯಿ ಹುಣಿಸೆಕಾಯಿ ತಿಂದು ಕೆರೆಯಲ್ಲಿ ನೀರು ಕುಡಿದು ಪ್ರಯಾಣ ಸಾಗಿಸಿದ. ದಾರಿಯಲ್ಲಿ ಭಿಲ್ಲರು ಅವನನ್ನು ಕಂಡು ಯಾವನೊ

ಹೊರಗಿನವ ಬಂದಿದ್ದಾನೆಂದು ಗುಂಪು ಗುಂಪಾಗಿ ಬಂದರು. ಹತ್ತಿರ ಬಂದು ನೋಡಿ 'ಭಿಲ್ಲರರಾಣಿಯ ಮಗ, ಭಿಲ್ಲರರಾಣಿಯ ಮಗ' ಎಂದು ಕೂಗಿಕೊಂಡು ಓಡಿಹೋದರು.

ಹೋಗುತ್ತ ಹೋಗುತ್ತ ಕೃಷ್ಣಾನದಿ ಕಾಣಿಸಿತು ಬಂಡೆಗಳ ಮೇಲೆ ಮಂದವಾಗಿ ಪ್ರವಹಿಸುತ್ತಿದೆ. ಅದರ ಕಡೆಗೇ ಅವನು ನಡೆದು ಹೋಗುತ್ತಿದ್ದಾನೆ. ಬಿದಿರುಮೆಳೆಗಳಿಂದ ಕಾಡುಕೋಳಿಗಳು ಕೂಗು ಹಾಕಲಾರಂಭಿಸಿದುವು. ಮಂಗಗಳ ಗುಂಪು ಅವನನ್ನು ನೋಡಿ ಬಂಡೆಯಿಂದ ಬಂಡೆಗೆ ನೆಗೆದು ಅದೃಶ್ಯವಾದವು. ದಾರಿಯಲ್ಲಿ ತ್ಯಾಗದ ಮರ, ಅಶ್ವತ್ಥ ಮರ, ಶ್ರೀಗಂಧದ ಮರಗಳೂ, ಬಿದಿರುಮೆಳೆಗಳೂ ಎಷ್ಟೋ ಇವೆ. ಅವನು ಅವುಗಳನ್ನು ನೋಡದೆಯೆ ತಾಯಿಯ ಬಗ್ಗೆ ತನ್ನ ಬಗ್ಗೆ ಆಲೋಚಿಸುತ್ತ ಹೋಗುತ್ತಿದಾನೆ ಶ್ರೀಶೈಲ ನೇರುವ ಹೊತ್ತಿಗೆ ಸಂಜೆಯಾಯಿತು. ದಾರಿಯಲ್ಲಿ ಭಿಲ್ಲರು ಯಾರೂ ಅವನಿಗೆ ಭೆಟ್ಟಿಯಾಗಲಿಲ್ಲ. ಅವನಿಗೆ ತುಂಬಾ ಹಸಿವು. ಮಚ್ಚಿನಿಂದ ಒಂದು ಈಚಲಮರವನ್ನು ಉರುಳಿಸಿ, ಕೊಯ್ದು ಆದರ ಕುಡಿಯನ್ನು ತಿಂದು ಹಸಿವು ಅಡಗಿಸಿಕೊಂಡ. ಆ ರಾತ್ರಿ ಶ್ರೀಶೈಲದ ದೇವಾಲಯದೆದುರಿನಲ್ಲಿರುವ ಛತ್ರದ ಒಂದು ಕೋಣೆಯಲ್ಲಿ ಕಳೆಯಿತು ರಾತ್ರಿ ನಾಲ್ಕನೆಯ ಜಾವದಲ್ಲಿ ಎದ್ದು ನದಿಯ ದಾರಿಯನ್ನು ಹಿಡಿದು ಹೊರಟ. ದಾರಿಯಲ್ಲಿ ಕರಡಿಯ ಹಿಂಡು ಅವನನ್ನೂ ಅವನ ಬಿಲ್ಲನ್ನೂ ನೋಡಿ ಹೆದರಿ ತಪ್ಪಿಸಿಕೊಂಡು ಓಡಿದವು. ಚಿಗರಿಗಳ ಗುಂಪಿಗೆ ಗುಂಪೆ ಅಂಜಿ ನೆಗೆನೆಗೆದು ಓಡಿದವು. ಬಹಳ ದೂರ ನಡೆದ ಮೇಲೆ ಪಾತಾಳಗಂಗೆ ಕಾಣಿಸಿತು. ಝಳಝಳ ಬಿಸಿಲು. ಪಾತಾಳಗಂಗೆಯಲ್ಲಿ ಸ್ನಾನಮಾಡಿ ಹೊಟ್ಟೆತುಂಬಾ ನೀರು ಕುಡಿದು ಒಂದು ಬಂಡೆಯ ಪಕ್ಕದಲ್ಲಿ ನೆರಳಲ್ಲಿ ವಿಶ್ರಮಿಸಿದ. ಸುತ್ತಲೂ ದೊಡ್ಡ ದೊಡ್ಡ ಬೆಟ್ಟಗಳು. ಅಲ್ಲಲ್ಲಿ ಚಪ್ಪಟೆಯಾಗಿ ಹಾಸಿದಂತಿದ್ದ ಕಲ್ಲು ಬಂಡೆಗಳು, ಬೆಟ್ಟದ ತುಂಬಾ ಗಿಡ ಹೆಬ್ಬುಲಿಗಳ ಸಂಚಾರ ಬಹಳ. ಕೂತಿದ್ದ ಹಾಗೆಯೆ ಅವನಿಗೆ ನಿದ್ದೆ ಹತ್ತಿತು. ಎಷ್ಟು ಹೊತ್ತು ನಿದ್ದೆಹೋದನೋ? ಕಣ್ಣು ತೆರೆಯುವ ಹೊತ್ತಿಗೆ ಅವನೆದುರಿಗಿದ್ದ ಬಂಡೆಯ ಮೇಲೆ ಒಬ್ಬ ಭಿಲ್ಲರ ಹುಡುಗಿ ಕಣ್ಣು ಉಜ್ಜಿಕೊಂಡು ಎದ್ದು

ಕೂತು ಮತ್ತೆ ನೋಡಿದ. ಹುಡುಗಿ ಕಪ್ಪುಬಣ್ಣದ್ದು. ಹದಿನಾರು ವರ್ಷವಿರಬಹುದು. ಅವನನ್ನೇ ದಿಟ್ಟಿಸಿ ನೋಡುತ್ತಿದ್ದಾಳೆ. ಅವಳ ಮಗ್ಗುಲಲ್ಲಿ ಒಂದು ಬುಟ್ಟಿ, ಆ ಬುಟ್ಟಿಯಲ್ಲಿ ಹಣ್ಣುಕಾಯಿ, ಮಚ್ಚು, ಚೂರಿ ಮುಂತಾದ ವಸ್ತುಗಳೂ ಇದ್ದವು.

ಭಿಲ್ಲರ ಹುಡುಗಿಯ ಲಾವಣ್ಯ ಸೂರ್ಯಬಿಂಬದಿಂದ ಹಚ್ಚನೆಯ ಕಿರಣಗಳು ಬಂದಂತೆ ಬಂದು ಅವನ ಮನಸ್ಸನ್ನಾಕರ್ಷಿಸಿತು. ಅವನ ಮನಸ್ಸು ಅವನ ವಶದಲ್ಲಿರಲಿಲ್ಲ.

"ನೀನು ಭಿಲ್ಲನೇನು?" ಎಂದು ಕೇಳಿದಳು ಭಿಲ್ಲರ ಹುಡುಗಿ.

"ಹೌದು" ಎಂದ ವೀರಭದ್ರ.

"ನಾವಿಬ್ಬರೂ ಈ ಬೆಟ್ಟಗಳಲ್ಲೇ ಇದ್ದುಬಿಡೋಣ. ನನ್ನ ಸಂಗಡ ಇರುತ್ತೀಯಾ?"

"ನಿನಗೆ ತಾಯಿತಂದೆ ಇಲ್ಲವೆ?"

"ಇಲ್ಲ – ಇದ್ದಾರೆ; ನಾ ಕೇಳಿದ ಪ್ರಶ್ನೆಗೆ ಉತ್ತರ ಕೊಡಲೊಲ್ಲೆ ಯೇಕೆ?"

"ನನಗೆ ಪೀನುಗುಲಗೊಂದಿ ತೋರಿಸುವೆಯಾ?"

"ತೋರಿಸಿದರೆ ಸ್ನೇಹ ಬೆಳಸುತ್ತೀಯೇನು?"

"ನಮ್ಮ ತಾಯಿಯನ್ನು ಕೇಳುತ್ತೇನೆ."

"ನಿಮ್ಮ ತಾಯಿ ಎಲ್ಲಿದ್ದಾಳೆ?"

"ನಾಗಲೂಟಿಯಲ್ಲಿ"

"ನಾಗಲೂಟಿಯಲ್ಲಿ ಕಾಡೇ ಇಲ್ಲಾ. ಇಲ್ಲೆಲ್ಲಾ ಕಾಡೇ ಕಾಡು! ನಾವು ಸ್ವೇಚ್ಛೆಯಾಗಿ ತಿರುಗಾಡಬಹುದಲ್ಲವೆ?"

"ಹೌದು"

ಈ ರೀತಿ ಸ್ವಲ್ಪಹೊತ್ತು ಸಂಭಾಷಣೆ ನಡೆಯಿತು. ವೀರಭದ್ರನಿಗೆ ಭಿಲ್ಲರ ಹುಡುಗಿ ಬೇಕಾದಷ್ಟು ಹಣ್ಣು ಕೊಟ್ಟಳು. ಇಬ್ಬರೂ ಸೇರಿ ಕೇಕೆಹಾಕುತ್ತ ಪಾತಾಳಗಂಗೆಯ ಆಚೆಯ ದಡಕ್ಕೆ ಈಸಿಕೊಂಡು ಹೋದರು. ನದಿಯನ್ನು ದಾಟಿ ಆ ಬೆಟ್ಟಗಳಲ್ಲಿ ಸುತ್ತಾಡಿ ಇಬ್ಬರೂ ಹೋಗುತ್ತಿದ್ದಾರೆ. ದಾರಿಯಲ್ಲಿ ಆ ಹುಡುಗಿ ಎಷ್ಟೋ ಕಥೆ ಹೇಳಿದಳು.

ಎಷ್ಟೋ ಹಾಡು ಹಾಡಿದಳು. ಆ ರಾತ್ರಿ ಅವರು ಒಂದು ಮರದ ಮೇಲೆ ಹತ್ತಿ ಕೂತು ಹರಟೆಹೊಡೆಯುತ್ತ ಕಳೆದರು. ಬೆಳಗಾಗುತ್ತಲೆ ಎದ್ದು ಅವರಿಬ್ಬರೂ ಪ್ರಯಾಣವನ್ನು ಮುಂದುವರಿಸಿದರು. ಕಾಲುದಾರಿಯಲ್ಲಿ, ಇತರರಿಗೆ ಗೊತ್ತಿಲ್ಲದ ದಾರಿಯಲ್ಲಿ ಭಿಲ್ಲರ ಹುಡುಗಿ ಅವನನ್ನು ಕರೆದು ಕೊಂಡು ಹೋದಳು.

ಪಾತಾಳಗಂಗೆ ಬೆಟ್ಟಗಳ ನಡುವೆ ಹರಿಯುತ್ತದೆ. ಒಂದು ಕಡೆ ನದಿಗೆ ಅಡ್ಡವಾಗಿ ಬೆಟ್ಟವೊಂದು ನಿಂತಿದೆ. ಕೃಷ್ಣಾನದಿ ಅಲ್ಲಿ ಆ ಬೆಟ್ಟಕ್ಕೆ ಪ್ರದಕ್ಷಿಣೆ ಹಾಕಿ ಹರಿಯಬೇಕು. ಎಷ್ಟೋ ಕಾಲದಿಂದ ನದಿಯು ಹೀಗೆ ಸುತ್ತುವರಿದು ಬೆಟ್ಟವನ್ನು ಕೊರೆದು ಆ ಬೆಟ್ಟದಲ್ಲಿ ಒಂದು ಗವಿ ಆಗಿದೆ. ಮಹಾಪೂರವಿಲ್ಲದ ಕಾಲದಲ್ಲಿ ಪ್ರವಾಹವು ಮಂದವಾಗಿದ್ದು ಗುಹೆಯಲ್ಲಿ ನೀರು ಹರಿಯದೆ ನಿಂತು ಹೋಗುತ್ತದೆ. ತನ್ನ ನೀರಿನಲ್ಲಿ ಬಿದ್ದ ಎಲೆ ಮುಂತಾದವನ್ನು ಕೃಷ್ಣಾನದಿ ಆ ಗುಹೆಯಲ್ಲಿ ಅಡಗಿಸುತ್ತದೆ. ನದಿಯ ನೆರೆಗೆ ಒಂದು ಎತ್ತರವಾದ ಬೆಟ್ಟವಿದೆ. ಆ ಬೆಟ್ಟದ ತಳಭಾಗದಲ್ಲೇ ಪಾತಾಳಗಂಗೆ. ಅದರ ಅಂಚಿಗೆ ಒಂದು ನುಣ್ಣನೆಯ ಕಲ್ಲು. ಆ ಕಲ್ಲಿನ ಮೇಲೆ ಪಾದದ್ವಯದ ಚಿಹ್ನೆಗಳು "ಸಿದ್ಧರಾಮಯ್ಯನ ಪಾದುಕೆ" ಎಂದು ಅದನ್ನು ಕರೆಯುತ್ತಾರೆ. ಮೋಕ್ಷವನ್ನಾಶಿಸುವ ಯಾತ್ರಿಕರು ಆ ಪಾದುಕೆಗಳ ಮೇಲೆ ನಿಂತು ಪಾತಾಳಗಂಗೆಗೆ ತಮ್ಮನ್ನು ತಾವೇ ಅರ್ಪಿಸಿಕೊಳ್ಳುತ್ತಾರೆ. ಅಂತಹವರನ್ನೆಲ್ಲ ಕೃಷ್ಣಾನದಿ ಆ ಗುಹೆಯಲ್ಲಿ ಸೇರಿಸಿಕೊಳ್ಳುತ್ತದೆ. ಅಂತಲೇ ಅದಕ್ಕೆ ಪೀನುಗುಲಗೊಂದಿ ಎಂದು ಹೆಸರು.

ಪೀನುಗುಲಗೊಂದಿ ದಾಟಿದರೆ ಒಂದು ಸಣ್ಣ ಭಿಲ್ಲರ ಪಾಳ್ಯ. ಆ ಪಾಳ್ಯಕ್ಕೆ ಇಬ್ಬರು ನಾಯಕರು ; ಗಂಗ, ಗುರುವ

ಭಿಲ್ಲರ ಹುಡುಗಿ ವೀರಭದ್ರರು ಆ ಪಾಳ್ಯವನ್ನು ಸೇರಿದರು. ಭಿಲ್ಲರ ಹುಡುಗಿ ಆ ಪಾಳ್ಯದವರಿಗೆ ತುಂಬಾ ಪರಿಚಯದವಳು. ಅಲ್ಲಿನ ಸ್ತ್ರೀ ಪುರುಷರು ಭಿಲ್ಲರ ಹುಡುಗಿಯ ಸ್ವತಂತ್ರ ವೃತ್ತಿಯನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುತ್ತಾರೆ. ಅವರ ಆಚಾರ ವ್ಯವಹಾರಕ್ಕೂ ಕಟ್ಟುಪಾಟುಗಳಿಗೂ ಆ ಭಿಲ್ಲರ ಹುಡುಗಿಗೂ ಯಾವ ಸಂಬಂಧವೂ ಇಲ್ಲ.

ಹೇಳುವವರಾಗಲಿ ಕೇಳುವವರಾಗಲಿ ಇಲ್ಲದೆ ಸ್ವೇಚ್ಛೆಯಾಗಿ ಬೆಳೆದು ಬರುತ್ತಿದ್ದಾಳೆ..

ಇವರು ಅಲ್ಲಿಗೆ ಹೋಗುವ ಹೊತ್ತಿಗೆ ಪಾಳ್ಯದಲ್ಲಿ ಬಹಳ ಜನ ಹೆಂಗಸರು ಗಂಡಸರು ಬೇಟೆಗೆ ಹೋಗಿದ್ದರು. ವೀರಭದ್ರನೂ ಭಿಲ್ಲರ ಹುಡುಗಿಯೂ ಅಲ್ಲಿನ ಹುಲ್ಲುಗಾವಲುಗಳಲ್ಲಿ ತಿರುಗಾಡಲು ಹೋದರು. ಸಾಯಂಕಾಲದವರೆಗೆ ಅವರು ಆ ಪ್ರದೇಶದಲ್ಲೆಲ್ಲ ತಿರುಗಾಡಿ ಹೊಟ್ಟೆ ತುಂಬಿಸಿಕೊಂಡು ಕೊನೆಗೆ ಪಾಳ್ಯವನ್ನು ಸೇರಿದರು.

೩

ಒಂದು ದಿನ ಆ ಹುಡುಗಿ ಅಲ್ಲಿನ ಸ್ತ್ರೀಪುರುಷರನ್ನೆಲ್ಲ ಸೇರಿಸಿ ನಾಟ್ಯವಾಡಿಸಿದಳು.

ಗಂಗನೂ ಗುರವನೂ ವೀರಭದ್ರನೂ ಆ ನಾಟ್ಯದಲ್ಲಿ ನೇರದೆ ಸ್ವಲ್ಪ ದೂರದಲ್ಲಿ ಒಂದು ಬಂಡೆಯಮೇಲೆ ಕುಳಿತರು. ವೀರಭದ್ರನನ್ನು ನೋಡುತ್ತಲೆ ಅವನು ಲಚ್ಚಿಯ ಮಗನೆಂದು ಅವರಿಬ್ಬರೂ ಗುರುತಿಸಿದ್ದರು.

"ನೀನು ಇಷ್ಟು ದೂರ ಬರಲು ಕಾರಣವೇನು ?" ಎಂದು ಅವರು ಕೇಳಿದರು.

"ನಮ್ಮ ತಾಯಿ ಸಮುದ್ರದ ನಡುವೆ ಹೋಗುವಳಂತೆ. ಆ ಸಂಗತಿಯನ್ನು ನಿಮಗೆ ತಿಳಿಸಬೇಕೆಂದು ಹೇಳಿದಳು" ಎಂದು ವೀರಭದ್ರ ಹೇಳಿದನು.

"ಗೌರಿಯನ್ನು ನೀನೆಲ್ಲಿ ನೋಡಿದೆ ?" ಎಂದು ಅವರು ಕೇಳಿದರು.

"ಗೌರಿ ಯಾರು ?"

"ನಿನ್ನ ಜೊತೆಯಲ್ಲಿ ಬಂದ ಭಿಲ್ಲರ ಹುಡುಗಿ".

"ದಾರಿಯಲ್ಲಿ ಕಂಡು ನನಗೆ ದಾರಿ ತೋರಿಸಿದಳು".

"ಹಾಗಾದರೆ ನೀನು ಅದೃಷ್ಟವಂತನೇ ಸರಿ".

"ಅದು ಹೇಗೆ ?"

"ಗೌರಿ ಇಂದಿನವರೆಗೂ ಯಾವ ಗಂಡಸಿನೊಡನೆಯೂ ಕಲೆತು, ಬೆರೆತು ಇರಲಿಲ್ಲ". ವೀರಭದ್ರ ಮಾತನಾಡಲಿಲ್ಲ.

"ಗೌರಿ ಭಿಲ್ಲರ ಚಿಕ್ಕ ರಾಣಿ".

"ನಮ್ಮ ತಾಯಿಯನ್ನು ಭಿಲ್ಲರ ರಾಣಿ ಎಂದೂ ನನ್ನನ್ನು ಭಿಲ್ಲರ ರಾಣಿಯ ಮಗನೆಂದೂ ಕರೆಯಲಿಕ್ಕೆ ಕಾರಣವೇನು?" ಎಂದು ಕೇಳಿದ ವೀರಭದ್ರ.

ಅವರಿಬ್ಬರಲ್ಲಿ ಸ್ವಲ್ಪ ಹಿರಿಯನಾದ ಗಂಗ ಆ ಸಂಗತಿಯೆಲ್ಲವನ್ನೂ ವೀರಭದ್ರನಿಗೆ ಹೀಗೆ ಹೇಳಿದ.

"ಲಚ್ಚಿ ಚಿಕ್ಕಂದಿನಲ್ಲಿ ಬಹಳ ಅಂದಗಾತಿ. ಬಹಳ ಚುರುಕು. ಅವಳು ಏರದ ಬೆಟ್ಟವಿಲ್ಲ. ಹತ್ತದ ಗಿಡವಿಲ್ಲ. ಗಂಡಸರಿಗೆ ಸರಿಸಮನಾಗಿ ಬೇಟೆಯಾಡುತ್ತ ಮಾಯೆ ಮಂತ್ರಗಳನ್ನು ಮಾಡುತ್ತ ಇದ್ದಳು. ಇದೇ ಅಲ್ಲದೆ ಕಾಡೆಲ್ಲ ತಿರುಗಿ ಮದ್ದುಮೂಲಿಕೆಗಳ ವೈದ್ಯವನ್ನು ಮಾಡುತ್ತಿದ್ದಳು. ಜೊತೆಗೆ ಸ್ವಲ್ಪಮಟ್ಟಿಗೆ ಮಂತ್ರಗಳನ್ನು ಕೂಡಾ ಕಲಿತುಕೊಂಡಿದ್ದಳು. ಆ ಕಾರಣದಿಂದ ಭಿಲ್ಲರಿಗೆ ಲಚ್ಚಿಯೆಂದರೆ ಬಹಳ ಭಯ; ಭಕ್ತಿ.

"ಚಿಕ್ಕಂದಿನಲ್ಲಿ ಲಚ್ಚಿಗೂ ನನಗೂ ಬಹಳ ಸ್ನೇಹ. ಇಬ್ಬರೂ ಮಡುವಿನಲ್ಲಿ ಈಸಾಡುತ್ತಿದ್ದೆವು. ನದಿಯ ದಡಕ್ಕೆ ಹೋಗಿ ಇಬ್ಬರೂ ಮರಳಿನ ಮೇಲೆ ಮಲಗಿ ಮೊಸಳೆಗಳು ಬಂದಾಗ ಅವನ್ನು ಬಲೆಬೀಸಿ ಹಿಡಿದು ಕೊಳ್ಳುತ್ತಿದ್ದೆವು. ಆಗ ನಮಗೆ ಭಯವೆಂದರೇನೊ ಗೊತ್ತಿರಲಿಲ್ಲ. ಕೆಲವು ವೇಳೆ ಬಹಳ ದಿನಗಳ ವರೆಗೂ ನಾವು ಕಾಡಿನಲ್ಲೇ ಬೇಟೆಯಾಡುತ್ತ ಇದ್ದುಬಿಡುತ್ತಿದ್ದೆವು.

"ಆ ಕಾಲದಲ್ಲೇ ಲಚ್ಚಿ ನನ್ನನ್ನು ಮದುವೆಯಾಗುತ್ತೇನೆಂದು ಹೇಳಿದುದು. ಅದು ಭಿಲ್ಲರಿಗೆ ಬಹಳ ಕಷ್ಟದ ಕಾಲ. ಕಾಡಿನಲ್ಲಿ ಬೆಳೆದ ಬೆಳೆಯನ್ನೆಲ್ಲ ಅಧಿಕಾರಿಗಳು ತೆಗೆದುಕೊಂಡು ಹೋಗುತ್ತಿದ್ದರು. ನಮಗೆ ತಿನ್ನಲು ಸರಿಯಾದ ತಿನಸೇ ಇರುತ್ತಿರಲಿಲ್ಲ. ಎಷ್ಟು ವಿಧವಾಗಿ ಕಷ್ಟಪಟ್ಟರೂ ನಮ್ಮ ಹಸಿವು ಹಿಂಗದು. ನಮ್ಮಲ್ಲಿ ಹೆಂಗಸರಿಗೂ ಗಂಡಸರಿಗೂ ಎಲ್ಲರಿಗೂ ಆಲೋಚನೆ ಬಿತ್ತು. ನಮ್ಮ ಗುರುವ ಬಹಳ ಬುದ್ಧಿವಂತ. ಅನೇಕ ಜನ ಅನೇಕ ಸಲಹೆ ಕೊಟ್ಟರು. ಕೊನೆಗೆ ತೀರ್ಮಾನವಾದುದು ಹೀಗೆ: ಅಧಿಕಾರಿಗಳು ಕಾಡಿನೊಳಕ್ಕೆ ಕಾಲಿಡದಂತೆ ಮಾಡಬೇಕು. ಆದರೆ ಹಾಗೆ ಮಾಡುವುದು ಹೇಗೆ? ಎಲ್ಲರೂ ಯೋಚಿಸಿದರು. ಯಾರಿಗೂ

ದಾರಿ ತೋರಲಿಲ್ಲ. ಯಾರಾದರೂ ಸರಿಯಾದ ಸಲಹೆ ಕೊಟ್ಟರೆ ಅವರನ್ನು ಲಚ್ಚಿ ತಾನು ಮದುವೆಯಾಗುವೆನೆಂದಳು. ಗುರುವ ತಾನು ಮಾಡುವುದಾಗಿ ಹೇಳಿದ. ನನಗೆ ತುಂಬಾ ದುಃಖ ಬಂತು. ಲಚ್ಚಿಯ ಮೇಲೂ ಗುರುವನ ಮೇಲೂ ಕೋಪ ಬಂತು ಹಗೆ ತೀರಿಸಿಕೊಳ್ಳಲು ಅದು ಸಮಯವಲ್ಲ.

"ಗುರುವನು ಭಿಲ್ಲರನ್ನೆಲ್ಲ ಹತ್ತು ಪಂಗಡ ಮಾಡಿ, ಒಂದೊಂದು ಪಂಗಡಕ್ಕೂ ಒಬ್ಬೊಬ್ಬ ಮುಖ್ಯಸ್ಥನನ್ನು ಏರ್ಪಾಟು ಮಾಡಿದ. ಹಲವು ಪಂಗಡಗಳನ್ನು ದಾರಿಕಾಯಲು ಕಳುಹಿದ. ಹಲವು ಪಂಗಡಗಳನ್ನು ಕಾಡಿನಲ್ಲಿದ್ದ ಅಧಿಕಾರಿಗಳ ಮೇಲೆ ಕಳುಹಿಸಿದ.

"ಬಳಿಕ ಗುರುವ ಲಚ್ಚಿಯನ್ನು ಮದುವೆಯಾದ ಲಚ್ಚಿಯ ತಂದೆ ತಾಯಿಗೆ ನಾಲ್ಕು ಜೊತೆ ಆಕಳನ್ನು ಕೊಟ್ಟು ಲಚ್ಚಿಯನ್ನು ಕರೆದುಕೊಂಡು ಹೋದ. ಒಂದು ದಿನ ನಾನು ಲಚ್ಚಿಯನ್ನು ಗುಟ್ಟಾಗಿ ಕಂಡು ಚಿಕ್ಕಂದಿನಲ್ಲಿ ಅವಳು ಹೇಳಿದ್ದ ಮಾತನ್ನು ನೆನಪು ಮಾಡಿದೆ. ಲಚ್ಚಿಗೆ ದುಃಖವಾಯಿತು. 'ಚಿಕ್ಕಂದಿನಲ್ಲಿ ನಿನ್ನನ್ನು ಮದುವೆಯಾದೆ. ಈಗ ಗುರುವನನ್ನು ಮದುವೆ ಮಾಡಿಕೊಂಡಿದ್ದೇನೆ. ನನಗಿಬ್ಬರು ಗಂಡಂದಿರು. ಇರಬಾರದೇನೂ?' ಎಂದಳು ಲಚ್ಚಿ. ಇಬ್ಬರು ಗಂಡಂದಿರು ಗುಟ್ಟಾಗಿ ಇರಕೂಡದೆಂದು ನಾನು ಹೇಳಿದ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಕೊನೆಗೆ ಏನಾಯಿತೆಂದರೆ ಲಚ್ಚಿ ಗುರುವನೊಡನೆ ಸಂಸಾರ ಮಾಡಿಕೊಂಡಿದ್ದರೂ ನಾವಿಬ್ಬರೂ ಗಂಡಹೆಂಡಿರಂತೆ ಇರಬೇಕೆಂದು ನಿಶ್ಚಯಿಸಿದೆವು. ಆದರೆ ಈ ವಿಷಯವನ್ನು ರಹಸ್ಯವಾಗಿಡಬೇಕು.

"ಆ ದಿನಗಳಲ್ಲಿ ಭಿಲ್ಲರ ಪ್ರತಾಪ ಜಗತ್ತಿನಲ್ಲಿ ಪ್ರಸಿದ್ಧವಾಯಿತು. ರಸ್ತೆಗಳ ಮೇಲೆ ಯಾರು ಪ್ರಯಾಣ ಮಾಡಿದರೂ ಭಿಲ್ಲರ ಬಾಣಗಳಿಗೆ ಗುರಿಯಾಗಬೇಕಾದುದೇ. ಕಾಡಿನ ಹತ್ತಿರ ಬರಲು ಎಲ್ಲರೂ ಅಂಜುತ್ತಿದ್ದರು. ಭಿಲ್ಲರು ಎಷ್ಟು ಜನರನ್ನು ಕೊಂದರೋ, ಎಷ್ಟು ಜನರನ್ನು ಸೆರೆಹಿಡಿದರೋ ಹೇಳಲಿಕ್ಕೆ ಬರುವುದಿಲ್ಲ. ಕಾಡಿನ ರಾಜ್ಯಭಾರ ಪುನಃ ಭಿಲ್ಲರಿಗೇ ಸೇರಿತು. ನಮಗೆ ಹೊಟ್ಟೆತುಂಬ ಆಹಾರ ಸಿಗುವಂತಾಯಿತು. ಸಂತೋಷವಾಯಿತು.

"ಈ ಸಂಗತಿ ಗೊತ್ತಾಗಿ ಪೊಲೀಸು ಪಡೆಗಳು ಕಾಡಿಗೆ ಬಂದವು. ನಮಗೂ ಅವರಿಗೂ ಅನೇಕ ಯುದ್ಧಗಳು ನಡೆದವು. ನಮ್ಮದು ಕತ್ತಿ-ದೊಣ್ಣೆ, ಅವರದು ತುಪಾಕಿ. ಹೀಗಾಗಿ ಭಿಲ್ಲರು ಬಹಳ ಮಂದಿ ಸತ್ತರು. ಭಯಗೊಂಡು ಭಿಲ್ಲರು ಓಡಲಾರಂಭಿಸಿದರು. ಪೊಲೀಸರು ಕಾಡಿನಲ್ಲಿ ಜಿಂಕೆಗಳನ್ನು ಬೇಟೆಯಾಡುವಂತೆ ಅವರನ್ನು ಬೇಟೆಯಾಡಿದರು ಸ್ವಲ್ಪ ಕಾಲ ಕಾಡಿನ ರಾಜ್ಯಭಾರ ಭಿಲ್ಲರ ಕೈತಪ್ಪಿ ಬಿಳಿಯರಿಗೆ ಅಧೀನವಾಯಿತು. ಸಾಯದೆ ಉಳಿದ ಭಿಲ್ಲರು ಬಿಳಿಯರ ರಾಜ್ಯವನ್ನು ಒಪ್ಪಿಕೊಳ್ಳದೆ ತಪ್ಪುವ ಹಾಗಿಲ್ಲ. ಮೋಸದಿಂದ ಲಂಚ ಕೊಟ್ಟು ಒಬ್ಬ ಬಿಳಿಯದೊರೆ ಭಿಲ್ಲರ ಮುಖಂಡರಲ್ಲಿ ಹಲವರನ್ನು ಹಿಡಿದು ಅವರಿಗೆ ಫಾಸಿ ವಿಧಿಸಿದ. ಅದರಿಂದ ಗಲಭೆ ತಗ್ಗಿತು.

"ಭಿಲ್ಲರ ಕೋಪ ಮತ್ತೆ ಕೆರಳದ ಹಾಗೆ, ಅವರಲ್ಲಿ ಪುನಃ ಗಲಭೆ ಯುಂಟಾಗದಂತೆ ಮಾಡಲೋಸುಗ ಅವರಿಗೆ ಸರಿಯಾದ ಕೂಲಿಯನ್ನು ಕೊಟ್ಟು ಕೆಲಸ ಮಾಡಿಸಲು ಒಬ್ಬ ಬಿಳಿಯದೊರೆ ಮುಂದೆಬಂದ. ಅವನು ನಾಗಲೂಟಿಯ ಹತ್ತಿರ ಬಂಗಲೆಯಲ್ಲಿದ್ದುಕೊಂಡು ಎಲ್ಲಾ ಕೆಲಸಗಳನ್ನೂ ನ್ಯಾಯವಾಗಿಯೂ ಚೆನ್ನಾಗಿಯೂ ಮಾಡಿಸುತ್ತಿದ್ದ. ಭಿಲ್ಲರನ್ನು ಕಂಡರೆ ಅವನಿಗೆ ಬಹಳ ದಯಾದೃಷ್ಟಿ. ಅವರಿಗೆ ಕಷ್ಟ ಬಂದಾಗ ಹಣ ಕೊಡುತ್ತಿದ್ದ. ಭಿಲ್ಲರೆಲ್ಲರಿಗೂ ಅವನಲ್ಲಿ ಗೌರವವೂ ಭಕ್ತಿಯೂ ಉಂಟಾಯಿತು. ಎಲ್ಲರೂ ಸಂತುಷ್ಟರಾಗಿ ಕಾಲಕಳೆಯುತ್ತಿದ್ದರು.

"ಲಚ್ಚಿಯು ನನ್ನೊಡನೆ ಅಡ್ಡಿಯಿಲ್ಲದೆ ತಿರುಗಾಡುತ್ತಿದ್ದಾಳೆಂಬ ಸಂಗತಿ ಗುರುವನಿಗೆ ಗೊತ್ತಾಯಿತು. ಗುರುವನೂ ಲಚ್ಚಿಯೂ ಒಂದು ದಿನ ಬೇಟೆಗೆ ಹೋದರು. ನಾನೂ ಸ್ವತಂತ್ರವಾಗಿ ಬೇಟೆಗೆ ಹೋದೆ. ಆ ದಿನ ಮಧ್ಯಾಹ್ನ ನಾವು ಒಂದುಕಡೆ ಸೇರಿದೆವು. ಗುರುವನಿಗೆ ನನ್ನನ್ನು ನೋಡಿದ ಕೂಡಲೆ ಕೋಪ ಬಂತು. ನನ್ನ ಮೇಲೆ ಬಂದು ಬಿದ್ದ. ನಾವಿಬ್ಬರೂ ಹೋರಾಡಿದೆವು. ಲಚ್ಚಿ ನನ್ನ ಪಕ್ಷವನ್ನು ವಹಿಸಿದಳು. ಗುರುವನನ್ನು ನೂಕಿ ಎತ್ತಿಹಾಕಿದಳು. ಗುರುವ ಮಾತನಾಡದೆ ಹೊರಟು ಹೋದ. ಆ ದಿನ ಲಚ್ಚಿಯೂ ನಾನೂ ಸಾಯಂಕಾಲದವರೆಗೆ ಕಾಡಿನಲ್ಲಿ ತಿರುಗಾಡಿ ಮನೆ ಸೇರಿದೆವು.

"ಗುರುವನು ಭಿಲ್ಲರಲ್ಲಿ ಹಿರಿಯರನ್ನು ಕರೆದು ತಕರಾರು ಮಾಡಿದ. ಆ ಹಿರಿಯರೆಲ್ಲ ವಿಚಾರಣೆಗೆ ಕುಳಿತರು. ಈ ವಿಷಯ ನಿಜವೇ ಎಂದು ನನ್ನನ್ನು ಕೇಳಿದರು. ನಾನು ನಿಜವೆಂದು ಒಪ್ಪಿದೆ. 'ನಿಜವೇನು?' ಎಂದು ಲಚ್ಚಿಯನ್ನು ಕೇಳಿದರು. ನನ್ನಿಷ್ಟ ಎಂಬುದಾಗಿ ಲಚ್ಚಿಯು ನಿರ್ಲಕ್ಷ್ಯವಾಗಿ ಉತ್ತರ ಕೊಟ್ಟಳು. ಎಲ್ಲವೂ ತಿಳಿದಂತೆಯೇ ಆಯಿತು ಎಂದು ಹಿರಿಯರು ಹೀಗೆ ತೀರ್ಪು ಕೊಟ್ಟರು. 'ಗುರುವನ ಹೆಂಡತಿ ಯಾದ ಲಚ್ಚಿಯನ್ನು ಮೋಸದಿಂದ ಗಂಗನು ತನ್ನ ಹೆಂಡತಿಯ ಹಾಗೆ ನಡಸಿಕೊಂಡಿದ್ದಾನಾಗಿ ಇನ್ನು ಮುಂದೆ ಗಂಗನೇ ಲಚ್ಚಿಯನ್ನು ಸೇರಿ ಕೊಂಡು ಇರಬೇಕು; ಗುರುವನಿಗೆ ಅನನುಕೂಲವಾಗಿರುವುದರಿಂದ ಅವ ನಿಗೆ ಗಂಗನು ಹದಿನೈದು ರೂಪಾಯಿಗಳು ದಂಡಕೊಡತಕ್ಕದ್ದು' ಎಂದು.

"ಲಚ್ಚಿಯು ನನ್ನ ವಶವಾದುದಕ್ಕೆ ನಾನೂ ಲಚ್ಚಿಯೂ ಸಂತೋಷ ಪಟ್ಟೆವು. ಆದರೆ ಹದಿನೈದು ರೂಪಾಯಿಗಳ ದಂಡ ತೆರುವುದು ಹೇಗೆ? ನನಗೆ ಹೇಳಿಕೊಳ್ಳುವಂಥ ಆಸ್ತಿ ಏನೂ ಇಲ್ಲ. ದಂಡವನ್ನು ಕೊಡದೆ ಹೋದರೆ ನನ್ನನ್ನು ಅವರು ಏನಾದರೂ ಮಾಡಬಹುದು ಏನು ಮಾಡು ವುದಕ್ಕೂ ತೋಚದೆ ನಾನು ಲಚ್ಚಿಯನ್ನು ಮಾತ್ರ ಸ್ವೀಕರಿಸಿ, ದಂಡದ ಮಾತಿಗೇ ಹೋಗದೆ ಅನೇಕ ದಿನಗಳನ್ನು ನೂಕಿದೆ. ಭಿಲ್ಲರ ಹಿರಿಯರಿಗೆ ಕೋಪ ಬಂತು. ನನ್ನನ್ನು ಶಿಕ್ಷಿಸಬೇಕೆಂದು ಭಿಲ್ಲರೆಲ್ಲ ಸಿದ್ಧತೆ ನಡೆಸಿದಾರೆ. ನನ್ನ ಬಂಧುಗಳೂ ಸ್ನೇಹಿತರೂ ನನ್ನ ಪಕ್ಷವಹಿಸಿ ನನ್ನನ್ನು ಕಾಪಾಡಲು ಪ್ರಯತ್ನಿಸುತ್ತಿದಾರೆ. ಇನ್ನೇನು ನಮ್ಮಲ್ಲಿ ಒಂದು ಯುದ್ಧವೇ ನಡೆಯ ಬೇಕು. ಅಂಥದು ಹೇಗೋ ತಪ್ಪಿತು, ಕಾರಣವೇನೆಂದರೆ . . . .

"ನಾಗಲೂಟಿಯಲ್ಲಿದ್ದ ಬಿಳಿಯದೊರೆಗೆ ನಮ್ಮೀ ಜಗಳದ ಸಮಾಚಾರ ತಿಳಿಯಿತು. ಆತನು ಬಂದು ಸುದ್ದಿಯನ್ನೆಲ್ಲ ವಿಚಾರಿಸಿ ಜಗಳಕ್ಕೆ ಮೂಲ ವಾದ ಹದಿನೈದು ರೂಪಾಯಿಗಳನ್ನು ನನ್ನ ಪರವಾಗಿ ಗುರುವನಿಗೆ ಕೊಟ್ಟು ಹೊರಟುಹೋದ. ಆದರೆ ಇದರಲ್ಲಿ ಒಂದು ತೊಂದರೆ ಹುಟ್ಟಿ ಬಂತು. ಹದಿನೈದು ರೂಪಾಯಿಗಳನ್ನು ಯಾರು ಕೊಡುವರೊ ಅವರಿಗೇ ಲಚ್ಚಿ ಸೇರಬೇಕೆಂದದಷ್ಟೆ. ಲಚ್ಚಿ ನನಗೇ ಸೇರಬೇಕೆಂದು ನಾನು ಎಷ್ಟು ಹೇಳಿ ಕೊಂಡರೂ ಹಿರಿಯರು ಕಿವಿಗೆ ಹಾಕಿಕೊಳ್ಳಲಿಲ್ಲ. ಅದು ಆಚಾರ

ಅಂದರು. ಮರುದಿನವೆ ಅವರು ಲಚ್ಚಿಯನ್ನು ಕರೆದುಕೊಂಡು ಹೋಗಿ 'ಈಕೆ ನಿಮ್ಮ ಹೆಂಡತಿ' ಎಂದು ಹೇಳಿ ಬಿಳಿಯದೊರೆಗೆ ವಹಿಸಿಕೊಟ್ಟರು. ದೊರೆ ಕೊಟ್ಟ ರೂಪಾಯಿಗೆ ಪ್ರತಿಫಲ ಮುಟ್ಟಿದ ಹಾಗಾಯಿತೆಂದು ಅವರು ತಿಳಿಸಿದರು. ದೊರೆಗೆ ತೀರಾ ಆಶ್ಚರ್ಯವಾಯಿತು. ಆದರೆ ತಾನು ಭಿಲ್ಲರ ನಡುವೆ ಇದ್ದ ಕಾರಣ ಭಿಲ್ಲರ ಆಚಾರಗಳಿಗೆ ಬದ್ಧನೆಂದು ತಿಳಿದು ವಿಧಿಗೆ ತಲೆಬಾಗಿಸಿ ಸುಮ್ಮನಾದ. ಆತನು ಬ್ರಹ್ಮಚಾರಿ. ಲಚ್ಚಿ ಅಂದಿನಿಂದ ಬಿಳಿಯ ದೊರೆಯ ಮನೆಯಲ್ಲಿರಬೇಕಾಯಿತು".

೪

ಲಚ್ಚಿಯನ್ನು ಭಿಲ್ಲರ ಹಿರಿಯರೆಲ್ಲ ಸೇರಿ ಈ ರೀತಿ ಮಾಡಿದ್ದರಿಂದ ನನಗೆ ದುಃಖವೆನಿಸಿತು. ಗುರುವನಿಗೂ ಕೂಡ ದುಃಖವಾಯಿತು. ಬಿಳಿಯ ದೊರೆಯ ಕಡೆಯಿಂದ ಲಚ್ಚಿಯನ್ನು ಹಿಂತೆಗೆದುಕೊಳ್ಳಬೇಕೆಂದು ಪ್ರಯತ್ನ ಮಾಡಿದೆವು ಇದರಿಂದ ಭಿಲ್ಲರೆಲ್ಲರಿಗೂ ಮಾತುಬರುವುದೆಂದು ಬಗೆದು ಉಳಿದ ಭಿಲ್ಲರು ನಮ್ಮನ್ನು ಬೇರೆಯಾಗಿರಿಸಿದರು. ಆದರೂ ಭಿಲ್ಲರ ಜಾತಿಯಲ್ಲಿ ಹುಟ್ಟಿದ ಭಿಲ್ಲಳೊಬ್ಬಳನ್ನು ಇತರ ಜಾತಿಯವರಿಗೆ ಒಪ್ಪಿಸಿದ್ದು ನ್ಯಾಯವಲ್ಲವೆಂದು ಅವರಿಗೆ ಹೇಳಿದೆವು. ಅವರು ಕೇಳಲಿಲ್ಲ. ಆಗ ನಾವಿಬ್ಬರೂ ನಮ್ಮ ಸ್ನೇಹಿತರನ್ನೂ ಬಂಧುಗಳನ್ನೂ ಕರೆದುಕೊಂಡು, ಆ ಭಿಲ್ಲ ಕುಲಗೇಡಿಗಳನ್ನೆಲ್ಲಾ ನಿಂದಿಸಿ ಹೊರಟುಬಂಧು ಇಲ್ಲಿ — ಈ ಪೀನುಗುಲಗೊಂದಿಯ ಹತ್ತಿರ ಒಂದು ಪಾಳ್ಯವನ್ನು ಕಟ್ಟಿ ವಾಸಮಾಡುತ್ತಿದ್ದೇವೆ. ನಮ್ಮಿಬ್ಬರಿಗೂ ಲಚ್ಚಿಯ ಮೇಲಿನ ಅಭಿಮಾನ ಹೋಗಲಿಲ್ಲ. ಎಂದಿಗಾದರೂ ಅವಳನ್ನು ನಮ್ಮ ವಶಮಾಡಿಕೊಳ್ಳಬೇಕೆಂಬ ಆಶೆಯಿಂದ ಇದೇವೆ.

"ಲಚ್ಚಿ ದೊರೆಗಳ ಮನೆಯನ್ನು ಪ್ರವೇಶಿಸಿದಳು. ಕೆಲವು ದಿನಗಳ ವರೆಗೆ ಲಚ್ಚಿಗೂ ದೊರೆಗಳಿಗೂ ಸಂಭಾಷಣೆ ನಡೆಯಲಿಲ್ಲ. ಅಲ್ಲಿಂದ ತಪ್ಪಿಸಿಕೊಂಡು ಓಡಿಹೋದರೆ ದೊರೆ ಏನುಮಾಡಿಬಿಡುತ್ತಾನೆಯೋ ಎಂಬ ಭಯ. ಅಲ್ಲದೆ ತೊಂದರೆಯಿಲ್ಲದೆ ಹೊಟ್ಟೆಬಟ್ಟೆ ನಡೆದು ಹೋಗುತ್ತದೆ. ಇಂಥ ಭಾಗ್ಯವನ್ನು ಕೈಬಿಡಲು ಆಕೆಗೆ ಮನಸ್ಸುಬರಲಿಲ್ಲ. ದೊರೆ ಮೆಲ್ಲಮೆಲ್ಲನೆ ಲಚ್ಚಿಯೊಡನೆ ಮಾತನಾಡಲು ಪ್ರಾರಂಭಿಸಿದರು. 'ಪ್ರಿಯೆ,

ಹೀಗೆ ಬಾ. ಮುತ್ತುಕೊಡು' ಅನ್ನುವರಂತೆ. ಲಚ್ಚಿಗೆ ಬೆಲೆಬಾಳುವ ಬಟ್ಟೆಗಳನ್ನೂ ಒಡವೆಗಳನ್ನೂ ಮತ್ತು ಒಳ್ಳೊಳ್ಳೆಯ ತಿನಸುಗಳನ್ನೂ ಕೊಟ್ಟರಂತೆ. ಇದರಿಂದ ಅವರಿಬ್ಬರಲ್ಲೂ ಅನ್ಯೋನ್ಯತೆ ಬೆಳೆಯಿತು. ಇಬ್ಬರೂ ಗಂಡಹೆಂಡಿರಂತೆ ಇದ್ದಾರೆಂದು ಭಿಲ್ಲರಿಗೆ ತಿಳಿಯಿತು. ಭಿಲ್ಲರು ದೊರೆಯೊಡನೆ ಮಾತನಾಡಬೇಕಾಗಿ ಬಂದರೆ, ದೊರೆಗೆ ತಮ್ಮ ಕಷ್ಟ ಸುಖವನ್ನು ಹೇಳಿಕೊಳ್ಳಬೇಕಾಗಿ ಬಂದರೆ, ದೊರೆಯನ್ನು ಏನಾದರೂ ಪ್ರಾರ್ಥಿಸಿಕೊಳ್ಳಬೇಕಾಗಿಬಂದರೆ ಲಚ್ಚಿಯ ಮೂಲಕ ಆ ಕೆಲಸಗಳನ್ನು ಮಾಡುತ್ತಿದ್ದರು. ಬರಬರುತ್ತ ಲಚ್ಚಿ ಭಿಲ್ಲರಿಗೆಲ್ಲ ದೇವತೆಯಂತಾದಳು.

"ಬಿಳಿಯ ದೊರೆ ಲಚ್ಚಿಯನ್ನು 'ಬೆಸ್ಸಿ, ನನ್ನ ಪ್ರಿಯೆ, ಬೆಸ್ಸಿ' ಎಂದು ಕರೆಯುತ್ತಿದ್ದ. ಭಿಲ್ಲರ ವ್ಯವಹಾರಗಳನ್ನು ಹರಿಸಬೇಕಾಗಿ ಬಂದಾಗಲೆಲ್ಲ ಲಚ್ಚಿಯ ಸಲಹೆಯಿಲ್ಲದೆ ಯಾವ ಕೆಲಸವನ್ನೂ ಮಾಡುತ್ತಿದ್ದಿಲ್ಲ. ಲಚ್ಚಿ ತನಗೆ ಸಾಧ್ಯವಾದಮಟ್ಟಿಗೂ ಭಿಲ್ಲರಿಗೆಲ್ಲ ಉಪಕಾರ ಮಾಡಿದಳು.

"ದೊರೆ ಮತ್ತು ಬೆಸ್ಸಿ ಕೂಡಿ, ಹಲವು ಭಿಲ್ಲರನ್ನು ಕರೆದುಕೊಂಡು ಆಗಾಗ್ಗೆ ಬೇಟೆಗೆ ಹೋಗುತ್ತಿದ್ದರು. ಆಗ ಬೆಸ್ಸಿ ಬಂದೂಕಿನಿಂದ ಗುರಿ ತಪ್ಪದೆ ಹೊಡೆಯುವುದನ್ನು ಕಲಿತಳು. ಇದನ್ನು ಕಂಡು ಭಿಲ್ಲರು ಬೆಸ್ಸಿ ಅಂದರೆ ಭಯದಿಂದಿರುತ್ತಿದ್ದರು. ಆ ದಿನಗಳಲ್ಲೇ ಭಿಲ್ಲರು ಲಚ್ಚಿಗೆ ಭಿಲ್ಲರರಾಣಿ ಎಂದು ಹೆಸರಿಟ್ಟುದು. ಈ ಮಾತು ಕೇಳಿ ದೊರೆ ಸಹ ಸಂತೋಷಗೊಂಡು ಆಕೆಯನ್ನು ಭಿಲ್ಲರರಾಣಿ ಎಂದೇ ಕರೆಯಹತ್ತಿದ.

"ಒಂದುದಿನ ನಾನೂ ಗುರುವನೂ ಕೂಡಿ ನಾಗಲೂಟಿಗೆ ಹೋದೆವು. ಅಲ್ಲಿ ಹಲವು ದಿನ ಕಾದಿದ್ದು ಸಮಯನೋಡಿ ಲಚ್ಚಿಯನ್ನು ಗುಟ್ಟಾಗಿ ಕಂಡೆವು. ನಾವು ಹೊಸದಾಗಿ ಕಟ್ಟಿದ ಪಾಳ್ಯಕ್ಕೆ ಕರೆದುಕೊಂಡುಹೋದರೆ ಬರುವಳೇನೊ ಎಂದು ಕೇಳಿದೆವು.

"ಲಚ್ಚಿಗೆ ನಮ್ಮ ಮೇಲೆ ಅಭಿಮಾನ ಕಡಿಮೆಯಾಗಿರಲಿಲ್ಲ. ಆದರೂ ನಮ್ಮೊಡನೆ ಬಂದದ್ದಾದರೆ ದೊರೆ ಏನುಮಾಡಿಬಿಡುತ್ತಾನೆಯೋ ಎಂದೂ, ನಮಗೇ ಅಲ್ಲದೆ ಆದರಿಂದ ಭಿಲ್ಲರೆಲ್ಲರಿಗೂ ತೊಡಕಾದೀತೆಂದೂ ಏನೇನೊ ನೆವ ಹೇಳಿ ತಪ್ಪಿಸಿಕೊಂಡಳು. ನಮ್ಮ ಪ್ರಯತ್ನಗಳು ನಿಷ್ಫಲವಾದವು.

ಆಗ್ಗೆ ಲಚ್ಚಿ ಬಸಿರು. ದೊರೆ ಆಕೆಯನ್ನು ದಿನ ದಿನಕ್ಕೂ ಹೆಚ್ಚು ಹೆಚ್ಚು ಪ್ರೇಮದಿಂದ ಕಾಣುತ್ತಿದ್ದ. ಆಕೆ ತನ್ನ ಮೈಯ್ಯನ್ನು ಅಲುಗಾಡಿಸಲು ಕೂಡ ಅವಕಾಶ ಕೊಡುತ್ತಿರಲಿಲ್ಲ. ಹಗಲೂ ಇರುಳೂ ತನ್ನ ಬೆನ್ನಿಯ ಹತ್ತಿರವೇ ಇರುತ್ತಿದ್ದ. ಲಚ್ಚಿಗೂ ದೊರೆ ಅಂದರೆ ಎಲ್ಲೂ ಇಲ್ಲದ ಪ್ರೇಮ. ಹೀಗೆ ಇವರು ಅನ್ಯೋನ್ಯವಾಗಿ ಇರುವಾಗ ಬಿಳಿಯ ದೊರೆಗೆ ಬದಲಿ ಆಯಿತು. ಈ ಸಂಗತಿಯನ್ನು ಲಚ್ಚಿಗೆ ತಿಳಿಸಿ ಆಕೆಯನ್ನು ಬಿಟ್ಟು ಹೊರಡಲು ಅನುಮತಿಯನ್ನು ಕೇಳಿದ. ಲಚ್ಚಿ ತನ್ನನ್ನೂ ಜೊತೆಗೆ ಕರೆದುಕೊಂಡು ಹೋಗಿರೆಂದು ಎಷ್ಟೋ ಪ್ರಾರ್ಥಿಸಿದಳು. ಅದು ಸಾಧ್ಯ ವಿಲ್ಲವೆಂದ ದೊರೆ. ಕೊನೆಗೆ ಲಚ್ಚಿ ಒಪ್ಪಿಕೊಂಡಳು. ದೊರೆ ಆಕೆಗೆ ಹಲವು ಕಾಣಿಕೆಗಳನ್ನು ಕೊಟ್ಟು ಅಲ್ಲಿಂದ ಹೊರಟು ಹೋದ. ಭಿಲ್ಲರ ರಾಣಿ ಒಬ್ಬಳೇ ಆ ಸ್ಥಳದಲ್ಲಿ ಗುಡಿಸಲು ಹಾಕಿಕೊಂಡು ಅದರಲ್ಲಿರುತ್ತಿದಾಳೆ.

"ಈ ಸುದ್ದಿ ತಿಳಿದು ನಾನೂ ಗುರುವನೂ ಕೂಡಿ ಪುನಃ ನಾಗಲೂಟಿಗೆ ಹೋದೆವು. ಲಚ್ಚಿ ನಮ್ಮನ್ನು ನೋಡಿ ಕಣ್ಣಿನಲ್ಲಿ ನೀರು ತಂದಳು. ನಮ್ಮೊಡನೆ ಬಾಯೆಂದು ಆಕೆಯನ್ನು ಕೇಳಿದ್ದಕ್ಕೆ ತನ್ನ ಸ್ಥಿತಿಯನ್ನು ನಮಗೆ ತಿಳಿಸಿ ಬರಲಾರೆನೆಂದಳು. ಆಗಲೇ ಒಂದು ಬಂದೂಕು, ಒಂದು ಬೆಳ್ಳಿಯ ಸಿಗರೇಟು ಕೇಸು, ನೂರು ಕಾಸು ನಮ್ಮ ಕೈಗೆ ಜೋಪಾನ ಮಾಡಬೇಕೆಂದು ಕೊಟ್ಟಳು. ತಾನು ಬೇಡಿದಾಗ ಅವನ್ನು ಪುನಃ ಕೊಡು ಬಹುದೆಂದು ಹೇಳಿದಳು. ನೀನು ಬಂದಿರುವೆಯಾದ ಕಾರಣ ಈದಿನ ಅವನ್ನು ನಿನಗೆ ಕೊಟ್ಟುಬಿಡುತ್ತೇವೆ. ನೀನು ಆಕೆಯ ಮಗನಾದ್ದರಿಂದ, ಅವು ನಿನ್ನ ತಂದೆಯವಾದ್ದರಿಂದ ಅವು ನಿನಗೇ ಸೇರಬೇಕು. ನೀನು ಚಿಕ್ಕ ಮಗುವಾಗಿದ್ದಾಗ ನಾವು ಪುನಃ ನಾಗಲೂಟಿಗೆ ಹೋಗಿ ಲಚ್ಚಿಯನ್ನು ಬಾಯೆಂದು ಕರೆದೆವು. ಬಿಳಿಯದೊರೆ ಎಂದಾದರೂ ಆ ಪ್ರಾಂತಕ್ಕೆ ಬರಬಹುದೆಂದೂ ಆದ್ದರಿಂದ ತಾನು ಅಲ್ಲಿಯೇ ಇರಬೇಕೆಂದೂ ಎಂದಾ ದರೊಂದು ದಿನ ತಾನು ಬಿಳಿಯ ದೊರೆಯ ದೇಶಕ್ಕೆ ಹೋಗಬೇಕೆಂದೂ ಮಗನು ದೊಡ್ಡವನಾದ ಮೇಲೆ ತನ್ನನ್ನು ತಪ್ಪದೆ ಅವನ ತಂದೆಯ ಬಳಿಗೆ ಕರೆದುಕೊಂಡು ಹೋಗುವನೆಂದೂ ಏನೇನೋ ಅಡ್ಡಮಾತು ಹೇಳಿದಳು. ಬಿಳಿಯದೊರೆಯೊಡನೆ ಸಂಸಾರ ಮಾಡುತ್ತಿದ್ದಾಗ, ಆತನು ತನ್ನ ದೇಶ,

ಅಲ್ಲಿನ ಜನ, ಅವರ ವೇಷಭೂಷಣ, ಆ ದೇಶದವರ ಆಚಾರ ವ್ಯವಹಾರಗಳು ಇವನ್ನೆಲ್ಲ ಕುರಿತು ಆಕೆಗೆ ಇಷ್ಟು ಅಷ್ಟು ಹೇಳಿದ್ದ. ಆಗಿನಿಂದ ಲಚ್ಚಿಗೆ ಆ ದೇಶಕ್ಕೆ ಹೋಗಬೇಕೆಂದೂ ಅಲ್ಲಿ ತನ್ನ ಗಂಡನ ಕೂಡ ಸಂಸಾರ ಮಾಡಬೇಕೆಂದೂ ಆಸೆ".

ವೀರಭದ್ರನು ತನ್ನ ತಾಯಿಯ ಕಥೆಯನ್ನು ಆಮೂಲಾಗ್ರವಾಗಿ ಕೇಳಿದ. ತನ್ನ ಜನ್ಮವೃತ್ತಾಂತವನ್ನು ತಿಳಿದುಕೊಂಡ. ಆಗಾಗ ತನ್ನ ತಾಯಿಯು ಸಮುದ್ರಗಳ ಮಧ್ಯಕ್ಕೆ ಹೋಗುವೆನೆಂದು ಹೇಳುವ ಮಾತಿನ ಅರ್ಥ ಈಗ ಅವನಿಗೆ ತಿಳಿದಂತಾಯಿತು.

ಇಷ್ಟರಲ್ಲಿ ಗೌರಿ ಓಡುತ್ತ ಬಂದು "ಇಷ್ಟು ಹೊತ್ತೂ ನನ್ನ ಕಣ್ಣಿಗೆ ಬೀಳದೆ ಏನು ಮಾಡುತ್ತಿದ್ದೀಯೆ? ಬಾ ನಾಟ್ಯವಾಡೋಣ, ಬಾ" ಎಂದು ಕೈ ಹಿಡಿದು ಕರೆದುಕೊಂಡು ಹೋದಳು. ಬಹಳ ಹೊತ್ತು ಅವರು ಭಿಲ್ಲರೊಡನೆ ಸೇರಿ ಆಡುತ್ತ ಪಾಡುತ್ತ ಹಾಯಾಗಿ ಕಾಲಕಳೆದರು.

ವೀರಭದ್ರನು ಅದೇ ದಿನ ಗಂಗ ಮತ್ತು ಗುರುವನಿಂದ ಬಂದೂಕು ಮುಂತಾದ ವಸ್ತುಗಳನ್ನು ಇಸುಕೊಂಡು ಊರಿಗೆ ಹೊರಡಲು ಪ್ರಯಾಣ ಮಾಡಿದ. ಭಿಲ್ಲರ ಹುಡುಗಿಯೂ ಸಂಗಡ ಬರುತ್ತೇನೆಂದಳು.

ಆ ದಿನ ಸಾಯಂಕಾಲ ಅವರು ಒಂದು ಬೆಟ್ಟದ ಕೆಳಗಿನ ಕೊಳದ ಹತ್ತಿರ ವಿಶ್ರಮಿಸಿದರು. ಹಾಯಾಗಿ ಹರಟೆ ಹೊಡೆದರು. ಭಿಲ್ಲರ ಹುಡುಗಿ ತನ್ನನ್ನು ಮದುವೆಯಾಗೆಂದು ಆಗ ಕೇಳಿದಳು.

"ನಿನ್ನ ತಾಯಿ ತಂದೆಗೆ ಘಟ್ಟದ ಕೆಳಗಿನ ಆಕಳನ್ನು ತೆರವುಕೊಟ್ಟರೆ ತಾನೇ" ಅಂದ ವೀರಭದ್ರ.

"ನನ್ನನ್ನು ಎಲ್ಲರೂ ಭಿಲ್ಲರ ಚಿಕ್ಕರಾಣಿ ಅನ್ನುತ್ತಾರೆ ನಾನೇ ಎಲ್ಲರನ್ನೂ ಆಳುವುದು. ನನ್ನನ್ನು ಕೇಳುವರಾರೂ ಇಲ್ಲ" ಎಂದು ಅವಳು ಹೇಳಿದಳು.

"ನೀನು ಭಿಲ್ಲರ ಚಿಕ್ಕರಾಣಿಯಾದರೆ ನಿನಗಿಂತ ದೊಡ್ಡವಳಾದ ಭಿಲ್ಲರ ರಾಣಿಯೊಬ್ಬಳು ಇರಬಹುದಲ್ಲವೆ? ಆಕೆಯ ವಿಷಯ ಕೇಳುತ್ತೀಯಾ?"

"ಯಾರು ಭಿಲ್ಲರ ದೊಡ್ಡ ರಾಣಿ?"

“ನನ್ನ ತಾಯಿ”.

“ನಿಜವಾಗಿಯೂ! ಹಾಗಾದರೆ ಕೇಳುತ್ತೇನೆ. ಅದಕ್ಕೋಸ್ಕರವೇ ನಿನ್ನನ್ನು ಮದುವೆ ಮಾಡಿಕೊಳ್ಳೋಣವೆಂದು ಅನಿಸಿದ್ದು”.

“ನಾನು ನಿನ್ನನ್ನು ಮದುವೆಯಾಗುವುದಿಲ್ಲವೆಂದರೆ ಏನು ಮಾಡುತ್ತೀಯೆ ?”

“ನಿನ್ನನ್ನು ನಾನು ಮದುವೆಯಾಗುತ್ತೇನೆ. ನಾನು ಚಿಕ್ಕ ರಾಣಿಯಾದುದರಿಂದ ನೀನು ನನ್ನ ಮಾತು ಕೇಳಬೇಕು”.

“ಮದುವೆಯಾದ ಮೇಲೂ ನಿನ್ನ ಮಾತನ್ನು ಕೇಳಬೇಕಾಗಿದ್ದರೆ ನಾನು ಮದುವೆಯಾಗುವುದಿಲ್ಲ.

“ಆಗ ನಿನ್ನ ಮಾತನ್ನು ಕೇಳುತ್ತೇನೆ ಬಿಡು” ಎಂದು ಹೇಳಿ ಭಿಲ್ಲರ ಹುಡುಗಿ ಕೈ ಜೋಡಿಸಿಕೊಂಡು ಹತ್ತಿರ ಬಂದು ನಿಂತುಕೊಂಡಳು. ಕೊನೆಗೆ ವೀರಭದ್ರ ಮದುವೆಯಾಗಲು ಒಪ್ಪಿದ. ಆದರೆ ತನ್ನ ತಾಯಿಗೆ ಹೇಳುವ ಮೊದಲೇ ಮಾತುಕೊಡುವುದಕ್ಕಾಗುವುದಿಲ್ಲವೆಂದ. ಭಿಲ್ಲರ ಹುಡುಗಿಗೆ ಸ್ವಲ್ಪ ಹೊತ್ತು ಕೋಪ ಬಂತು. ಅಲ್ಲಿಂದ ಹಿಂದಕ್ಕೆ ಹೊರಟುಹೋಗುತ್ತೇನೆಂದಳು. ಮುಂದೆ ಅವನು ಹೊರಟುಹೋಗಬೇಕಾದ ದಾರಿಯನ್ನೂ ತೋರಿಸಿದಳು. ಇಷ್ಟು ಮಾಡಿ ಕಡೆಗೆ ಅವನ ಕತ್ತಿನ ಸುತ್ತ ಕೈ ಹಾಕಿ ಅಪ್ಪಿ “ನನ್ನನ್ನು ಮದುವೆಯಾದರೆ ಮಾತ್ರ ಬಿಡುತ್ತೇನೆ” ಎಂದಳು. ಅಂತೂ ವೀರಭದ್ರ ಕೊನೆಗೆ ಒಪ್ಪಿಗೆ ಕೊಟ್ಟ.

ಬೆಟ್ಟದ ಹೊಂಡದ ನೀರಿನಲ್ಲಿ ನಕ್ಷತ್ರಗಳು ಪ್ರತಿಬಿಂಬಿಸುತ್ತಿವೆ. ಮರದ ಟೊಂಗೆಗಳ ಸಂದಿನಲ್ಲಿ ಹಾದು ಗಾಳಿ ಬೀಸುತ್ತಿದೆ. ಬಿದಿರುಮೆಳೆಗಳಿಂದ ಶಬ್ದ ಕೇಳಿಬರುತ್ತಿದೆ. ಆಗಲೇ ಗಂಡು ಹೆಣ್ಣು ಹಕ್ಕಿಗಳು ಗೂಡುಗಳಲ್ಲಿ ನಿದ್ದೆಮಾಡಹತ್ತಿವೆ. ಒಂದು ಹಕ್ಕಿ ಮಾತ್ರ ಕೊಂಬೆಯ ಮೇಲೆ ಕೂತು ಶುಭಗಾನ ಮಾಡುತ್ತಿದೆ. ಆ ಸಮಯದಲ್ಲಿ ಅದೇ ತಾವಿನಲ್ಲಿ ಭಿಲ್ಲರ ಹುಡುಗಿಗೂ ಭಿಲ್ಲನಿಗೂ ಮದುವೆ ಆಯಿತು. ಹಿರಿಯರಿಲ್ಲದ ಮದುವೆ, ವಿಧಿ ವಿಧಾನಗಳಿಲ್ಲದ ಮದುವೆ.

ಆದಿಮಾನವನಿಗೆ ಇಂಥ ಸನ್ನಿವೇಶದಲ್ಲೇ ಮದುವೆಯಾಗಿರಬೇಕು.

ತಮ್ಮ ವಿವಾಹವನ್ನು ಸ್ಥಿರಪಡಿಸಲು ಅವರು ಒಬ್ಬರನ್ನೊಬ್ಬರು

ಮುತ್ತಿಟ್ಟುಕೊಂಡರು. ಇಬ್ಬರೂ ಒಂದಾಗಿ, ಒಂದು ಸಲ ಅಪ್ಪಿಕೊಂಡರು.

ಬೆಳಗಿನ ಝಾವದಲ್ಲಿ ಭಿಲ್ಲರಿಬ್ಬರೂ ಕೇಕೆಹಾಕುತ್ತ ಹರಟೆ ಹೊಡೆಯುತ್ತ ನಾಗಲೂಟಿಯ ಕಡೆಗೆ ಹೊರಟಿದಾರೆ. ಅವರ ಪಾಲಿಗೆ ಪ್ರಪಂಚವೆಲ್ಲ ಕೇಕೆಹಾಕುತ್ತಿದೆ. ನಡಿಗೆಯಲ್ಲಿ ಅವರಿಗೆ ಶ್ರಮವಿಲ್ಲ. ಭಿಲ್ಲರ ಹುಡುಗಿಯ ಮಾತಿನಲ್ಲೂ, ನಡೆಯಲ್ಲೂ ಕಥೆಗಳಲ್ಲೂ ಅಂಗಾಂಗಗಳಲ್ಲೂ ಎಲ್ಲದರಲ್ಲೂ ಉತ್ಸಾಹವೆ; ಎಲ್ಲವೂ ನಗೆಯೆ.

ಅವರಿಬ್ಬರೂ ನಾಗಲೂಟಿ ಸೇರಿದಾರೆ. ವೀರಭದ್ರ ತನ್ನ ಗುಡಿಸಿಲಿನ ಹತ್ತಿರಕ್ಕೆ ಭಿಲ್ಲರ ಹುಡುಗಿಯನ್ನು ಕರೆದುಕೊಂಡು ಹೋಗಿದಾನೆ. ಅಲ್ಲಿ ಅವನಿಗೆ ತನ್ನ ತಾಯಿ ಕಾಣಿಸಲಿಲ್ಲ. ಉಳಿದ ಭಿಲ್ಲರು ಬಂದು ಹೇಳಿದರು: 'ಅವನು ಹೊರಟ ಮಾರನೇ ದಿನವೇ ಭಿಲ್ಲರ ರಾಣಿಗೆ ಕಸಾರಿಕೆ ಆಯಿತು. ಆ ಬೇನೆಯಲ್ಲಿ "ನಾನು ಸಮುದ್ರಗಳ ಮಧ್ಯಕ್ಕೆ ಹೋಗುತ್ತೇನೆ" ಎಂದು ಹೇಳುತ್ತಾ ಸತ್ತುಹೋದಳು' ಎಂದು.

ವೀರಭದ್ರ ಬಹಳ ಹೊತ್ತು ದುಃಖಪಟ್ಟ. ಭಿಲ್ಲರ ಹುಡುಗಿ ಅವನನ್ನು ಸಂತೈಸಿದಳು. ಮರುದಿನ ಅವರಿಬ್ಬರೂ ಹೊಂಡದಲ್ಲಿ ಸ್ನಾನ ಮಾಡಿ ದಟ್ಟವಾದ ಕಾಡಿಗೆ ಕಾಡುಮೃಗಗಳೊಡನೆ ಒಕ್ಕಲಿರಲು ಹೊರಟುಹೋದರು.

ವೀರಭದ್ರ ಇನ್ನೂ ಆಲೋಚನೆಯಲ್ಲಿ ಇರುವುದನ್ನು ಕಂಡು ಗೌರಿ ಹೇಳಿದಳು. "ನಿನ್ನ ತಾಯಿ ಭಿಲ್ಲರ ರಾಣಿ ಸಮುದ್ರಗಳ ಮಧ್ಯಕ್ಕೆ ಹೋಗಿದ್ದಾಳೆ. ನಿನ್ನ ಹೆಂಡತಿಯಾದ ಭಿಲ್ಲರರಾಣಿ ನಿನ್ನನ್ನು ಅಗಲದೆ ಕಾಡಿನಲ್ಲಿ ನಿನ್ನೊಡನೆ ತಿರುಗಾಡುತ್ತಿದಾಳೆ. ಇನ್ನು ಏಕೆ ಚಿಂತೆ."

# ಬಂಗಾಳಿ ಸಾಹಿತ್ಯ

ಪ್ರಾಚೀನ ಬಂಗಾಳದ ಮೇಲೆ ಬೌದ್ಧಧರ್ಮ ಪ್ರಚಂಡ ಪ್ರಭಾವ ವನ್ನು ಬೀರಿತು. ಬಂಗಾಳ ಪ್ರಾಕೃತ ಭಾಷೆಯ ಮರೆಹೊಕ್ಕು ತನ್ನ ಭಾಷೆಯನ್ನು ರೂಪಿಸಿಕೊಂಡಿತು. ರಾಮಾಯಿ ಪಂಡಿತನ 'ಸನ್ಯ ಪುರಾಣ' ಬಂಗಾಳಿಯ ಪ್ರಾಚೀನ ಕೃತಿಗಳಲ್ಲೊಂದೆಂದು ಪರಿಗಣಿಸ ಲ್ಪಟ್ಟಿದೆ. ರಾಜಾ ಗೋಪೀಚಂದ, ಮಯನವತಿ, ಮಾಣಿಕ್ ಚಂದ್ ಮೊದಲಾದವರು ಕ್ರಿ.ಶ ೧೦೦೦ ದಲ್ಲಿ ಹಾಡುಗಬ್ಬಗಳನ್ನು ರಚಿಸಿದರು. ತರುವಾಯ ವೈಷ್ಣವ ಧರ್ಮಪ್ರವಾಹ ಬಂಗಾಳವನ್ನು ಆವರಿಸಿತು. ಸಹಜ ಧರ್ಮ ಬೋಧಕನಾದ ಚಂಡೀದಾಸ (೧೪ನೆಯ ಶತಮಾನ) ಅವನ ಅನಂತರದವರಾದ ಜಯದೇವ, ವಿದ್ಯಾಪತಿ ಈ ಸಾಹಿತ್ಯದ ರತ್ನತ್ರಯ ಗಳಾಗಿದ್ದಾರೆ. ಚೈತನ್ಯನ ಮಧುರಭಾವ ಬಂಗಾಳಿ ಜನಜೀವನದ ಮೇಲ್ಯೆ ಹಾಗೂ ಕಾವ್ಯದ ಮೇಲೆ ವಿಶೇಷ ಪ್ರಭೆಯನ್ನು ಬೀರಿತು. ೧೫ರಿಂಧ ೧೭ನೆಯ ಶತಮಾನದವರೆಗೆ ಬಂಗಾಳ ಶಕ್ತಿ ಪೂಜೆಯ ತೌರಾಯಿತು. ಆ ಕಾಲದಲ್ಲಿ ಕವಿಕಂಕಣ ಬಿರುದಾಂಕಿತನಾದ ಮುಕುಂದರಾಮ 'ಚಂಡಿ ಕಾವ್ಯ'ವನ್ನು ರಚಿಸಿದ. ೧೮ನೆಯ ಶತಮಾನದಲ್ಲಿ ಭರತಚಂದ್ರರಾಯ ಗುಣಾಕರ ಮತ್ತು ರಾಮಪ್ರಸಾದ ಈ ಸಂಪ್ರದಾಯವನ್ನು ಬೆಳಸಿದರು. ಸಾಹಿತ್ಯದಲ್ಲಿ ರಾಮಪ್ರಸಾದನಿಗೆ ಅಗ್ರಪೂಜೆ. ಅವನನ್ನು ಸೋದರಿ ನಿವೇದಿತಾ ಮಹಾಕವಿ ವಿಲಿಯಂ ಬ್ಲೇಕಿಗೆ ಹೋಲಿಸಿದ್ದಾರೆ. ಹಿಂದೂ ಕವಿಗಳಲ್ಲದೆ ದೌಲತ್ ಕಾಜ಼ಿ ಮತ್ತು ಅಲವಾಲರೆಂಬ ಮುಸಲ್ಮಾನ ಕವಿ ಗಳು ವೈಷ್ಣವ ಮತ್ತು ಶಾಕ್ತ ಸಾಹಿತ್ಯವನ್ನು ಬೆಳಸಿದರು. ೧೫ನೆಯ ಶತಮಾನದಲ್ಲಿ ಕೃತ್ತಿವಾಸ ಓಜ್ಹಾನ 'ರಾಮಾಯಣ'ವೂ ಸಂಜಯನ 'ಮಹಾಭಾರತ'ವೂ ರಚಿತವಾದವು. ಪರಾಗಲ್ ಖಾನ್‌ನೆಂಬ ಮುಸ ಲ್ಮಾನ ದಳಪತಿ ಪ್ರೋತ್ಸಾಹಿಸಿ ಕವೀಂದ್ರ ಪರಮೇಶ್ವರನಿಂದ (೧೬ನೆಯ ಶತಮಾನ) ಒಂದು ಮಹಾಭಾರತವನ್ನು ಬರೆಯಿಸಿದ. ಅವನ ಮಗ

ಚೋಟಿಯಾನ್ ಶ್ರೀಕರನ್ ನಂದಿ ಕವಿಯಿಂದ ತಾನೊಂದು ಮಹಾಭಾರತವನ್ನು ಬರೆಯಿಸಿದ. ಚೈತನ್ಯನ ಮೇಲೆ ಬೇಕಾದಷ್ಟು ಕಾವ್ಯಗಳು ಹುಟ್ಟಿದವು. 'ಚೈತನ್ಯ ಭಾಗವತ' ಮತ್ತು ಕೃಷ್ಣದಾಸ ಕವಿರಾಜನ 'ಚೈತನ್ಯ ಚರಿತಾಮೃತ' ಇವುಗಳಲ್ಲಿ ವಿಶೇಷ ಮನ್ನಣೆಗೊಳಗಾದವು.

ಭಾರತ ಚಂದ್ರರಾಯ್ (೧೭೫೩) ಬರೆದ 'ವಿದ್ಯಾಸುಂದರ' ಕಾವ್ಯ ಮತ್ತು ಮೈಖೇಲ್ ಮಧುಸೂಧನ ದತ್ತ ಬರೆದ 'ಮೇಘನಾದ ವಧಾ' ಕಾವ್ಯ ಆಧುನಿಕ ವಂಗಸಾಹಿತ್ಯದ ಪುರೋಗಾಮಿಗಳಾದವು. ಕಾವ್ಯದಲ್ಲಿ ದೇಶಭಕ್ತಿಯನ್ನು ತುಂಬಿ, ನವಯುಗದ ಜೀವನಾಡಿಯನ್ನು ಮಿಡಿದ ಕವಿಗಳೆಂದರೆ ಈಶ್ವರ ಚಂದ್ರಗುಪ್ತ ಮತ್ತು ರಂಗಲಾಲ ಬಂಜ.

ಬಂಗಾಳದ ಸಾಹಿತ್ಯವೂ ಉಳಿದ ಪ್ರಾಂತಗಳ ಸಾಹಿತ್ಯದಂತೆಯೆ ಮೊದಲು ಛಂದೋಬದ್ಧವಾಗಿತ್ತೆಂಬುದು ಇದರಿಂದ ವ್ಯಕ್ತವಾಗುತ್ತದೆ. ಮಿಷನರಿಗಳು ಗದ್ಯ ಭಾಷೆಯ ಪ್ರಚಾರವನ್ನು ಮಾಡಿದರು. ಈ ಕಾರ್ಯಕ್ಕೆ ರಾಜಾರಾಮ ಮೋಹನರಾಯರೂ ಈಶ್ವರಚಂದ್ರ ವಿದ್ಯಾಸಾಗರರೂ ನೆರವಾದರು. ಶೈಶವಕಾಲದ ಗದ್ಯಕ್ಕೆ ಪ್ರೌಢಾವಸ್ಥೆಯನ್ನು ತಂದುಕೊಟ್ಟವರು ಬಂಕಿಮಚಂದ್ರರು ಮೊದಮೊದಲು ಬಂಗಾಳಾ ಸಾಹಿತ್ಯದಲ್ಲಿ ಇದ್ದುದು ದೇವತೆಗಳ ಕತೆ. ಅವು ಹೋಗಿ ನರ-ನಾರಿಯರ ಕತೆಗಳು ಬಂದವು ದೇವರ ಸ್ಥಾನವನ್ನು ದೇಶ ತೆಗೆದುಕೊಂಡಿತು. ಅಂಧವಿಶ್ವಾಸಕ್ಕೆ, ಸಂಕುಚಿತ ಮನೋವೃತ್ತಿಗೆ ಇಂಗ್ಲಿಷ್ ಸಾಹಿತ್ಯದಿಂದ ಚೆನ್ನಾಗಿ ಏಟು ಬಿದ್ದಿತು. ದೇಶದ ಮಹಾತ್ಮ್ಯವನ್ನು ಜನತೆಯಲ್ಲಿ ಬೇರೂರಿಸುವ ಸಾಹಿತ್ಯ ನಿರ್ಮಾಣವಾಗತೊಡಗಿತು. ಇಂಥ ಸಾಹಿತ್ಯದ ನಿರ್ಮಾಪಕರು ಬಂಕಿಮಚಂದ್ರರು ಮತ್ತು ಮಧುಸೂದನ ದತ್ತರು.

ರವೀಂದ್ರರಿಂದ ಸಾಹಿತ್ಯ ಬಹುಮುಖವಾಗಿ ಬೆಳೆಯತೊಡಗಿತು. ಆಧುನಿಕ ಕಥಾ ಸಾಹಿತ್ಯದ ಪ್ರಥಮ ಪ್ರವರ್ತಕರು ರವೀಂದ್ರನಾಥರು. ಅವರ ಕತೆಗಳಲ್ಲಿ ವೈಚಿತ್ರ್ಯ, ಸುಂದರವಾದ ಶೈಲಿ, ಭಾವಸೌಷ್ಠವತೆ ಇವೆ. ಅವರ ಕೃತಿಗಳು ಬಂಗಾಲದ ಪ್ರಕೃತಿ, ಬಂಗಾಳಿಗಳ ನಿತ್ಯದ ಸುಖದುಃಖಗಳ ತರಂಗಗಳಿಂದ ತುಂಬಿದ ಪ್ರಶಾಂತ ಜೀವನದ ಭೂಮಿ

ಯಲ್ಲಿ ಹುಟ್ಟಿದವು. ಗೀತಕಾವ್ಯಗಳಂತೆ ಅವು ಸುಂದರವಾಗಿವೆ; ಮರ್ಮಾಂತಿಕವಾಗಿವೆ. ಆದರೆ ಬಂಗಾಳದ ಕಥಾ ಸಾಹಿತ್ಯದಲ್ಲಿ ನಾವು ಸ್ತ್ರೀಪುರುಷರ, ಅವರ ಕಾರ್ಯಕಲಾಪಗಳ ವಾಸ್ತವತೆಯನ್ನು ಕಾಣ ಬೇಕಾದರೆ ಶರಚ್ಚಂದ್ರ ಚಟ್ಟೋಪಾಧ್ಯಾಯರ ಕಥಾ ಸಾಹಿತ್ಯಕ್ಕೆ ಹೋಗಬೇಕು.

ಶರತ್‌ಬಾಬುಗಳ ಕತೆಗಳು ಬಹಳಿಲ್ಲ. ಇದ್ದ ಕೆಲವೇ ಅತ್ಯಂತ ಶುದ್ಧ ವಾಗಿವೆ ತಮ್ಮದೊಂದು ಸ್ವತಂತ್ರವಾದ ದಾರಿಯಲ್ಲಿ ಮುನ್ನಡೆದಿವೆ. ಶರತ್ ಬಾಬುಗಳ ಕತೆಗಳಲ್ಲಿ ಮನುಷ್ಯನ ಭಾವಾತ್ಮಕತೆಯಿಲ್ಲ, ಆನುಷಂಗಿಕ ವೇದನೆಯಿಲ್ಲ. ರವೀಂದ್ರರ ಕಥಾ ಸಾಹಿತ್ಯವು ಅಮೂರ್ತವೂ, ತಾತ್ವಿಕವೂ ಆಗಿದ್ದರೆ ಶರತ್‌ಬಾಬುಗಳದು ತುಂಬಾ ವೈಯ್ಯಕ್ತಿಕವಾಗಿದೆ.

ಕಳೆದ ಮಹಾಯುದ್ಧ ಪ್ರಪಂಚದಲ್ಲಿ ಮಾನವನ ಪ್ರತಿಯೊಂದು ಕ್ಷೇತ್ರದಲ್ಲಿಯೂ ಕ್ರಾಂತಿಯನ್ನುಂಟುಮಾಡಿತು. ಅದರ ಪರಿಣಾಮ ಸಾಹಿತ್ಯದ ಮೇಲೂ ಆಗಿ ಮನೋವಿಜ್ಞಾನ ಜನ್ಮತಾಳಿತು. ಕತೆಯಲ್ಲಿಯೂ ಹೊಸ ಹೊಸ ವಿಷಯ ವಿಚಾರಗಳು ಮಾಡತೊಡಗಿದವು. ತಂದೆ ತಾಯಿ, ಅಣ್ಣ ತಂಗಿ, ಶ್ರೀಮಂತ ಬಡವ, ರಾಜಪ್ರಜೆಯ ಸಂಪರ್ಕ, ಕಾಮ ವಿಜ್ಞಾನ, ರಾಷ್ಟ್ರವಿಜ್ಞಾನವನ್ನು ಕುರಿತು ಕತೆಗಳು ಹುಟ್ಟತೊಡಗಿದವು. ಈ ಬಗೆಯ ಕತೆಗಳನ್ನು ನಿರ್ಮಿಸಲು ಹೊರಟ ಆಧುನಿಕ ಕತೆಗಾರ ರಲ್ಲಿ ಪ್ರಮಥನಾಥ ಚೌಧುರಿ, ಶೈಲಜಾನಂದ ಮುಖ್ಯೋಪಾಧ್ಯಾಯ, ಪ್ರೇಮೇಂದ್ರಮಿತ್ರ, ವಿಭೂತಿ ಭೂಷಣ ವಂದ್ಯೋಪಾಧ್ಯಾಯ, ಪ್ರಬೋಧ ಕುಮಾರ ಸನ್ಯಾಲ, ಜಗದೀಶ ಗುಪ್ತ, ಬುದ್ಧದೇವ ಬಸು ಮೊದಲಾದ ವರು ಮುಖ್ಯರು. ಇವರ ಕತೆಗಳಲ್ಲಿ ಹೊಸವಾಗಿ ಜಾಗ್ರತವಾದ ಜಗತ್ತಿನ ವಾಣಿ ಕೇಳಿಸುವುದು.

# ಪ್ರಮಥನಾಥ ಚೌಧರಿ

ಪ್ರಮಥಬಾಬುಗಳು ಪಾಬ್ನಾ ಜಿಲ್ಲೆಯ ಹರಿಪುರದ ವಿಖ್ಯಾತ ಜಮೀಂದಾರ ಚೌಧರಿ ಮನೆತನದವರು. ೧೮೬೮ರಲ್ಲಿ ಬಂಗಾಳದ ಯಶೋಹರದಲ್ಲಿ (Jessore) ಹುಟ್ಟಿದರು. ಚಿಕ್ಕಂದಿನ ವಿದ್ಯಾಭ್ಯಾಸ ಮುಗಿಸಿ ಕಲ್ಕತ್ತೆಗೆ ಬಂದು ವಿಶ್ವವಿದ್ಯಾನಿಲಯದ ಎಂ.ಎ. ಮಾಡಿಕೊಂಡು ಬ್ಯಾರಿಸ್ಟರ್ ಪರೀಕ್ಷೆಗೆ ಇಂಗ್ಲೆಂಡಿಗೆ ಹೋಗಿ ೧೮೯೩ರಲ್ಲಿ ಹಿಂತಿರುಗಿ ಕಲ್ಕತ್ತೆಯಲ್ಲಿ ವಕೀಲಿವೃತ್ತಿಯನ್ನು ಆರಂಭಿಸಿದರು. ೧೮೯೯ರಲ್ಲಿ ರವೀಂದ್ರನಾಥರ ಸೋದರ ಸೊಸೆ ಶ್ರೀಮತಿ ಇಂದಿರಾ ದೇವಿಯವರೊಡನೆ ಇವರ ವಿವಾಹ ನೆರವೇರಿತು ಆಗಿನಿಂದಲೂ ಈ ದಂಪತಿಗಳು ಸಾಹಿತ್ಯಸೇವೆ ಮಾಡುತ್ತ ವಂಗಸಾಹಿತ್ಯ ಕ್ಷೇತ್ರದಲ್ಲಿ ಕೀರ್ತಿಗಳಿಸಿರುವರು

ಶ್ರೀಯುತರಿಗೆ ಫ್ರೆಂಚ್ ಮತ್ತು ಇಟಾಲಿಯನ್ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವಿದೆ. ಈ ಭಾಷೆಗಳಿಂದ ಹಲವು ರಚನೆಗಳನ್ನು ಬಂಗಾಳಿಗೆ ಅನುವಾದಿಸಿರುವರು. ಇವರು ೧೯೧೪ರಲ್ಲಿ 'ಸಬುಜಪತ್ರ' (ಹಸುರೆಲೆ) ಎಂಬ ಪತ್ರಿಕೆ ಹೊರಡಿಸಿದರು ರವೀಂದ್ರರು ಈ ಪತ್ರಿಕೆಯ ಮುಖ್ಯಲೇಖಕರಾಗಿದ್ದರು. ಆ ಕಾಲದವರೆಗೆ ಬಂಗಾಲಿ ಸಾಹಿತ್ಯಕ್ಷೇತ್ರದಲ್ಲಿ ಮಾತನಾಡುವ ಭಾಷೆ (ಚಲ್ತಿ ಕಥಾ) ಮತ್ತು ಸಾಹಿತ್ಯದ ಭಾಷೆ (ಸಾಧು ಭಾಷಾ) ಬಹು ಭೇದವಿತ್ತು. ಶ್ರೀಯುತರು ತಮ್ಮ ರಚನೆಗಳಲ್ಲಿ ಮಾತನಾಡುವ ಭಾಷೆಯನ್ನು ಉಪಯೋಗಿಸಿ ಅದಕ್ಕೆ ಸಾಹಿತ್ಯಕ್ಷೇತ್ರದಲ್ಲಿ ಗೌರವ ಸಂಪಾದಿಸಿಕೊಟ್ಟು ವಂಗಸಾಹಿತ್ಯದ 'ನೂತನಪಥ ಪ್ರವರ್ತಕ' ರಾದರು. ಹಲವು ಉತ್ಸಾಹಿ ತರುಣರಿಗೆ ಸಾಹಿತ್ಯಕ್ಷೇತ್ರದಲ್ಲಿ ಕಾಲಿಡಲು ಪ್ರೋತ್ಸಾಹಿಸಿ ಹಲವು ವಿಧಗಳಲ್ಲಿ ಅವರಿಗೆ ಸಹಾಯ ಮಾಡಿದರು. ಇಂದಿನ ವಂಗ ಸಾಹಿತ್ಯ ಕ್ಷೇತ್ರದಲ್ಲಿ ಇವರ ಶಿಷ್ಯರು ಹಲವರು ಪ್ರಸಿದ್ಧರಾಗಿರುವರು. ಶ್ರೀಯುತರು 'ಅಲಕಾ' ಮತ್ತು 'ರೂಪ ಓರೀತಿ' ಎಂಬ ಪತ್ರಿಕೆಗಳ ಸಂಪಾದಕರಾಗಿದ್ದು ಈಗ 'ವಿಶ್ವಭಾರತಿ' ಪತ್ರಿಕೆ ಬಂಗಾಳೀ

ವಿಭಾಗದ ಪ್ರಧಾನ ಸಂಪಾದಕರಾಗಿರುವರು. ಪ್ರಮಥನಾಥಬಾಬುಗಳು ಸ್ವಂತ ಹೆಸರಿನಲ್ಲೂ 'ಬೀರ್‌ಬಲ್' ಎಂಬ ಉಪನಾಮದಿಂದಲೂ ಹಲವು ರಚನೆಗಳನ್ನು ಸೃಷ್ಟಿಸಿರುವರು.

ಚಾರ್-ಯಾರಿ-ಕಥಾ, ಆಹುತಿ, ನೀಲಲೋಹಿತೇರ್ ಕಥಾ, ನೀಲ ಲೋಹಿತೇರ್ ಆದಿಪ್ರೇಮ್, ಘೋಷಾಲೇರ್ ತ್ರಿಕಥಾ, ಅನುಕಥಾ ಸಪ್ತಕ್ ಎಂಬ ಸಣ್ಣಕತೆಗಳನ್ನೂ ಸಾನೆಟ್ ಪಂಚಾಶತ್, ಪದಚರಣ್ ಎಂಬ ಕವಿತೆಗಳನ್ನೂ ಬೀರ್‌ಬಲೇರ್ ಹಾಲ್‌ಖಾತಾ, ಮಯಾರಿಕೀ, ಆಮಾದೇರ್ ಶಿಕ್ಷಾ, ಪ್ರಾಚೀನ್ ಹಿಂದುಸ್ತಾನ್ ಮತ್ತು ನಾನಾ ಕಥಾ, ಮುಂತಾದ ಪ್ರಬಂಧಗಳನ್ನೂ ಬರೆದಿರುವರು.

# ಆ ಹು ತಿ

ಅನುವಾದಕ: ಅ. ನಾರಾಯಣಸ್ವಾಮಿ ಅಯ್ಯರ್

(೧)

ಪಾಶ್ಚಾತ್ಯ ನಾಗರೀಕತೆ ತನ್ನ ಕೊಂಬನ್ನು ನಮ್ಮ ಗ್ರಾಮದ ಮಧ್ಯದಲ್ಲಿ ನುಗ್ಗಿಸಿಕೊಂಡು ಹೋಗಿರಲಿಲ್ಲ. ಅಂದರೆ ರೈಲ್ ರಸ್ತೆ ನಮ್ಮ ಗ್ರಾಮದಿಂದ ಸ್ವಲ್ಪ ದೂರದಲ್ಲಿದೆ. ಕಲ್ಕತ್ತೆಯಿಂದ ನಮ್ಮೂರಿಗೆ ಹೋಗಲು ಎರಡು ಮಾರ್ಗಗಳಿವೆ. ಮಳೆಗಾಲದಲ್ಲಿ ದೋಣಿಯ ಮೂಲಕ ಜಲಮಾರ್ಗವಾಗಿ ; ಶೀತ ಮತ್ತು ಬೇಸಿಗೆಯಲ್ಲಿ ಓಬೀರಾಯನ ಕಾಲದ ವಾಹನಗಳ ಮೂಲಕ ಭೂಮಾರ್ಗವಾಗಿ.

ಈ ಜಲಮಾರ್ಗ ಭೂಮಾರ್ಗಗಳು ಬೇರೆಬೇರೆ ದಿಕ್ಕಿನಲ್ಲಿವೆ. ನಾನು ಬಹುಕಾಲದಿಂದ ಜಲಮಾರ್ಗವಾಗಿಯೇ ಹೋಗಿಬರುತ್ತಿದ್ದುದರಿಂದ ಬಹಳ ದಿನಗಳವರೆಗೆ ನನಗೆ ಭೂಮಾರ್ಗದ ಪರಿಚಯವೇ ಇಲ್ಲ. ನಾನು ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ವರ್ಷ ಏನೋ ವಿಶೇಷ ಕೆಲಸದ ಕಾರಣ ನಮ್ಮೂರಿಗೆ ಹೋಗಬೇಕಾಗಿ ಬಂತು. ಅದು ಭೂಮಾರ್ಗವಾಗಿ. ಈ ಪ್ರಯಾಣದಲ್ಲಿ ಸಂಭವಿಸಿದ ಅದ್ಭುತ ಅನುಭವ ವನ್ನು ನಿಮಗೆ ತಿಳಿಸುತ್ತೇನೆ.

ಬೆಳಗ್ಗೆ ೬ ಘಂಟೆಗೆ ರೈಲಿನಿಂದ ಇಳಿದೆ. ನನಗೋಸ್ಕರ ಪಲ್ಲಕ್ಕಿ ಯೊಡನೆ ಬೇಹಾರಿಗಳು ಸಿದ್ಧರಾಗಿದ್ದರು. ಪಾಲ್ಕಿಯನ್ನು ನೋಡಿದಾಗ ಅದರೊಳಕ್ಕೆ ಪ್ರವೇಶಿಸುವ ಆಶೆ ವೃದ್ಧಿಯಾಯಿತೆಂದು ಖಂಡಿತ ಹೇಳ ಲಾರೆ. ಏಕೆಂದರೆ ಕಣ್ಣಿನ ಅಂದಾಜಿನಿಂದ ನೋಡಿದಾಗಲೇ ಅದರ ಅಗಲ ಒಂದೂವರೆ ಮೊಳ, ಉದ್ದ ಮೂರು ಮೊಳ ಇತ್ತು. ಈ ವಿಸ್ತೀರ್ಣ ದಲ್ಲಿ ನನ್ನ ಶರೀರವನ್ನು ಅಡಗಿಸಬೇಕಿತ್ತು. ಇದರ ಮೇಲೆ ಬೇಹಾರಿಗಳ ಶರೀರವೋ ! ಹೇಳತೀರದು. ಇಂತಹ ಅಸ್ಥಿ ಚರ್ಮಮಯ ಮನುಷ್ಯ

ರನ್ನು ಇತರ ದೇಶಗಳಲ್ಲಿ ಆಸ್ಪತ್ರೆಯಿಂದ ಹೊರಗೆ ಕಾಣುವುದು ಅಸಾಧ್ಯ. ಅವರ ಮೈಯ ಮೂಳೆಯಂತೂ ಎದ್ದು ಕಾಣುತ್ತಿರುವುದು. ಕೈಕಾಲಿನ ಮಾಂಸ ಜೋಲಾಡುತ್ತಿತ್ತು. ಅವರನ್ನು ನೋಡಿದರೆ ಮೊದಲು ನಮ್ಮ ದೃಷ್ಟಿಗೆ ಬೀಳುತ್ತಿದ್ದುದು ಅವರ ಹೊಟ್ಟೆ. ಅಸ್ವಾಭಾವಿಕ ರೀತಿಯಲ್ಲಿ ಉಬ್ಬಿ ಹೊಳೆಯುತ್ತಿತ್ತು. ನಾನು ಡಾಕ್ಟರಲ್ಲದಿದ್ದರೂ ಅವರ ಹೊಟ್ಟೆಯಲ್ಲಿನ ಯಕೃತ್ ಮತ್ತು ಪ್ಲೀಹಗಳು ಒಂದಕ್ಕೊಂದು ಪೈಪೋಟಿಯಿಂದ ಬೆಳೆಯುತ್ತಿವೆಯೆಂದು ನಿಶ್ಚಯಿಸಿದೆ. ಅವರು ಜಾತಿಯಲ್ಲಿ ಅಸ್ಪೃಶ್ಯರು, ಆದರೂ ಹಿಂದುಗಳು. ಶರೀರದಲ್ಲಿ ದುರ್ಬಲರು – ಆದರೂ ವೀರರು. ಬೇಟೆಯಾಡುವುದು ಇವರ ಜಾತಿಯ ಕಸಬು. ಮಳೆಗಾಲದಲ್ಲಿ ಹಂದಿಯ ಬೇಟೆಯಾಡುವರು. ಅರಣ್ಯದಲ್ಲಿ ನುಗ್ಗಿ ಹುಲಿಯನ್ನು ಹೊರಗೆ ಓಡಿಸುವರು. ಇವೆಲ್ಲ ಕೇವಲ ಹೊಟ್ಟೆಗಾಗಿ. ಇವರೊಡನೆ ಹೋಲಿಸಿ ನೋಡಿದರೆ ತಲೆಯಲ್ಲಿ ಕೆಂಪು ರುಮಾಲು ಸುತ್ತಿಕೊಂಡು ನಮ್ಮ ಮನೆಯಬಾಗಿಲು ಕಾಯುವ ಭೋಜಪುರೀ ದರ್‌ವಾನ ರಾಜಪುತ್ರನಂತೆ ಕಾಣಿಸುತ್ತಿದ್ದ.

ಈ ಕೃಷ್ಣಕಾಯರ ಹೆಗಲೇರಿ ಇಪ್ಪತ್ತು ಮೈಲಿ ಪ್ರಯಾಣ ಮಾಡುವುದು ನನಗೆ ಒಪ್ಪಲಿಲ್ಲ. ಈ ಜೀರ್ಣ ಶೀರ್ಣ ನಿರ್ಭಾಗ್ಯರ ಹೆಗಲ ಮೇಲೆ ನನ್ನ ಮೈಯ ಭಾರವನ್ನು ಹೊರಿಸುವುದು ಪೂರ್ಣ ಅನ್ಯಾಯವೆನಿಸಿತು. ನಾನು ಪಲ್ಲಕ್ಕಿಯಲ್ಲಿ ಕೂರಲು ಹಿಂದೂ ಮುಂದೂ ಯೋಚಿಸುತ್ತಿದ್ದುದನ್ನು ಕಂಡು ಪಲ್ಲಕ್ಕಿಯ ಸಂಗಡ ಮನೆಯಿಂದ ಬಂದಿದ್ದ ಮುಸಲ್ಮಾನ್ ಸರ್ದಾರ "ಹುಜೂರ್ – ಪಲ್ಲಕ್ಕಿ ಹತ್ತಿರಿ. ಮನೆ ತಲುಪಲು ಸಂಜೆ ನಾಲ್ಕು ಘಂಟೆಯಾಗುತ್ತದೆ. ಮುಂದೆ ಸಾಧ್ಯವಿಲ್ಲ" ಎಂದು ಹೇಳಿದ.

ಇಪ್ಪತ್ತು ಮೈಲಿ ಹೋಗಲು ಹತ್ತು ಘಂಟೆಗಳ ಕಾಲವಾಗುವುದೆಂಬ ಸುದ್ದಿ ಕೇಳಿ ಪಲ್ಲಕ್ಕಿ ಹತ್ತಲು ನನಗಿದ್ದ ಅಲ್ಪಸ್ವಲ್ಪ ಉತ್ಸಾಹವೂ ತಣ್ಣಗಾಯಿತು. ಆದರೇನು ಮಾಡಲಿ, ವಿಧಿಯಿಲ್ಲ. ಕೊನೆಗೆ ದುರ್ಗಿಯ ಸ್ಮರಣೆಮಾಡಿ ಆ ಪ್ಯಾಕಿಂಗ್ ಕೇಸಿನಲ್ಲಿ ನನ್ನ ಮೈಯನ್ನು ನುಗ್ಗಿಸಿದೆ. ಇಷ್ಟರೊಳಗೆ ಮನುಷ್ಯರ ಹೆಗಲೇರುವುದು ಪಾಪಕರ್ಮವಲ್ಲವೆಂದು ನನ್ನ ಮನಸ್ಸಿಗೆ ಸಮಾಧಾನ ಹೇಳಿದ್ದೆನೆಂಬುದು ಇಲ್ಲಿ ಹೇಳಬೇಕಾಗಿಲ್ಲ.

ಪಲ್ಲಕ್ಕಿ ಮುಂದೆ ಸಾಗಿತು. ಹುಜೂರರಿಗೆ ಯಾವ ತೊಂದರೆಯೂ ಆಗದೆಂದು ಸರ್ದಾರ ಆಶೆ ತೋರಿಸಿದ್ದ. ಆದರೆ ಆ ಆಶೆ ನಿರಾಶೆಯೆಂದು ತಿಳಿಯಲು ನನಗೆ ಹೆಚ್ಚುಕಾಲ ಬೇಕಾಗಲಿಲ್ಲ. ಪಾಲ್ಕಿಯ ಆಯಕಟ್ಟಿನಲ್ಲಿ ನನ್ನ ಶರೀರದ ಆಯಕಟ್ಟನ್ನು ಅಡಗಿಸಿಡುವ ಪ್ರಯತ್ನದಲ್ಲಿ ನನ್ನ ಮೈ ಯಾವ ರೂಪ ಧರಿಸಿತೆಂದರೆ ಅದು ಮಲಗಿದ ಹಾಗೂ ಇಲ್ಲ, ಕುಳಿತಂತೆಯೂ ಅಲ್ಲ. ಸಾಲಿಗ್ರಾಮ ಮಲಗಿದ್ದರೂ ಒಂದೇ ಕುಳಿತಿದ್ದರೂ ಒಂದೇ. ಆದರೆ ಮನುಷ್ಯನ ಸ್ಥಿತಿ ಹಾಗಲ್ಲ. ಆದ್ದರಿಂದಲೇ ನಾನು ಒಂದು ರೀತಿಯ ಯೋಗಾಸನವನ್ನು ಧಾರಣೆ ಮಾಡಬೇಕಾಗಿತ್ತು. ವೀರಾಸನವನ್ನು ತ್ಯಜಿಸಿ ಪದ್ಮಾಸನವನ್ನು ಹಾಕಿ ಕೂರಲು ಸ್ಥಳವಿಲ್ಲ. ಆದ್ದರಿಂದ ನಾನು ನಿಮಿಷ ನಿಮಿಷಕ್ಕೂ ಆಸನವನ್ನು ಬದಲಾಯಿಸ ಬೇಕಾಗಿತ್ತು.

ದೇಹದ ಈ ಅವ್ಯವಸ್ಥೆಯಿಂದ ನಾನೇನೂ ಹೆದರಲಿಲ್ಲ. ಆಗ ನನಗೆ ನವಯೌವನ. ನಿಜ ಹೇಳುವುದಾದರೆ ದೇಹದ ಈ ವಿವಿಧ ಅಂಗಭಂಗಿ ಯನ್ನು ನೋಡಿ ನನಗೆ ನಗು ಬರುತ್ತಿತ್ತು. ಈ ಪ್ರಯಾಣದಲ್ಲಿ ಪೂರ್ವ ದಿಕ್ಕಿನಿಂದ ಮಂದಮಂದವಾಗಿ ನನ್ನ ಮೇಲೆ ಬೀಳುತ್ತಿದ್ದ ಹೊಂಬಿಸಿಲು ಮತ್ತು ತಂಗಾಳಿ ನನ್ನ ಮನಸ್ಸನ್ನು ಉಲ್ಲಾಸದಿಂದ ತುಂಬಿತು. ಆ ವಾಯುವಿನ ಸ್ಪರ್ಶ ಎಷ್ಟು ಆನಂದವಾಗಿತ್ತೋ, ಬಿಸಿಲಿನ ದರ್ಶನವೂ ಅಷ್ಟೇ ಪ್ರಿಯವಾಗಿತ್ತು. ದಿನದ ಈ ನವೋದಯದ ಸಂಗಡ ನನ್ನ ಮನಸ್ಸು, ದೃಷ್ಟಿ ಎಲ್ಲವೂ ಜಾಗೃತವಾದುವು. ನಾನು ಒಂದೇ ದೃಷ್ಟಿ ಯಿಂದ ಹೊರಗಿನ ದೃಶ್ಯವನ್ನು ನೋಡಲಾರಂಭಿಸಿದೆ. ನಾಲ್ಕು ಕಡೆ ಯಲ್ಲಿಯೂ ಮೈದಾನ. ಮನೆಯಿಲ್ಲ, ಗಿಡವಿಲ್ಲ, ಬಳ್ಳಿಯಿಲ್ಲ. ಬರಿಯ ಮಣ್ಣು. ಎಲ್ಲಿ ನೋಡಿದರೂ ಸಮಪ್ರದೇಶ ಆಕಾಶದಂತೆ ತಡೆಯಿಲ್ಲ ದದು. ಕಲ್ಕತ್ತೆಯ ಇಟ್ಟಿಗೆಮನೆಗಳ ಬಂಧನದಿಂದ ಹೊರಬಿದ್ದ ನನಗೆ ಪ್ರಕೃತಿಯ ಈ ಔದಾರ್ಯದ ಮಧ್ಯೆ ನನ್ನ ಅಂತರಾತ್ಮ ಮುಕ್ತಿಯ ಆನಂದ ವನ್ನು ಅನುಭವಿಸಲು ಆರಂಭಿಸಿತು. ಆದರೆ ಈ ಆನಂದ ಶಾಶ್ವತವಾಗಿರ ಲಿಲ್ಲ. ಹಗಲು ಹೆಚ್ಚಿದಂತೆ ಬಿಸಿಲು ಪ್ರಕೃತಿಯ ಶರೀರದ ಜ್ವರದಂತೆ ಏರುತ್ತಿತ್ತು. ನೋಡುತ್ತಾ ನೋಡುತ್ತಾ ಬಿಸಿಲಿನ ತಾಪ ೧೦೫ ಡಿಗ್ರಿಗೆ

ಏರಿತು. ಸುಮಾರು ೯ ಘಂಟೆ ಹೊತ್ತಿಗೆ ಹೊರಗೆ ದೃಷ್ಟಿಹಾಕಲು ಮನಸ್ಸಾ ಗುತ್ತಿರಲಿಲ್ಲ. ಕಣ್ಣು ಉರಿಯುವಂತೆ ಬಿಸಿಲು ಬಲವಾಗಿತ್ತು. ನನ್ನ ಕಣ್ಣು ಯಾವುದಾದರೂ ಹಸುರು ಪದಾರ್ಥವನ್ನು ಕಾಣಲು ಆಶಿಸುತ್ತಿತ್ತು, ಆದರೆ ನನ್ನ ಕಣ್ಣಿನ ಆಶೆ ತೃಪ್ತಿಯಾಗಲು ಅವಕಾಶವೇ ಇಲ್ಲವಾಯಿತು. ಅಲ್ಲಲ್ಲಿ ಒಂದೆರಡು ಗೊಬ್ಬಳಿಯ ಗಿಡಗಳು ಕಾಣಬಂದವು. ಈ ಗಿಡಗಲ್ಲಿ ಮತ್ತೆ ಯಾವ ಗುಣವಿದ್ದರೂ ಇರಲಿ, ಇದರ ತಲೆಯಲ್ಲಿ ಶ್ಯಾಮಲಶ್ರೀಯಿಲ್ಲ. ಬುಡದಲ್ಲಿ ಶೀತಲಛಾಯೆಯೂ ಇಲ್ಲ. ಈ ತರುಹೀನ, ಪತ್ರಹೀನಪೃಥ್ವೀ ಮತ್ತು ಮೇಘವಿಲ್ಲದ ಬಿಸಿಲಿಂದ ಕಾಯ್ದ ಆಕಾರ - ಇವೆರಡರ ನಡುವೆ ಒಂದು ಮಹಾಮೂರ್ತಿ ಪ್ರತ್ಯಕ್ಷವಾದಂತಾಯಿತು. ಪ್ರಕೃತಿಯ ಈ ರುದ್ರಮುಖ ನನ್ನ ದೃಷ್ಟಿಗೆ ಸಹಿಸಲಸಾಧ್ಯವಾಯಿತು. ನಾನೊಂದು ಪುಸ್ತಕವನ್ನು ಬಿಚ್ಚಿ ಓದಲು ಯತ್ನಿಸಿದೆ. ಮೆರಿಡಿತ್ತನ 'ಈಗೊಯಿಸ್ಟ್' ಪುಸ್ತಕವನ್ನು ಸಂಗಡ ತಂದಿದ್ದೆ. ಅದರ ಕೊನೆಯ ಅಧ್ಯಾಯವನ್ನು ಓದುವುದು ಉಳಿದಿತ್ತು. ನಾಲ್ಕಾರು ಹಾಳೆಗಳನ್ನು ತಿರಿವಿ ಹಾಕಿದೆ. ಅಂತಿಮ ಅಧ್ಯಾಯ ಪ್ರಥಮಾಧ್ಯಾಯವಾಯಿತು. ಅಂದರೆ ಅದರೊಳಗಿನ ಒಂದಕ್ಷರವೂ ನನ್ನ ತಲೆಗೆ ಹತ್ತಲಿಲ್ಲ. ಪಲ್ಲಕ್ಕಿಯ ಅವಿಶ್ರಾಂತ ಕುಲುಕಾಟ ದಿಂದ ನನ್ನ ಮೆದುಳು ಕದಡಿಹೋಗಿದೆಯೆಂದು ನಿರ್ಣಯಿಸಿದೆ. ಪುಸ್ತಕ ವನ್ನು ಮುಚ್ಚಿ ಪಾಲ್ಕಿಯ ಬೇಹಾರಿಗಳಿಗೆ ಬೇಗ ನಡೆಯಿರೆಂದು ಹೇಳಿದೆ. ಇನಾಮು ಕೊಡುವುದಾಗಿ ಆಶೆ ತೋರಿಸಿದೆ. ಅದರಿಂದ ಪ್ರಯೋಜನ ವಾಯಿತು. ಅರ್ಧದಾರಿಯಲ್ಲಿ ಯಾವ ಊರಿನಲ್ಲಿ ವಿಶ್ರಮಿಸಿಕೊಳ್ಳ ಬೇಕೆಂದು ನಿಶ್ಚಿತವಾಗಿತ್ತೋ ಅಲ್ಲಿಗೆ ಹತ್ತೂವರೆ ಘಂಟೆ ಸಮಯಕ್ಕೆ, ಗೊತ್ತಾಗಿದ್ದ ಹೊತ್ತಿಗೆ ಅರ್ಧ ಘಂಟೆ ಕಾಲ ಮುಂಚೆಯೇ ತಲಪಿದೆವು.

ಈ ಮರುಭೂಮಿಯಲ್ಲಿ ಈ ಗ್ರಾಮವು ಓಯೆಸಿಸ್ಸಿನಂತಿತ್ತು. ಅದರ ಸೌಂದರ್ಯ ಕಣ್ಣಿಗೆ ಆನಂದವನ್ನುಂಟುಮಾಡುತ್ತಿತ್ತು. ಮಧ್ಯದಲ್ಲಿ ಒಂದು ಪುಷ್ಕರಿಣಿ. ಅದರ ಮೂರು ಕಡೆಯಲ್ಲಿ ಒಂದಸ್ತಿನಷ್ಟು ಎತ್ತರ ದಿಣ್ಣೆಯ ಮೇಲೆ ಹತ್ತುಹನ್ನೆರಡು ಮನೆಗಳು. ಇನ್ನೊಂದು ಕಡೆ ಒಂದು ಅರಳೀಕಟ್ಟೆ. ಅರಳೀಮರದ ಕೆಳಗೆ ಪಲ್ಲಕ್ಕಿಯನ್ನು ಇಳಿಸಿದರು. ಪುಷ್ಕರಿಣಿಯಲ್ಲಿ ಒಂದೊಂದು ಮುಳುಗುಹಾಕಿ, ಒದ್ದೆಬಟ್ಟೆಯಲ್ಲೇ

ಮೊಸರು ಅವಲಕ್ಕಿಯ ಫಲಾಹಾರವನ್ನು ಆರಂಭಿಸಿದೆ. ಪಲ್ಲಕ್ಕಿಯನ್ನು ಕಂಡು ಗ್ರಾಮವಧುಗಳು ದಿಣ್ಣೆಯಮೇಲೆ ಸಾಲುಗಟ್ಟಿ ನಿಂತರು. ಈ ಗ್ರಾಮವಧುಗಳ ವಿಷಯವಾಗಿ ಕವನಮಾಡುವುದು ಅತಿಕಠಿನ. ಏಕೆಂದರೆ ಇವರಲ್ಲಿ ಮತ್ತೇನೆ ಇರಲಿ ರೂಪ ಯೌವನ ಎರಡೂ ಸೊನ್ನೆ. ಯಾರಿಗಾದರೂ ಸ್ವಲ್ಪ ರೂಪವಿದ್ದರೆ ಅದು ಕೃಷ್ಣವರ್ಣದಲ್ಲಿ ಅಡಗಿಹೋಗಿರುತ್ತಿತ್ತು. ಅಥವ ಯಾರಿಗಾದರೂ ಯೌವನವಿದ್ದರೆ ಅದು ಮಲಿನ ವಸ್ತ್ರದಿಂದ ಮುಚ್ಚಿಹೋಗಿರುತ್ತಿತ್ತು. ನನ್ನ ದೃಷ್ಟಿಯನ್ನು ಆಕರ್ಷಿಸಿದ ವಸ್ತುವೆಂದರೆ ಇವರ ಕೈಕಾಲಿನಲ್ಲಿದ್ದ ಬೆಳ್ಳಿಯ ಆಭರಣಗಳು.

ಸುಮಾರು ಅರ್ಧ ಗಂಟೆಯನಂತರ ನಮ್ಮ ಯಾತ್ರೆ ಮುಂದುವರಿಯಿತು. ಪಲ್ಲಕ್ಕಿ ಬಹಳ ಮೆಲ್ಲಗೆ ನಡೆಯಲು ಆರಂಭವಾಯಿತು. ಭೂರಿಭೋಜನದ ಅನಂತರ ವಾಹಕರ ನಡೆ ಆಪತ್ತಿಗೆ ಸಿಕ್ಕಿಬಿದ್ದ ಸ್ತ್ರೀಯರಂತೆ ಮೃದುಗತಿಯನ್ನವಲಂಬಿಸಿತು. ಈ ಮಧ್ಯೆ ನನ್ನ ಶರೀರ, ಮನಸ್ಸು, ಇಂದ್ರಿಯ ಮೊದಲಾಗಿ ಎಲ್ಲವೂ ಒಂದು ಜಡತೆಯಿಂದ ಆವೃತವಾಗಿತ್ತು. ನಿದ್ರೆಯಲ್ಲಿ ಮಗ್ನನಾಗಲು ಯತ್ನಿಸಿದೆ. ಕ್ರಮಕ್ರಮವಾಗಿ ಜ್ಯೇಷ್ಠಮಾಸದ ಬಿಸಿಲಿನ ಪ್ರಭಾವ ಮತ್ತು ಪಲ್ಲಕ್ಕಿಯ ತೂಗಾಟ ಇವುಗಳಿಂದ ನನಗೆ ನಿದ್ರೆಯ ಜಂಪು ಹತ್ತಿತು. ನನ್ನ ದೇಹ ಮಲಗದ, ಕೂರದ ಸ್ಥಿತಿಯಲ್ಲಿ ಹೇಗಿತ್ತೋ ಹಾಗೆಯೇ ನನ್ನ ಮನಸ್ಸೂ ನಿದ್ರೆ ಮತ್ತು ಎಚ್ಚರದ ಮಧ್ಯ ಅವಸ್ಥೆಯಲ್ಲಿತ್ತು ಹೀಗೆ ಒಂದೆರಡು ಗಂಟೆಗಳ ಕಾಲ ಕಳೆಯಿತು. ಪಲ್ಲಕ್ಕಿ ಧಟ್ಟನೆ ಎತ್ತಿಹಾಕಿದಂತಾಯಿತು. ಎದ್ದು ಕುಳಿತೆ. ನೋಡಿದರೆ ಹೆಚ್ಚು ಸಂಗತಿಯೇನೂ ಇಲ್ಲ. ಬೇಹಾರಿಗಳು ಒಂದು ದೊಡ್ಡ ಆಲದಮರದ ನೆರಳಿನಲ್ಲಿ ಪಲ್ಲಕ್ಕಿಯನ್ನು ಇಳಿಸಿ ಒಮ್ಮೆಗೇ ಅದೃಶ್ಯರಾಗಿದ್ದರು. ಸಂಗತಿಯೇನೆಂದು ಸರ್ದಾರನನ್ನು ಕೇಳಲು ಅವರುಗಳು ಹೊಗೇಸೊಪ್ಪು ಸೇದಲು ಹೋಗಿರುವುದಾಗಿ ತಿಳಿಸಿದ. ಈ ಪ್ರಯಾಣದಲ್ಲಿ ಇದೊಂದು ಜಾಗವೇ ನನ್ನ ಮನಸ್ಸಿಗೆ ತೃಪ್ತಿಯನ್ನುಂಟುಮಾಡಿದುದು. ಆಲದಮರ ನೂರು ಕಂಬಗಳ ಕಟ್ಟಡದಂತಿತ್ತು. ಮೇಲಿನ ಹಸುರೆಲೆಗಳು ಸೂರ್ಯರಶ್ಮಿಯನ್ನು ಒಳಗೆ ಬಿಡದಷ್ಟು ದಟ್ಟವಾಗಿದ್ದವು. ಬಿಸಿಲಿನ ಝಳದಿಂದ ಬೆಂದ ದಾರಿಗರಿಗೆ

ವಿಶ್ರಾಂತಿಯನ್ನು ಕೊಡಲು ಪ್ರಕೃತಿದೇವಿ ಸಾವಿರ ಕಂಬಗಳ ಒಂದು ಅತಿಥಿಶಾಲೆಯನ್ನು ಸೃಷ್ಟಿಸಿರುವಳೋ ಎನ್ನುವಂತಿತ್ತು. ಅಲ್ಲಿನ ನೆರಳು ನನ್ನ ಮನಸ್ಸಿನಲ್ಲಿ ಸಂಧ್ಯಾಕಾಲವಾಯಿತೆಂಬ ಭಾವನೆಯನ್ನು ಹುಟ್ಟಿಸುತ್ತಿತ್ತು.

ಈ ಸಂದರ್ಭದಲ್ಲಿ ಬಹು ಕಷ್ಟಪಟ್ಟು ಪಲ್ಲಕ್ಕಿಯಿಂದ ಹೊರಬಿದ್ದು ಕೈಕಾಲುಗಳನ್ನು ನೀಡಲು ಯತ್ನಿಸಿದೆ. ನನ್ನ ಅಂಗಾಂಗಗಳಿಗೆಲ್ಲಾ ಜೋಮು ಹಿಡಿದಿತ್ತು. ಮೈ ಸರಿಯಾದ ಸ್ಥಿತಿಗೆ ಬರಲು ಸುಮಾರು ಹತ್ತು ನಿಮಿಷ ಹಿಡಿಯಿತು ಸರಿಯಾದ ಸ್ಥಿತಿಗೆ ಬಂದನಂತರ ಆಲದ ಮರವನ್ನು ಒಂದು ಸುತ್ತುಹಾಕಿ ಬರೋಣವೆನಿಸಿತು. ಸ್ವಲ್ಪದೂರ ಹೋಗಿ ನೋಡಿದೆ. ಬೇಹಾರಿಗಳೆಲ್ಲಾ ದುಂಡನೆ ಸುತ್ತುಗಟ್ಟಿ ಕುಳಿತು ಏನೋ ಗುಸುಗುಟ್ಟುತ್ತಿದ್ದರು. ನನ್ನ ವಿರುದ್ಧವಾಗಿ ಮುಷ್ಕರ ಹಿಡಿಯುವುದಕ್ಕೇನೊ ಎಂದೆನಿಸಿತು. ಯಾಕೆಂದರೆ ಎಲ್ಲರೂ ಒಂದೇ ಸಮನಾಗಿ ವಿಶೇಷ ಉತ್ಸಾಹದಿಂದ ಮಾತನಾಡುತ್ತಿದ್ದರು. ಸ್ವಲ್ಪ ಹೊತ್ತಾದ ಮೇಲೆ ಈ ಕೂಗಾಟಕ್ಕೆ ಕಾರಣ ಬೇರೆ ಇದೆಯೆಂಬುದು ತಿಳಿಯಿತು. ಇವರು ಸೇದುತ್ತಿದ್ದುದು ಬರೀ ತಂಬಾಕಲ್ಲ. ಹಿರಿಯ ತಂಬಾಕು. ವಾಸನೆಯಿಂದಲೇ ಅದರ ಪರಿಚಯವಾಯಿತು ಇವರ ಸ್ಫೂರ್ತಿ, ಆನಂದ ಇವುಗಳನ್ನು ಕಂಡು ಗಂಜಿಕಾದೇವಿ ಎಷ್ಟು ಬೇಗ ಪ್ರಸನ್ನಳೆಂಬ ಅಂಶ ನನ್ನ ಮನಸ್ಸಿಗೆ ಹೊಳೆಯಿತು. ಚಿಲುಮೆಯನ್ನು ಕೈಯ್ಯಲ್ಲೆತ್ತಿ ಒಬ್ಬೊಬ್ಬನೂ ಒಂದೊಂದು ದಮ್ ಎಳೆದು 'ಬೊಮ್-ಕಾಲೀ-ಕಲಕತ್ತಾವಾಲೀ' ಎಂದು ರಾಗ ಎಳೆಯುತ್ತಿದ್ದ.

ಇವರ ಧೂಮಪಾನವನ್ನು ಕಂಡು ಮೊದಲು ನನಗೆ ಸಂತೋಷ ಉಂಟಾಯಿತು. ಆದರೆ ಸ್ವಲ್ಪ ಕಾಲನಂತರ ಬೇಸರಿಕೆಯೂ ಆಯಿತು. ಚಿಲುಮೆಯಮೇಲೆ ಚಿಲುಮೆಯನ್ನು ಸೇದಲಾರಂಭಿಸಿದರು. ಯಾರೂ ಏಳುವ ಸಂಭವವೇ ಕಾಣಿಸಲಿಲ್ಲ. ಸರ್ದಾರನನ್ನು ಕರೆದು ಇವರ ಗಾಂಜಾಸೇವನೆ ಮುಗಿಯಲು ಇನ್ನೂ ಎಷ್ಟು ಹೊತ್ತಾಗುವುದು ಎಂದೆ. "ಹುಜೂರ್, ಇವರುಗಳನ್ನು ಹಿಡಿದು ಎಳೆದಲ್ಲದೆ ಮುಂದೆ ಕದಲರು, ಮುಂದೆ ಭಯವಿದೆ ಅದನ್ನು ಎದುರಿಸುವುದಕ್ಕಾಗಿಯೇ ಇವರುಗಳು

ಗಾಂಜಾದ ಹೊಗೆಯ ಮೂಲಕ ಸಾಹಸವನ್ನು ತುಂಬಿಕೊಳ್ಳುತ್ತಿರುವರು" ಎಂದ. 'ಭಯ' ಏನು ಎಂದೆ. "ಹುಜೂರ್, ಅದರ ಹೆಸರನ್ನು ಹೇಳ ಕೂಡದು. ಸ್ವಲ್ಪ ತಡೆದರೆ ಎಲ್ಲ ನಿಮ್ಮ ಕಣ್ಣಿಗೇ ಕಾಣುವುದು". ಈ ಮಾತನ್ನು ಕೇಳಿ ಸಂದರ್ಭವೇನು ತಿಳಿಯಬೇಕೆಂಬ ಕುತೂಹಲ ನನ್ನ ಮನಸ್ಸಿನ ಮೇಲೆ ಸಂಪೂರ್ಣವಾಗಿ ಮೂಡಿತು. ಬೇಹಾರಿಗಳನ್ನು ಪ್ರಯಾಣಕ್ಕೆ ಸಿದ್ಧಮಾಡುವುದಕ್ಕಾಗಿ ಅವರ ಪಕ್ಕದಲ್ಲಿ ಹೋಗಿ ನಿಂತೆ; ನೋಡಿದೆ. ಮೊದಲೇ 'ಯಕೃತ್‌ನ' ಪ್ರಭಾವದಿಂದ ಹಳದಿಯಾಗಿದ್ದ ಅವರ ಕಣ್ಣುಗಳು ಸುಣ್ಣಮಿಶ್ರವಾದ ಅರಸಿನದಂತೆ ಕೆಂಪಗಿದ್ದುವು. ಒಬ್ಬೊಬ್ಬನನ್ನು ಕೈಯಿಂದ ಹಿಡಿದು ಎತ್ತಿ ನಿಲ್ಲಿಸಿದೆ. ಅದರಿಂದ ಅವರು ಕುಡಿದಿದ್ದ ಗಾಂಜಾದ ಹೊಗೆಯ ಕೆಲವಂಶ ನನ್ನ ಮೂಗು ಬಾಯಿಗಳ ಮೂಲಕ ಹೊಟ್ಟೆ ಸೇರಿತು. ನನ್ನ ಶರೀರದಲ್ಲಿ ನಡುಕವುಂಟಾಯಿತು. ಕೈಕಾಲುಗಳು ಜುಮ್ಮೆಂದಿತು. ಕಣ್ಣು ಮುಚ್ಚಿಕೊಂಡು ಹೋಗುತ್ತಿತ್ತು. ಹೇಗೋ ಅವಸರ ಅವಸರವಾಗಿ ಪಲ್ಲಕ್ಕಿಯನ್ನು ನೇರಿದೆ. ಪಲ್ಲಕ್ಕಿ ಮುಂದೆ ನಡೆಯಿತು ಈ ನನ್ನ ಮೈ ನನ್ನದಲ್ಲ; ಇತರರು ಯಾರದೋ ಎನ್ನುವ ಭಾವನೆ ತುಂಬಿದ್ದುದರಿಂದ ಈ ಸಲ ಪಲ್ಲಕ್ಕಿಯೇರಲು ಸ್ವಲ್ಪವೂ ಕಷ್ಟವಾಗಲಿಲ್ಲ.

ಸ್ವಲ್ಪ ಹೊತ್ತಿನಮೇಲೆ – ಎಷ್ಟು ಹೊತ್ತಿನಮೇಲೋ ಸರಿಯಾಗಿ ಹೇಳಲು ಸಾಧ್ಯವಿಲ್ಲ – ಬೇಹಾರಿಗಳು ಎಲ್ಲರೂ ಒಕ್ಕೊರಲಿನಿಂದ ತಾರ ಸ್ವರದಲ್ಲಿ ಚೀತ್ಕಾರಮಾಡಲಾರಂಭಿಸಿದರು. ಇವರ ಶಾರೀರಿಕ ಶಕ್ತಿ ಗಿಂತ ಕಂಠಶಕ್ತಿ ಹೆಚ್ಚೆಂಬುದು ನನಗೆ ಇದಕ್ಕೆ ಮುಂಚೆಯೇ ತಿಳಿ ದಿತ್ತು. ಆದರೆ ಆ ಶಕ್ತಿ ಇಷ್ಟು ಬಲವಾಗಿದೆಯೆಂಬುದು ಈಗತಾನೆ ತಿಳಿಯಿತು. ಇವರ ಕೋಲಾಹಲದ ಮಧ್ಯದಲ್ಲಿ 'ರಾಮು'ನಾಮುದ ಶಬ್ದ ವೊಂದು ಮಾತ್ರ ಸ್ಪಷ್ಟವಾಗಿ ಕೇಳುತ್ತಿತ್ತು. ಸ್ವಲ್ಪ ಹೊತ್ತಿಗೆ ನನ್ನೊಡನೆ ಬರುತ್ತಿದ್ದ ಪರಿಚಾರಕ ಬ್ರಾಹ್ಮಣನೂ ಅವರೊಡನೆ ದನಿಗೂಡಿಸಿದ. ಎಲ್ಲರೂ• ಏಕಕಂಠದಿಂದ "ರಾಮುನಾಮು ಸತ್ಯ ಹೈ, ರಾಮುನಾಮು ಸತ್ಯಹೈ" ಎಂದು ಹೇಳುತ್ತಿದ್ದರು. ಇದನ್ನು ಕೇಳುತ್ತ ಕೇಳುತ್ತ ನನ್ನ ಮನಸ್ಸಿನಲ್ಲಿ 'ನಾನು ಸತ್ತೇ ಇರುವೆನು. ನನ್ನ ಹೆಣವನ್ನು ಇವರು

ಪಲ್ಲಕ್ಕಿಯಲ್ಲಿ ಸಾಗಿಸುತ್ತಿರುವರು' ಎಂದೆನಿಸಿತು. ನನ್ನ ಮನಸ್ಸಿನಲ್ಲಿ ಈ ಭಾವನೆ ಉತ್ಪನ್ನವಾಗಲು ನನ್ನ ದೇಹವನ್ನು ಪ್ರವೇಶಿಸಿದ್ದ ಗಂಜಿಕಾ ದೇವಿಯ ಪ್ರಭಾವವೇ ಕಾರಣವೋ ಏನೋ ನಾನು ಹೇಳಲಾರೆ. ಇವರುಗಳು ನನ್ನನ್ನು ಯಾವ ಕಡೆ ಎತ್ತಿಕೊಂಡು ಹೋಗುತ್ತಿರುವ ರೆಂಬುದನ್ನು ನೋಡುವ ಚಪಲವಾಯಿತು. ಹೊರಗೆ ತಲೆಯಿಕ್ಕಿ ನೋಡಿದೆ. ಒಂದು ಊರು ಕಾಣಿಸಿತು. ಎಲ್ಲೆಲ್ಲೂ ನಿಶ್ಶಬ್ದ. ಕೇವಲ ಬೇಹಾರಿಗಳ 'ಏಏಏಏ-ಓಓಓ' ಎಂಬ ಶಬ್ದಮಾತ್ರ ಆಕಾಶದಿಂದ ಪ್ರತಿಧ್ವನಿತವಾಗುತ್ತಿದ್ದು, ಗ್ರಾಮ ಬೆಂಕಿಬಿದ್ದು ಸುಟ್ಟುಹೋದನಂತರ ಹೇಗಿರುವುದೋ ಹಾಗೆ ಕಾಣಿಸುತ್ತಿತ್ತು ನಾಲ್ಕು ಕಡೆಯೂ ನೀರವ; ನಿರ್ಜನ. ಯೋಚಿಸಿದರೆ ಮೃತ್ಯುವಿನ ಅತುಲಶಾಂತಿ ವಿಶ್ವಚರಾಚರ ವನ್ನು ಆಚ್ಛಾದಿಸಿದ್ದಂತೆ ತೋರುತ್ತಿತ್ತು. ಪಲ್ಲಕ್ಕಿ ಇನ್ನು ಸ್ವಲ್ಪ ಮುಂದೆ ಹೋದನಂತರ ಹೊರಗೆ ನೋಡಿದೆ ಸುತ್ತಲೂ ಮರುಭೂಮಿ ಕಾಣಿ ಸಿತು. ಅಂದರೆ ಮರಳು ಕಾಡಲ್ಲ ಸುಟ್ಟುಹೋದ ಮಣ್ಣಿನ ಭೂಮಿ. ಅದರಲ್ಲಿ ಎಲ್ಲೂ ಒಂದು ಹಸುರು ಹುಲ್ಲಿನ ಚಿಹ್ನವೂ ಇಲ್ಲ ಈ ಮರುಭೂಮಿಯಲ್ಲಿ ಈಗ ಮನುಷ್ಯನ ಸುಳಿವೇ ಇಲ್ಲ ಆದರೆ ಹಿಂದೆ ಇದು ಪೂರ್ಣಜನಭರಿತವಾಗಿತ್ತೆಂಬುದಕ್ಕೆ ಬೇಕಾದಷ್ಟು ಗುರುತುಗಳು ಕಾಣುತ್ತಿದ್ದುವು. ಇದೊಂದು ಇಟ್ಟಿಗೆಗಳ ರಾಜ್ಯದಂತೆ ಕಾಣಿಸುತ್ತಿತ್ತು. ದೃಷ್ಟಿಗೆ ಬೀಳುವವರೆಗೂ ಎಲ್ಲಿ ನೋಡಿದರೂ ಬರಿ ಇಟ್ಟಿಗೆಯೇ ಕಾಣಿ ಸುತ್ತಿತ್ತು. ಕೆಲವು ಕಡೆಗಳಲ್ಲಿ ಇಟ್ಟಿಗೆ ಕರಗಿ ಮಣ್ಣಿನೊಡನೆ ಕಲೆಯು ತ್ತಿದೆ. ಇನ್ನು ಕೆಲವು ಕಡೆಗಳಲ್ಲಿ ಸಾವಿರ ಸಾವಿರದಂತೆ ಜೋಡಿಸಿಟ್ಟ ಹಾಗೆ ಕಾಣಿಸುತ್ತಿದೆ. ಅದರ ಬಣ್ಣವೂ ಅಚ್ಚ ಕೆಂಪು ಅಂದರೆ ರಕ್ತವನ್ನು ಸುರಿದು ಕಲಸಿದಂತಿತ್ತು. ಈ ನಿರ್ಜನಪ್ರದೇಶದಲ್ಲಿ ಅಲ್ಲಲ್ಲಿ ನಿಂತಿದ್ದುದು ಕೆಲವು ಸುಟ್ಟುಹೋದ ಮರಮೋಟುಗಳು. ಅವುಗಳ ಮೇಲೂ ಒಂದು ಹಸುರಿನ ಹೆಸರೇ ಇಲ್ಲ. ಎಲ್ಲಿ ನೋಡಿದರೂ ಈ ರಕ್ತವರ್ಣದ ಇಟ್ಟಿಗೆ, ಮಣ್ಣು, ಮತ್ತು ಮೋಟು ಮರಗಳೇ. ಈ ದೃಶ್ಯವನ್ನು ನೋಡಿ ಬೇಹಾರಿಗಳಿಗೆ ಹೆದರಿಕೆಯಾಗುತ್ತಿದ್ದುದು ಆಶ್ಚರ್ಯವಲ್ಲ. ನನಗೆ ಹೆದರಿಕೆಯಾಗುತ್ತಿತ್ತು. ಸ್ವಲ್ಪ ಹೊತ್ತಿನನಂತರ ಈ ನೀರವ

ಪ್ರದೇಶದ ಹೃದಯದಿಂದ ಒಂದು ಅತಿ ಕ್ಷೀಣ ಕ್ರಂದನ ಧ್ವನಿ ನನ್ನ ಕಿವಿಗೆ ಬಿತ್ತು. ಆ ಧ್ವನಿ ಅತಿ ಮೃದು, ಅತಿ ಕರುಣಾಜನಕ ಮತ್ತು ಕಾತರಯುಕ್ತ ಆ ಧ್ವನಿಯೊಳಗೆ ಯುಗಯುಗಾಂತರದಿಂದ ಸಂಚಿತವಾಗಿದ್ದ ಮನುಷ್ಯನ ವೇದನೆ ಪ್ರತಿಧ್ವನಿತವಾಗುತ್ತಿರುವಂತೆ ತೋರುತ್ತಿತ್ತು. ಈ ರೋದನದ ಧ್ವನಿಯಿಂದ ನನ್ನ ಹೃದಯ ಕರುಣೆಯಿಂದ ತುಂಬಿತು. ಕ್ಷಣಕಾಲ ನಾನು ವಿಶ್ವಮಾನವತೆಯ ದುಃಖದಲ್ಲಿ ಭಾಗಿಯಾದಂತೆ ತೋರಿತು. ಇಂತಹ ಸಮಯದಲ್ಲಿ ಹಠಾತ್ತಾಗಿ ಗಾಳಿ ಬೀಸಲಾರಂಭಿಸಿತು ನಾಲ್ಕು ಕಡೆಯಿಂದಲೂ ಬಲವಾಗಿ ಗಾಳಿ ಬೀಸುತ್ತಿತ್ತು. ಈ ಗಾಳಿಯ ಮಧ್ಯದಲ್ಲಿ ಆಕಾಶದ ಅಗ್ನಿ ಜ್ವಲಿಸುತ್ತ ಎದ್ದ ಹಾಗಾಯಿತು ಅಂದರೆ ಆಕಾಶದ ರಕ್ತವರ್ಣದ ಜ್ವಾಲೆ ಎಲ್ಲೆಲ್ಲೂ ಹರಡಿದ ಹಾಗೆ ಕಾಣಿಸಿತು. ಆ ಅಗ್ನಿಪ್ರವಾಹದ ಮಧ್ಯದಿಂದ ಅಸಂಖ್ಯ ನರನಾರಿಗಳ ನೆರಳು ಅತ್ತ ಇತ್ತ ಸುಳಿಯುತ್ತ ಹಾರಾಡುತ್ತಿತ್ತು. ಎಲ್ಲಾ ಕಡೆಯಿಂದ ವಾಯುವಿನಲ್ಲಿ ಹಾ! ಹಾ! ಹೋ! ಎಂಬ ಚೀತ್ಕಾರವೇ ಕೇಳಿಸುತ್ತಿತ್ತು. ಕ್ರಮಕ್ರಮವಾಗಿ ಈ ಎಲ್ಲ ಚೀತ್ಕಾರ ವಿಕಟನಗುವಿನ ರೂಪ ತಾಳಿತು. ಆ ನಗುವಿನ ವಿಕಟಧ್ವನಿ ದಿಕ್ಕು ದಿಕ್ಕುಗಳಲ್ಲಿ ವಿಕಾರ ಶಬ್ದದಿಂದ ಹರಡಿ, ಕ್ರಮೇಣ ಕ್ಷೀಣವಾಗಿ ಅತಿ ಮೃದುವಾಯಿತು. ಕೊನೆಗೆ ಆ ಮೊದಲಿನ ಕ್ಷೀಣಕರುಣಾಜನಕ ರೋದನ ಇವೆರಡರ ಮಧ್ಯೆ ನನ್ನ ಮನಸ್ಸಿನಲ್ಲಿ ಈ ಹಾಳೂರಿನ ಪೂರ್ವಕಥೆ ನೆನಪಿಗೆ ಬಂದಿತು. ಆ ನೆನಪು ಈ ಜನ್ಮದ್ದೋ ಅಥವಾ ಜನ್ಮಾಂತರದ್ದೋ ನಾನು ಹೇಳಲಾರೆ.

೨

ಈ ಇಟ್ಟಿಗೆ ಮರಗಳ ಮರುಭೂಮಿ ರುದ್ರಪುರದ ಧ್ವಂಸಾವಶೇಷ. ರುದ್ರಪುರದ 'ರಾಯ್' ಬಾಬುಗಳು ಒಂದು ಕಾಲದಲ್ಲಿ ಈ ಎಲ್ಲೆಯ ಮುಖ್ಯ ಜಮೀನುದಾರರಾಗಿದ್ದರು. ಈ 'ರಾಯ್' ವಂಶದವರ ಮೂಲ ಪುರುಷನಾದ 'ರುದ್ರನಾರಾಯಣ' ನವಾಬರ ಸರ್ಕಾರದಲ್ಲಿ ಚಾಕರಿ ಮಾಡಿ 'ರಾಯ್ ರಾಯಿಯಾನ' ಪದವಿಯನ್ನೂ ಖಿಲ್ಲತ್ತನ್ನೂ ಸಂಪಾದಿಸಿದ್ದ. ಇವುಗಳೊಡನೆ ಮೂರು ಪರಗಣೆಗಳ 'ಮಾಲ್ಕೀ' ಹಕ್ಕೂ

ಶಕ್ಕಿತ್ತು. ಅವರ ಮನೆಯಲ್ಲಿ ದೆಹಲಿಯ ಬಾದಶಹರ ಸ್ವದಸ್ತೂರು 'ಸನದ್' ಇತ್ತೆಂದೂ ಅದರ ಬಲದಿಂದಲೇ ಅವರು ಆ ಪ್ರದೇಶದಲ್ಲಿ ಸರ್ವಾಧಿಕಾರ ನಡಸುತ್ತಿದ್ದರೆಂದೂ ಹೇಳುತ್ತಾರೆ. ಸನ್ನದಿನ ಬಲ ಎಷ್ಟೋ ಇಲ್ಲವೊ ಅಂತೂ, ಅವರು ಸರ್ವಾಧಿಕಾರ ನಡಸಿದ್ದರಲ್ಲಿ ಸಂದೇಹವೇನೂ ಇಲ್ಲ. ಇಂತಹ ನಿರ್ದಯಿಾ ಜಮೀನ್ದಾರ ಈ ದೇಶದಲ್ಲಿ ಹಿಂದೆ ಎಂದೂ ಇರಲಿಲ್ಲವೆಂದು ವದಂತಿ ಮಾತ್ರ ಇದೆ. ಇವರ ಪ್ರಬಲ ಪ್ರತಾಪದಿಂದ ಹುಲಿ - ಕುರಿಗಳು ಒಂದೇ ತೀರದಲ್ಲಿ ನೀರು ಕುಡಿಯು ತ್ತಿದ್ದವಂತೆ. ಏಕಿರಬಾರದು? ಯಾರ ಮೇಲೆ ಇವರ ಕೋಪದೃಷ್ಟಿ ಬೀಳುತ್ತಿತ್ತೋ ಅವರು ಪ್ರಾಣ, ಹಣ ಎರಡನ್ನೂ ಕಳೆದುಕೊಳ್ಳುತ್ತಿದ್ದರು. ಇವರ ಪ್ರಭಾವ ಎಷ್ಟು ಮನೆತನವನ್ನು ಬುಡಮಟ್ಟ ನಾಶಮಾಡಿತ್ತೋ ಹೇಳಲಸಾಧ್ಯ 'ರಾಯ್' ಬಾಬುಗಳ ಅಪ್ಪಣೆಯನ್ನು ಮೀರುವ ಎದೆ ಯುಳ್ಳವರು ಈ ಸುತ್ತುಮುತ್ತಲಿನ ಇಪ್ಪತ್ತು ಕ್ರೋರ (ಒಂದು ಕ್ರೋರಕ್ಕೆ ಎರಡು ಮೈಲಿ) ಎಲ್ಲೆಯಲ್ಲಿ ಯಾರೂ ಇರಲಿಲ್ಲ. ಅವರ ಕಠಿಣ ಶಾಸನದಿಂದ ಈ ಪರಗಣೆಗಳಲ್ಲಿ ಕಳ್ಳತನ, ಡಕಾಯಿತಿ, ದಂಗೆ, ದೊಂಬಿ ಇವುಗಳ ಹೆಸರೇ ಇರಲಿಲ್ಲ. ಇದಕ್ಕೆ ಕಾರಣವೂ ಇತ್ತು. ಏನೆಂದರೆ, ಆ ಪ್ರಾಂತ್ಯವಲ್ಲಿದ್ದ ಕತ್ತಿವರಸೆ, ದೊಣ್ಣೆವರಸೆ ತಿಳಿದವರು, ಬಿಲ್ಲು ಬಾಣಗಳಲ್ಲಿ ಚೆನ್ನಾಗಿ ಅಭ್ಯಾಸವುಳ್ಳವರು ಮೊದಲಾಗಿ ಕ್ರೂರ ಕರ್ಮ ಮಾಡಲು ಹಿಂಜರಿಯದವರೆಲ್ಲರೂ 'ರಾಯ್' ಬಾಬುಗಳ ಇಲಾಖೆಯಲ್ಲಿ ಕಾಲಾಳುಗಳ ಗುಂಪಿನಲ್ಲಿ ಸೇರಿಸಲ್ಪಟ್ಟು ಸಂಬಳ ಪಡೆಯು ತ್ತಿದ್ದರು ಮನುಷ್ಯರ ಬಗ್ಗೆ, ಅವರ ನಿಗ್ರಹದ ಶಕ್ತಿಗೆ ಹೇಗೆ ಎಲ್ಲೆಯಿರ ಲಿಲ್ಲವೋ ಹಾಗೆಯೇ ಅನುಗ್ರಹ ಶಕ್ತಿಯೂ ಅಸೀಮವಾಗಿತ್ತು. ಇವರ ಆಶ್ರಯದಲ್ಲಿದ್ದು ಇವರನ್ನು ಅನುಸರಿಸಿ ನಡೆಯುತ್ತಿದ್ದವರ ಸಂಖ್ಯೆ ಗೊತ್ತು ಗುರಿಯಿಲ್ಲ. ದರಿದ್ರರಿಗೆ ಅನ್ನ, ಬಟ್ಟೆ ದಾನ, ರೋಗಿಗಳಿಗೆ ಔಷಧ ದಾನ ಇವು ಅವರ ನಿತ್ಯಕರ್ಮವಾಗಿತ್ತು. ಇವರಿಂದ ದಾನ ಮಾಡಲ್ಪಟ್ಟ ದೇವೋತ್ತರ, ಬ್ರಹ್ಮೋತ್ತರಗಳ ಪ್ರಸಾದದಿಂದ ಅಸಂಖ್ಯ ಬ್ರಾಹ್ಮಣ ಪುರೋಹಿತರುಗಳು ನೆಮ್ಮದಿಯಾಗಿದ್ದರು. ಇಷ್ಟಲ್ಲದೆ ನಿತ್ಯೋತ್ಸವ, ಮಾಸೋತ್ಸವ, ದುರ್ಗಾಪೂಜೆ ಮೊದಲಾದುವುಗಳಲ್ಲಿ ಕೈ ಹಿಡಿಯದೆ

ಖರ್ಚು ಮಾಡುತ್ತಿದ್ದರು. ರುದ್ರಪುರದಲ್ಲಿ 'ಡೋಲೋತ್ಸವ'ದ ಕಾಲದಲ್ಲಿ ಆಕಾಶವೆಲ್ಲ ' ಅಬೀರ್ ' (ಕುಂಕುಮ) ದಿಂದಲೂ ದುರ್ಗೋತ್ಸವದಲ್ಲಿ ಭೂಮಿಯು ರಕ್ತದಿಂದಲೂ ಮುಚ್ಚಿರುತ್ತಿತ್ತು. ರುದ್ರಪುರದ ಅತಿಥಿಶಾಲೆಯಲ್ಲಿ ದಿನಂಪ್ರತಿ ಒಂದು ನೂರು ಜನಕ್ಕೆ ಭೋಜನದ ಏರ್ಪಾಡಿತ್ತು. ಪಿತೃಋಣ, ಮಾತೃಋಣ, ಕನ್ಯಾಋಣ ಇವುಗಳಿಂದ ಪೀಡಿತನಾದ ಯಾವ ಬ್ರಾಹ್ಮಣನೂ ಅವರನ್ನು ಕಂಡು ಬರಿಗೈಯಲ್ಲಿ ಹಿಂತಿರುಗುತ್ತಿರಲಿಲ್ಲ. ಅವರ ಹಣ ಸತ್ಕಾರ್ಯದಲ್ಲಿ ಖರ್ಚಾಗಬೇಕಲ್ಲದೆ ಶೇಖರಿಸಲ್ಪಡುವುದಕ್ಕಲ್ಲವೆಂದು ಹೇಳುತ್ತಿದ್ದರು. ಸತ್ಕಾರ್ಯಕ್ಕಾಗಿ ಯಾವಾಗಲೂ ಹಣ ಸಾಲದಾದರೆ ಕೊನೆಗೆ ಸಾಹುಕಾರರ ಮನೆ ದೋಚಿಯಾದರೂ ಹಣ ತರಲು ಹಿಂಜರಿಯುತ್ತಿರಲಿಲ್ಲ. ಒಳ್ಳೆಯ ಕೆಲಸವಾಗಲೀ ಕೆಟ್ಟ ಕೆಲಸವಾಗಲೀ ಅವರು ತಮ್ಮ ಮನಸ್ಸಿಗೆ ತೋರಿದಂತೆ ನಡಸುತ್ತಿದ್ದರು. ನವಾಬರ ಪ್ರಭುತ್ವದಲ್ಲಿ ಅವರ ಕಡೆಯ ಅಧಿಕಾರಿಗಳು ಯಾರೂ ಇರಲೇ ಇಲ್ಲ. ಈ ಕಾರಣದಿಂದ ಇವರ ಆಡಳಿತಕ್ಕೆ ಕಡೆಯೇ ಇರಲಿಲ್ಲವಾಗಿ ಜನರಿಗೆ ಭಕ್ತಿಯ ಜತೆಗೆ ಭಯವೂ ಇತ್ತು. ಅವರಿಗಂತೂ ಜನಸಾಮಾನ್ಯರಲ್ಲಿ ಭಕ್ತಿಯೂ ಇರಲಿಲ್ಲ, ಭಯವೂ ಇರಲಿಲ್ಲ. ತಡೆಯಿಲ್ಲದ ಈ ಸ್ವೇಚ್ಛಾಚಾರದ ಫಲವಾಗಿ, ತಾವು ಶ್ರೇಷ್ಠರೆಂಬ ಭಾವನೆ ಅವರಲ್ಲಿ ಒಂದು ವಿಕೃತ ಬುದ್ಧಿಯನ್ನುಂಟುಮಾಡಿತು. ಅವರ ಮನಸ್ಸಿನಲ್ಲಿ ತಮ್ಮ ಜಾತಿಯ ಅಹಂಭಾವ, ಧನಮದ, ಶಕ್ತಿಯ ಹೆಮ್ಮೆ, ರೂಪದ ಗರ್ವ ಇವೆಲ್ಲ ತುಂಬಿತ್ತು. 'ರಾಯ್' ಪರಿವಾರದ ಗಂಡಸರು ಎಲ್ಲರೂ ಗೌರವ ಕಾಯರು, ದೀರ್ಘಾಕೃತಿಯವರು ಮತ್ತು ಬಲಿಷ್ಠರು. ಅವರ ಮನೆತನದ ಹೆಣ್ಣುಮಕ್ಕಳ ರೂಪದ ಖ್ಯಾತಿ ದೇಶವೆಲ್ಲ ಹರಡಿತ್ತು. ಈ ಎಲ್ಲ ಕಾರಣಗಳಿಂದ ಮನುಷ್ಯರನ್ನು ಮನುಷ್ಯರೆಂದು ಎಣಿಸುವುದು ಅವರ ಸ್ವಭಾವಕ್ಕೆ ವಿರೋಧವಾಗಿತ್ತು.

ಈ ದೇಶದಲ್ಲಿ ಇಂಗ್ಲೀಷಿನವರು ಕಾಲಿಡುವ ಮುಂಚೆ ಇವರ ದೆಸೆ ಕೆಟ್ಟುಹೋಗಿತ್ತು. ಅದರ ಮೇಲೆ ಕಂಪೆನಿಯ ಆಡಳಿತ ಬಂದನಂತರ ಇವರ ಸರ್ವನಾಶವಾಯಿತು. ಇವರ ವಂಶ ವೃದ್ಧಿಯಾದಂತೆ ಆಸ್ತಿಯ ಹಂಚಿಕೆಯಿಂದ ಕೊನೆ ಕೊನೆಗೆ ಎಲ್ಲರೂ ನಿರ್ಧನರಾದರು. ಕ್ರಮೇಣ

ಇವರ ವಂಶವೂ ಲೋಪವಾಗಲಾರಂಭಿಸಿತು. ಸ್ವಶಕ್ತಿಯಿಂದ ಸ್ವಪ್ರಯತ್ನ ದಿಂದ ಹಣ ಸಂಪಾದಿಸುವದು ಇವರುಗಳಿಗೆ ಹೇಯವೆನಿಸಿತು. 'ರಾಯ್' ಮನೆತನದವರು ಶಾಕ್ತೇಯರು. ಆದರಲ್ಲೂ ವೀರ ಶಾಕ್ತೇಯರು. ರುದ್ರಪುರದ ಇವರ ಮನೆಗಳಲ್ಲಿ ಆಬಾಲವೃದ್ಧರೂ ಮದ್ಯಪಾನ ಮಾಡುತ್ತಿದ್ದರು. ಈ ಮನೆತನದ ಹೆಂಗಸರೂ ಈ ಅಭ್ಯಾಸಕ್ಕೆ ಹಿಂಜರಿಯದವರಾಗಿದ್ದರು. ಮದ್ಯಪಾನ ಪೌರುಷತ್ವದ ಗುರುತೆಂದು ಅವರು ಎಣಿಸಿದ್ದರು. ಸಂಧ್ಯಾಕಾಲದಲ್ಲಿ ಕುಲದೇವತೆ ಸಿಂಹವಾಹಿನಿಯ ದರ್ಶನದಾನಂತರ ಗಂಡಸರು ಭೈರಕ ಖಾನೆಯಲ್ಲಿ ನೇರಿ ಮದ್ಯಪಾನ ನಿರತರಾದರೆ ಆಗ ಆ ಗೌರವರ್ಣ ದೀರ್ಘಕಾಯರ ಹಣೆಯಲ್ಲಿ ರಕ್ತ ಚಂದನದ ಬೊಟ್ಟು ಕೊರಳಲ್ಲಿ ಯವಕುಸುಮದ ಮಾಲೆ ಇವು ಶೋಭಿಸುತ್ತಿದ್ದವು. ಇವೆಲ್ಲವೂ ನೇರಿ ಅವರು ಮಹಾದೇವನ (ತ್ರಿನೇತ್ರನ) ಪ್ರತ್ಯಕ್ಷಮೂರ್ತಿಗಳಂತೆ ಕಾಣುತ್ತಿದ್ದರು.

ಇಂತಹ ಸಮಯದಲ್ಲಿ ಅವರಿಂದ ಆಗದ ಕೆಲಸ ಭೂಮಿಯಲ್ಲೇ ಇರದು. ಅವರ ಕಾಲಾಳುಗಳು ಇವರ ಮನೆಯ ಹಣ ಸೂರೆಮಾಡಿ ತರುವುದು, ಅವರ ಮನೆಯ ಸೊಸೆಯನ್ನು ಹೊತ್ತು ತರುವುದು ಮೊದಲಾದ ಕೆಲಸಗಳಿಗೆ ಅಪ್ಪಣೆ ಪಡೆಯುತ್ತಿದ್ದರು. ಇದರ ಫಲವಾಗಿ ನಿತ್ಯವೂ ಅಲ್ಲಲ್ಲಿ ಯುದ್ಧಕಾಂಡವಾಗಿ ರಕ್ತಪಾತವಾಗುತ್ತಿತ್ತು. ಈ ಅಂತಃಕಲಹಗಳಿಂದ ಅವರು ನಾಶದದಾರಿಯಲ್ಲಿ ಬಹುದೂರ ನಡೆದಿದ್ದರು. ಆ ಹತ್ತು ತೊಟ್ಟಿಗಳಿಂದ ಕೂಡಿದ ಮನೆಯೂ ಪರರಸ್ವಾಧೀನವಾಗಿತ್ತು. ಕಂಪೆನಿಯ ಸರ್ಕಾರದ ಕಿಸ್ತನ್ನು ವಾಯಿದೆಯ ಕೊನೆಯ ತಾರೀಖಿನಲ್ಲಿ ಸಲ್ಲಿಸದಿದ್ದರೆ ಲಕ್ಷ್ಮಿ ಪೂರ್ಣವಾಗಿ ಮನೆ ಬಿಟ್ಟು ಹೋಗುವಳೆಂಬ ಭಾವನೆ ಇವರ ಮನಸ್ಸಿನಲ್ಲಿ ಇರಲೇ ಇಲ್ಲ ಹಿಂದಿನ ನವಾಬರ ದರ್ಬಾರಿನಲ್ಲಿ ವರ್ಷೇ ವರ್ಷೇ ಗೊತ್ತಾದ ಮೊಬಲಗನ್ನು ಕಂದಾಯ ಅಥವಾ ಕಾಣಿಕೆಯ ರೂಪದಲ್ಲಿ ಕಟ್ಟಿಕೊಂಡು ಬರುವ ಸಂಪ್ರದಾಯ ಇವರ ಮನೆತನದಲ್ಲಿ ಇರಲಿಲ್ಲವಾದ್ದರಿಂದ ಕಂಪೆನಿಗೆ ಸಲ್ಲಿಸಬೇಕಾಗಿದ್ದ ಹಣವನ್ನು ಇವರು ಸಕಾಲದಲ್ಲಿ ಶೇಖರಿಸಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದ ಇವರ ಆಸ್ತಿಯ ಬಹುಭಾಗ ಇತರರ ಕೈ ನೇರುತ್ತಿತ್ತು. 'ರಾಯ್'

ವಂಶ ಲೋಪವಾಗುತ್ತ ಬಂದಿತ್ತು ಜಮೀನುದಾರರ ಒಂದನೂರು ಮನೆಗಳಿದ್ದ ಈ ಗ್ರಾಮದಲ್ಲಿ ಈಗ್ಗೆ ಸುಮಾರು ನೂರು ವರ್ಷಗಳಿಗೆ ಮುಂಚೆ ಕೇವಲ ಆರು ಮನೆಗಳು ಮಾತ್ರ ಉಳಿದಿದ್ದವು

ಈ ಆರು ಮನೆಗಳ ಆಸ್ತಿಪಾಸ್ತಿಯೂ ಕ್ರಮೇಣ ಧನಂಜಯ ಸರ್ಕಾರನ ಕೈ ಸೇರುತ್ತಿತ್ತು. ಇದಕ್ಕೆ ಕಾರಣವೇನೆಂದರೆ ಧನಂಜಯ ಸರ್ಕಾರನು ಕಂಪೆನಿ ಸರ್ಕಾರದ ಕಾನೂನನ್ನು ಚೆನ್ನಾಗಿ ತಿಳಿದಿದ್ದ. ಅದ ರಂತೆ ನಡೆಯುತ್ತಲೂ ಇದ್ದ. ಇಂಗ್ಲಿಷ್ ಕಾನೂನಿನ ಸಹಾಯದಿಂದ ಹೇಗೆ ಹಣ ಸಂಗ್ರಹಿಸುವುದು, ಹೇಗೆ ಆಸ್ತಿ ಸಂಪಾದಿಸುವುದು ಎಂಬ ವಿಷಯಗಳ ಎಲ್ಲ ಗುಟ್ಟನ್ನೂ ಅವನು ಚೆನ್ನಾಗಿ ತಿಳಿದುಕೊಂಡಿದ್ದ. ಅವನು ಜಿಲ್ಲೆಯ ಕಛೇರಿಯಲ್ಲಿ ಮೊಖ್ತೆಯಾರನಾಗಿದ್ದು ನಾಲ್ಕಾರು ವರ್ಷಗಳಲ್ಲಿ ಅಪಾರ ಹಣವನ್ನು ಸಂಪಾದಿಸಿದ್ದ ಅನಂತರ ಆ ಹಣ ವನ್ನು ಲೇವಾದೇವಿಯಲ್ಲಿ ಹಾಕಿ ಬಡ್ಡಿ, ಚಕ್ರಬಡ್ಡಿ ಸೇರಿಸಿ ಬೆಟ್ಟದಂತೆ ಬೆಳಸುತ್ತಿದ್ದ. ಹತ್ತು ವರ್ಷಗಳಲ್ಲಿ ಅವನು ಹತ್ತು ಲಕ್ಷ ರೂಪಾಯಿ ಗಳನ್ನು ಶೇಖರಿಸಿದ್ದನೆಂದು ಜನಶ್ರುತಿ ಇದೆ. ಅಷ್ಟಿಲ್ಲದಿದ್ದರೂ ಅವನು ನಾಲ್ಕಾರು ಲಕ್ಷದ ಒಡೆಯನಾಗಿದ್ದನೆಂಬುದಕ್ಕೆ ಸಂದೇಹವೇ ಇಲ್ಲ. ಈ ಹಣವನ್ನು ಶೇಖರಿಸಿದನಂತರ ಅವನಿಗೆ ಜಮೀನ್ದಾರನಾಗಬೇಕೆಂಬ ಆಶೆಯಾಯಿತು. ಈ ಆಶೆಯನ್ನು ತೃಪ್ತಿಪಡಿಸುವುದಕ್ಕಾಗಿ ಅವನು 'ರಾಯ್' ವಂಶದವರ ಆಸ್ತಿಯನ್ನು ಒಂದೊಂದಾಗಿ ಕೊಳ್ಳಲು ಆರಂಭಿಸಿದನು ಈ ಜಮೀನ್ದಾರಿಯ ಆಸ್ತಿಪಾಸ್ತಿಯ ಎಲ್ಲ ಸುದ್ದಿಯೂ ಸಂಪೂರ್ಣವಾಗಿ ಅವನಿಗೆ ತಿಳಿದಿತ್ತು. 'ರಾಯ್' ವಂಶೀಯರ ಚಾಕರಿಯಲ್ಲಿ ಅವರ ಮನೆತನದವರು ಹದಿನಾಲ್ಕು ತಲೆಯಿಂದಲೂ ಕೆಲಸ ಮಾಡಿ ಜೀವಿಸಿದ್ದರು. ಅವನೂ ಚಿಕ್ಕ ವಯಸ್ಸಿನಲ್ಲಿ ರುದ್ರಪುರದ ಹಿರೀಮನೆತನದ ತ್ರಿಲೋಕನಾರಾಯಣರವರ ಕಛೇರಿಯಲ್ಲಿ ಗುಮಾಸ್ತೆ ಯಾಗಿ ನಾಲ್ಕಾರು ವರ್ಷ ಚಾಕರೀ ಮಾಡಿದ್ದ. 'ರಾಯ್'ವಂಶೀಯರ ಹಕ್ಕುದಾರರ ಹೆಚ್ಚು ಭಾಗ ಆಸ್ತಿಯನ್ನು ಕೊಂಡುಕೊಂಡಿದ್ದರೂ ಧನಂಜಯನಿಗೆ ರುದ್ರಪುರದಲ್ಲಿ ಕಾಲಿಡಲು ಧೈರ್ಯವಿರಲಿಲ್ಲ. ಯಾಕೆಂದರೆ ಅವನ ಯಜಮಾನನ ಮಗ ಉಗ್ರನಾರಾಯಣನು ಇನ್ನೂ

ಜೀವಂತನಾಗಿದ್ದ. ಉಗ್ರನಾರಾಯಣ ಕೈಯಲ್ಲಿ ಯಜ್ಞೋಪವೀತವನ್ನು ಹಿಡಿದುಕೊಂಡು ಭಗವತೀ ಸಿಂಹವಾಹಿನಿಯ ಪಾದ ಮುಟ್ಟಿ, "ತಾನು ಬದುಕಿರುವ ವರೆಗೂ ಧನಂಜಯ ರುದ್ರಪುರದ ಎಲ್ಲೆಯಲ್ಲಿ ಕಾಲಿಟ್ಟದ್ದೇ ಆದರೆ ಅವನು ಪುನಃ ಸಶರೀರನಾಗಿ ಹಿಂತಿರುಗದಂತೆ ನೋಡಿಕೊಳ್ಳು ವೆನು" ಎಂದು ಶಪಥ ಮಾಡಿದ್ದ. ಉಗ್ರನಾರಾಯಣನಂತಹ ಅಸಮ ಸಾಹಸೀ ಪುರುಷನು 'ರಾಯ್' ಮನೆತನದಲ್ಲೇ ಹುಟ್ಟಿರಲಿಲ್ಲವಾದ್ದ ರಿಂದ ಆವನು ತನ್ನ ಪ್ರತಿಜ್ಞೆಯನ್ನು ಅಕ್ಷರಶಃ ಪಾಲಿಸುವನೆಂಬ ಸಂಗತಿ ಧನಂಜಯನಿಗೆ ಚೆನ್ನಾಗಿ ಗೊತ್ತಿತ್ತು

ಉಗ್ರನಾರಾಯಣನ ಮರಣದ ಕೆಲವು ಕಾಲಾನಂತರ ಧನಂಜಯ ರುದ್ರಪುರಕ್ಕೆ ಬಂದು 'ರಾಯ್' ಬಾಬುಗಳ ವಂಶಾನುಗತ ಮನೆಯನ್ನು ವಶಪಡಿಸಿಕೊಂಡ. ಆಗ ಆ ಗ್ರಾಮದಲ್ಲಿ 'ರಾಯ್' ವಂಶದ ಗಂಡಸ ರೊಬ್ಬರೂ ಇರಲಿಲ್ಲ. ಅವನು ಮನಸ್ಸು ಮಾಡಿದ್ದರೆ ಎಲ್ಲ ಹಕ್ಕುದಾರರ ಮನೆ ಮಠಗಳನ್ನೂ ತನ್ನ ಕೈಯಲ್ಲಿ ಸೇರಿಸಿಕೊಳ್ಳಬಹುದಾಗಿತ್ತು. ಆದರೂ ಅವನು ಉಗ್ರನಾರಾಯಣನ ಏಕಮಾತ್ರ ವಿಧವಾಕನ್ಯಾ ರತ್ನಮಯಿ ಯನ್ನು ಅವಳ ಹಿರಿಯರ ಮನೆಯಿಂದ ಹೊರಕ್ಕೆ ಹಾಕಲು ಯತ್ನಿಸಲಿಲ್ಲ. ಆದಕ್ಕೆ ಮುಖ್ಯ ಕಾರಣವೇನೆಂದರೆ ರುದ್ರಪುರದ ಪಠಾನ್‌ವಾಡಿಯ ಎಲ್ಲ ನಿವಾಸಿಗಳೂ ಉಗ್ರನಾರಾಯಣನ ಮನೆಯಲ್ಲಿ ರತ್ನಮಯಿಯ ಆಸ್ತಿ ಪಾಸ್ತಿಯನ್ನು ಕಾಪಾಡಲು ಎದೆಗೊಟ್ಟು ನಿಲ್ಲಲು ಸಿದ್ಧರಾಗಿದ್ದರು. ಈ ಮೊಹಲ್ಲೆಯ ಗಂಡಸರಲ್ಲಿ ಸಣ್ಣಪಿಳ್ಳೆಯಿಂದ ಮುದುಕನ ವರೆಗೆ ಪ್ರತಿ ಯೊಬ್ಬನೂ ಲಾಠೀವರಸೆಯಲ್ಲಿ ಸಿದ್ಧಹಸ್ತರಾಗಿದ್ದರು. ರತ್ನಮಯಿ ಯನ್ನು ಮನೆಯಿಂದ ಹೊರಡಿಸಲು ಯತ್ನಿಸಿದರೆ ಕೊಲೆಯಾಗುವುದು ಖಂಡಿತವೆಂದು ಅವನಿಗೆ ದೃಢವಾಗಿತ್ತು. ಆದ್ದರಿಂದ ಅವನು ಕೋಪ ದಿಂದ ಒಳಗೇ ಕುದಿಯುತ್ತಿದ್ದ. ಅವನಂತಹ ಭೀರು ಸ್ವಭಾವದ ಎರಡನೆಯ ವ್ಯಕ್ತಿ ಬಂಗಾಲದಲ್ಲೇ ಸಿಕ್ಕುತ್ತಿರಲಿಲ್ಲ. ಎರಡನೆಯದಾಗಿ ಹದಿನಾಲ್ಕು ತಲೆಮಾರಿನಿಂದ ಯಾರ ಮನೆಯ ಅನ್ನ ತಿಂದು ವಂಶ ಬೆಳೆ ದಿತ್ತೋ ಆ ಮನೆತನದವರಲ್ಲಿ ಸ್ವಲ್ಪ ಭಯಭಕ್ತಿಯೂ ಇತ್ತು. ಈ ಎಲ್ಲ ಕಾರಣದಿಂದ ಉಗ್ರನಾರಾಯಣನ ಹಿಸ್ಸೆಯನ್ನು ಬಿಟ್ಟು 'ರಾಯ್'

ವಂಶದವರ ಮನೆಯ ಅರ್ಧಭಾಗವನ್ನು ಆಕ್ರಮಿಸಿಕೊಂಡಿದ್ದರೂ ಅದು ಕೇವಲ ನಾಮಮಾತ್ರವಾಗಿತ್ತು. ಧನಂಜಯನ ಮನೆಯಲ್ಲಿದ್ದವರು ಅವನೂ ಅವನ ಒಬ್ಬಳೇ ಮಗಳಾದ ರಂಗಿಣೀದಾಸೀ ಮತ್ತು ಮನೆಯ ಅಳಿಯನಾದ ಅವಳ ಗಂಡ ರತೀಲಾಲ ದೇ ಈ ಮೂರು ಜನವೇ. ಈ ಮನೆಯಲ್ಲಿ ಬಂದು ನೆಲಸಿದ ಮೇಲೆ ಧನಂಜಯನ ಮನಸ್ಸಿನಲ್ಲಿ ಒಂದು ವಿಶೇಷ ಬದಲಾವಣೆಯಾಗಿತ್ತು. ಹಣ ಸಂಪಾದಿಸುವುದರ ಜೊತೆಯಲ್ಲಿಯೇ ಧನಂಜಯನ ಧನಲೋಭ ದಿನೇ ದಿನೇ ಹೆಚ್ಚಿ ಕೊನೆಗೆ ಅವನ ಹೃದಯದಲ್ಲಿ ಅದಲ್ಲದೆ ಬೇರೆ ಯಾವ ಭಾವನೆಗೂ ಸ್ಥಳವೇ ಇರಲಿಲ್ಲ. ಆ ಲೋಭದ ಬಲದಿಂದಲೇ ಅವನು ಇದುವರೆಗೂ ಎಲ್ಲ ಉಪಾಯಗಳಿಂದಲೂ ಧನಸಂಚಯ ಮಾಡುತ್ತಿದ್ದ. ಯಾರಿಗಾಗಿ, ಏತಕ್ಕಾಗಿ ಈ ಹಣವನ್ನು ಶೇಖರಿಸುತ್ತಿರುವೆನು ಎಂಬ ಪ್ರಶ್ನೆ ಅವನ ಮನಸ್ಸಿನಲ್ಲಿ ಎಂದೂ ಉದಯಿಸಲಿಲ್ಲ.

ಆದರೆ ರುದ್ರಪುರಕ್ಕೆ ಬಂದು ಜಮೀನುದಾರನಾಗಿ ನೆಲಸಿದನಂತರ ತಾನು ಕೇವಲ ಹಣಕ್ಕಾಗಿಯೇ ಹಣ ಶೇಖರಿಸುತ್ತಿರುವುದೇ ವಿನಾ ಯಾರಿಗಾಗಿಯೂ ಅಲ್ಲ; ಯಾವುದಕ್ಕೋಸ್ಕರವೂ ಅಲ್ಲವೆಂಬ ಅಂಶ ಅವನಿಗೆ ತೋರಿತು. ಅವನಿಗೆ ಹುಟ್ಟಿದ ಮಕ್ಕಳಲ್ಲಿ ಒಂದರ ಹಿಂದೆ ಒಂದರಂತೆ ಏಳು ಮಕ್ಕಳು ಸತ್ತರೂ ಅವನು ವಿಚಲಿತನಾಗಲಿಲ್ಲ. ಒಂದು ದಿನವಾದರೂ ಹಣ ಸಂಪಾದನೆಯನ್ನು ಬಿಡಲಿಲ್ಲ. ಅವನ ಜೀವಾವಧಿಯ ಧನಲೋಭ ಮುಪ್ಪಿನಲ್ಲಿ ಧನದ ಅತ್ಯಂತ ಮಾಯೆಯಲ್ಲಿ ಪರಿಣಮಿಸಿತು. ತಾನು ಸಂಪಾದಿಸಿದ ಅಪಾರ ಧನವನ್ನು ಶಾಶ್ವತವಾಗಿ ಭದ್ರಪಡಿಸುವುದಕ್ಕಾಗಿ ಏನು ಮಾಡುವುದೆಂಬುದೇ ಅವನ ರಾತ್ರಿ ಹಗಲಿನ ಯೋಚನೆಯಾಗಿತ್ತು. ಅತುಲ ಐಶ್ವರ್ಯ ಕಾಲಕ್ರಮದಲ್ಲಿ ನಾಶವಾಗುವುದು. ಈ ರುದ್ರಪುರದವರ ಮನೆಯೇ ಅದಕ್ಕೆ ಪ್ರಮಾಣ. ಕ್ರಮೇಣ ಅವನ ಮನಸ್ಸಿನಲ್ಲಿ ಮನುಷ್ಯ ಸ್ವಶಕ್ತಿಯಿಂದ ಧನಸಂಚಯ ಮಾಡಬಲ್ಲ, ಆದರೆ ದೈವಬಲವಿಲ್ಲದೆ ಅದನ್ನು ರಕ್ಷಿಸಲಾರನೆಂಬ ಭಾವನೆ ಬೇರೂರಿ ನೆಲಸಿತು.

ಆಂಗ್ಲೇಯರ ಕಾಯಿದೆ ಕಾನೂನುಗಳು ಕಂಠಪಾಠವಾಗಿದ್ದರೂ ಧನಂಜಯ ಸುತರಾಂ ಹಳೆಯ ಮನುಷ್ಯನಾಗಿದ್ದ. ಅವನ ಪ್ರಕೃತಿ

ಯಲ್ಲಿ ಅಡಗಿದ್ದ ಕಿರಾತ ಅಂಶ ಯಾವ ವಿಧವಾದ ವಿದ್ಯೆಯಿಂದಲೂ ಅವನನ್ನು ತ್ಯಜಿಸಲಿಲ್ಲ. ಹಣದ ಕೊಪ್ಪರಿಗೆಯೊಡನೆ ಒಂದು ಬ್ರಾಹ್ಮಣ ಶಿಶುವನ್ನು ನೆಲಮಾಳಿಗೆಯಲ್ಲಿ ಮುಚ್ಚಿಬಿಟ್ಟು ಆ ಮಗುವನ್ನು ಆ ಮಾಳಿಗೆ ಯಲ್ಲೇ ಅನ್ನಾಹಾರವಿಲ್ಲದೆ ಕೊಂದರೆ ಅದು ಆಗ ಯಕ್ಷನಾಗಿ ಚಿರಕಾಲ ಆ ದ್ರವ್ಯವನ್ನು ರಕ್ಷಿಸುವುದೆಂದು ಧನಂಜಯ ಚಿಕ್ಕ ವಯಸ್ಸಿನಲ್ಲಿ ಕೇಳಿದ್ದ. ಧನಂಜಯನ ಮನಸ್ಸಿನಲ್ಲಿ ಈ ಉಪಾಯದಿಂದಲೇ ತಾನು ಶೇಖರಿಸಿರುವ ಹಣವನ್ನು ಶಾಶ್ವತವಾಗಿ ರಕ್ಷಿಸಬೇಕೆಂಬ ಭಾವನೆಯುಂಟಾಯಿತು. ಎಲ್ಲಿ ಧನಂಜಯನಿಗೆ ಮಮತೆ, ಅಭಿಮಾನವಿರುತ್ತಿರಲಿಲ್ಲವೋ ಅಲ್ಲಿ ಎಲ್ಲ ಬಾಧೆ ಗಳನ್ನೂ ನಿವಾರಿಸಿ ತನ್ನ ಕೆಲಸವನ್ನು ಸಾಧಿಸಿಕೊಳ್ಳುವುದರಲ್ಲಿ ಧನಂಜಯ ಹಿಂಜರಿಯುತ್ತಿರಲಿಲ್ಲ ಆದರೆ ಅವನ ಈ ಯತ್ನಕ್ಕೆ ಒಂದು ತಡೆ ಬಂದು ಅಡ್ಡವಾಯಿತು ಅವನು ಒಂದು ಬ್ರಾಹ್ಮಣ ಶಿಶುವನ್ನು ಯಕ್ಷ ನಾಗಲು ಬಲಿಕೊಡುವೆನೆಂದು ಕೇಳಿದ ಕೂಡಲೇ ಅವನ ಮಗಳಾದ ರಂಗಿಣಿ ಆಹಾರ ನಿದ್ರೆಯನ್ನು ತೊರೆದಳು ಆದರಿಂದ ಧನಂಜಯನಿಗೆ ತನ್ನ ಮನೋಭಿಲಾಷೆಯನ್ನು ಪೂರೈಸಿಕೊಳ್ಳುವುದು ಅಸಂಭವವಾಯಿತು. ಧನಂಜಯನಿಗೆ ಈ ಪೃಥ್ವಿಯಲ್ಲಿ ಹಣದನಂತರ ಮತ್ತೊಂದರಲ್ಲಿ ಅಭಿ ಮಾನವಿತ್ತು: ಮಗಳು ರಂಗಿಣಿಯಲ್ಲಿ ಇಟ್ಟಿಗೆ ಗಾರೆಯ ಕಟ್ಟಡದ ಸಂದಿಯಲ್ಲಿ ಒಂದೊಂದು ಗಿಡ ಹೇಗೆ ಆಳವಾಗಿ ಬೇರು ಬಿಟ್ಟು ಬಲವಾಗಿ ನಿಲ್ಲುವುದೋ ಹಾಗೆ ಅವನ ಮಗಳ ಮೇಲಿನ ಮಮತೆ ಬೇರೂರಿತ್ತು. ಧನಂಜಯ ತನ್ನ ಆಶೆಯನ್ನು ತೀರಿಸಿಕೊಳ್ಳಲು ಯತ್ನಿಸದಿದ್ದರೂ ಘಟನಾಚಕ್ರ ಅವನ ಜೀವನದ ಅಂತಿಮ ಆಶೆಯನ್ನು ತೃಪ್ತಿಪಡಿಸಿತು.

ರತ್ನಮಯಿಗೆ ಮೂರು ವರ್ಷದ ಮಗುವೊಂದಿತ್ತು. ಅದರ ಹೆಸರು ಕಿರೀಟಚಂದ್ರ. ಆ ಮಗುವನ್ನು ಸಾಕುತ್ತಾ ಅವಳು ಈ ಮನೆಯಲ್ಲಿ ದಿನವನ್ನು ಕಳೆಯುತ್ತಿದ್ದಳು ಮನುಷ್ಯರೆದುರಿನಲ್ಲಿ ಅವಳು ಸುಳಿಯು ತ್ತಿರಲಿಲ್ಲ. ಅವಳ ಅಂತಃಪುರದಲ್ಲಿ ಯಾರಿಗೂ ಪ್ರವೇಶವಿರಲಿಲ್ಲ. ಅವಳು ನಡುಹಗಲಿನಲ್ಲಿ ಸ್ನಾನಮಾಡಿ ಕುಲದೇವತೆಯಾದ 'ಸಿಂಹ ವಾಹಿನಿಯ ದರ್ಶನಕ್ಕೆ ನಿತ್ಯ ಹೋಗುವ ಪದ್ಧತಿಯನ್ನಿಟ್ಟಿಲ್ಲದಿದ್ದರೆ ರುದ್ರ ಪುರದವರಿಗೆ ಅವಳಿರುವ ಸುದ್ದಿಯೇ ತಿಳಿದಿರುತ್ತಿರಲಿಲ್ಲ. ಆ ಸಮಯ

ದಲ್ಲಿ ಅವಳ ಮುಂದೆ ಇಬ್ಬರು, ಹಿಂದೆ ಒಬ್ಬರು ಪಠಾಣವಾಡಿಯ ಬಾರೀವಾಲಾಗಳು ಅವಳ ರಕ್ಷಕರಾಗಿ ಜೊತೆಯಲ್ಲಿರುತ್ತಿದ್ದರು. ರತ್ನಮಯಿಗೆ ಆಗ ೨೦ ಅಥವಾ ೨೧ ವಯಸ್ಸಾಗಿತ್ತು. ಅವಳಂತಹ ಅಪೂರ್ವ ಸುಂದರಿ ನಮ್ಮ ದೇಶದಲ್ಲಿ ಎಲ್ಲಿಯೋ ಲಕ್ಷಕ್ಕೊಬ್ಬಳನ್ನು ಕಾಣುವುದು ಸಾಧ್ಯವಾಗಿತ್ತು. ಅವಳ ರೂಪ ಸಿಂಹವಾಹಿನೀ ದೇವಿಯಂತಿತ್ತು. ದೇವಿಯ ಕಣ್ಣುಗಳಂತೆಯೇ ಅವಳ ಕಣ್ಣುಗಳೂ ಸ್ಥಿರ ಮತ್ತು ನಿಶ್ಚಲವಾಗಿದ್ದವು. ಆ ಕಣ್ಣುಗಳು ಎಂದೂ ರೆಪ್ಪೆ ಹಾಕವೆಂದು ಜನರು ಹೇಳುತ್ತಿದ್ದರು. ಆದರೆ ಆ ಕಣ್ಣಿನಲ್ಲಿ ಚೆನ್ನಾಗಿ ಬೆಳಗಿದ್ದುದು ಸುತ್ತಮುತ್ತಲಿನ ಜನರ ವಿಷಯದಲ್ಲಿನ ಅವಜ್ಞತೆ. ರತ್ನಮಯಿ ತನ್ನ ಹಿರಿಯರು ಮೂರು ಶತಮಾನಗಳಿಂದ ಶೇಖರಿಸಿದ್ದ ಅಹಂಕಾರಕ್ಕೆ ಉತ್ತರಾಧಿಕಾರಿಣಿಯಾಗಿ ಅದನ್ನು ಸ್ವಾಧೀನಪಡಿಸಿಕೊಂಡಿದ್ದಳು. ಅವಳ ಮನಸ್ಸಿನಲ್ಲಿ ಅವಳ ಸೌಂದರ್ಯದ ವಿಷಯವಾಗಿಯೂ ಅಹಂಕಾರ ತುಂಬಿತ್ತೆಂದು ಹೇಳುವುದು ಅನವಶ್ಯಕ. ಅವಳು ಜನರನ್ನು ಅವಜ್ಞತೆಯಿಂದ ಕಾಣುತ್ತಿದ್ದುದೇ ಆ ರೂಪಕ್ಕೆ ಸಾಕ್ಷಿಯಾಗಿತ್ತು. ರತ್ನಮಯಿಯ ಭಾವನೆಯಲ್ಲಿ ಆ ರೂಪದ ಉದ್ದೇಶ ಜನರನ್ನು ತಿರಸ್ಕರಿಸುವುದಕ್ಕಲ್ಲದೆ ಆಕರ್ಷಿಸುವುದಕ್ಕಲ್ಲವೆಂಬ ನಂಬಿಕೆಯಿತ್ತು. ಅವಳು ದೇವಸ್ಥಾನಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿರುವವರು ತಾವಾಗಿಯೇ ದೂರಸರಿಯುತ್ತಿದ್ದರು. ಅವಳ ಅಂಗಾಂಗಗಳು, ಮೈಯ ಬಣ್ಣ ಅವಳ ನೀರವ ದೃಷ್ಟಿ ಇವೆಲ್ಲ ಕಂಡವರನ್ನು "ದೂರ ತೊಲಗಿ ಮೇಲೆ ನಿಮ್ಮ ನೆರಳು ಬಿದ್ದರೆ ಅಶುದ್ಧವಾದೀತು" ಎಂದು ಧಿಕ್ಕರಿಸುವ ಹಾಗೆ ಇದ್ದವು. ಅವಳು ಹೋಗುವಾಗ ನೋಡುತ್ತಿರಲಿಲ್ಲ. ಕೇವಲ ತಲೆತಗ್ಗಿಸಿಕೊಂಡೇ ಮಂದಿರಕ್ಕೆ ಹೋಗಿ ದೇವಿಯ ದರ್ಶನಮಾಡಿ ಹಾಗೆಯೇ ಹಿಂತಿರುಗುತ್ತಿದ್ದಳು. ರಂಗಿಣಿ ಕಿಟಕಿಯಲ್ಲಿ ನಿಂತುಕೊಂಡು ದಿನಂಪ್ರತಿ ರತ್ನಮಯಿಯನ್ನು ನೋಡುತ್ತಿದ್ದಳು. ರತ್ನಮಯಿಯನ್ನು ಕಂಡಾಗ ಅವಳ ಮೈಯೆಲ್ಲಾ ಉರಿಯುತ್ತಿತ್ತು. ರಂಗಿಣಿಗೆ ಎಲ್ಲ ಇದ್ದರೂ ರೂಪವಿರಲಿಲ್ಲ. ಈ ಅಭಾವ ಅವಳ ಮನಸ್ಸನ್ನು ಚುಚ್ಚುತ್ತಿತ್ತು. ಸಾಲದುದಕ್ಕೆ ಅವಳ ಗಂಡ ರತೀಲಾಲ ಅತಿ ಸುಂದರನಾಗಿದ್ದ.

ಧನಂಜಯನಿಗೆ ಧನಾಶೆ ಎಷ್ಟಿದ್ದಿತೋ ರಂಗಿಣಿಗೆ ಗಂಡನ ಆಶೆಯೂ ಅಷ್ಟೇ ಇತ್ತು. ಈ ಆಶೆ ಒಂದು ತರಹದ ಪ್ರಚಂಡ ಹಸಿವಲ್ಲದೆ ಬೇರೆಯಲ್ಲವೆಂದು ಹೇಳಬಹುದು ಮತ್ತು ಈ ಹಸಿವೂ ಹೊಟ್ಟೆ ಹಸಿವಿನಂತೆಯೇ ಕಣ್ಣಿಲ್ಲದ್ದು ಮತ್ತು ಮಮತಾರಹಿತವಾದುದು. ಈ ಪ್ರೇಮದೊಡನೆ ಎಷ್ಟರಮಟ್ಟಿನ ಮನಸ್ಸಿನ ಸಂಯೋಗವಿತ್ತೋ ಹೇಳಲು ಸಾಧ್ಯವಿಲ್ಲ. ರತೀಲಾಲ ರತ್ನಮಯಿಯ ರೂಪದಲ್ಲಿ ಮುಗ್ಧ ನಾಗಿರುವನೆಂದು ರಂಗಿಣಿಗೆ ಅಕಾರಣವಾಗಿ ಅನುಮಾನವುಂಟಾಯಿತು. ಕ್ರಮೇಣ ಈ ಸಂದೇಹ ನಿಜವೆಂದೇ ಅವಳಿಗೆ ತೋರಿತು. ರತೀಲಾಲ ಗುಟ್ಟಾಗಿ ಉಗ್ರನಾರಾಯಣನ ಮನೆಗೆ ಹೋಗುತ್ತಿದ್ದನೆಂದೂ ಎಷ್ಟು ಹೊತ್ತು ಸಾಧ್ಯವಾದರೆ ಅಷ್ಟುಹೊತ್ತು ಅಲ್ಲಿ ಕಾಲಕಳೆಯುತ್ತಿರುವನೆಂದೂ ರಂಗಿಣಿ ಪತ್ತೆ ಮಾಡಿದ್ದಳು. ರತೀಲಾಲ ರತ್ನಮಯಿಯ ಮನೆಯಲ್ಲಿ ಆಶ್ರಯ ಹೊಂದಿದ್ದ ಬ್ರಾಹ್ಮಣನಲ್ಲಿ ಭಂಗಿ ಸೇದಲು ಹೋಗುತ್ತಿದ್ದುದೇ ಅನುಮಾನಕ್ಕೆ ಆಸ್ಪದ ಕೊಟ್ಟಿತ್ತು. ಇದರೊಡನೆ ಮಕ್ಕಳಿಲ್ಲದ ಚಿಂತೆ. ಅವನಿಗೆ ರತ್ನಮಯಿಯ ಮಗುವನ್ನು ಕಂಡರೆ ಆನಂದವಾಗುತ್ತಿತ್ತು. ಕಿರೀಟಚಂದ್ರನನ್ನು ಕಾಣದೆ ಒಂದು ದಿನವಾದರೂ ಇರಲು ಅವನಿಂದ ಸಾಧ್ಯವಿರಲಿಲ್ಲ. ಪಠಾಣವಾಡಿಯವರು ರತ್ನಮಯಿಯ ಅಂತಃಪುರದ ಕಾವಲುಗಾರರಾಗಿದ್ದುದರಿಂದ ರತೀಲಾಲ ರತ್ನಮಯಿಯನ್ನು ಒಂದು ಸಲ ವಾದರೂ ಪ್ರತ್ಯಕ್ಷವಾಗಿ ಮಾತನಾಡಿಸಲು ಅವಕಾಶವೇ ಇರಲಿಲ್ಲ. ಆದರೆ ರಂಗಿಣಿಗೆ ಮಾತ್ರ ಸುಂದರನಾದ ತನ್ನ ಗಂಡನನ್ನು ರತ್ನಮಯಿ ಅಪಹರಿಸಿರುವಳೆಂದು ಅನಿಸಿತು ಇದಕ್ಕೆ ಮುಯ್ಯಿ ತೀರಿಸುವುದಕ್ಕಾಗಿ ಅಂದರೆ ಅವಳ ತಲೆಯಲ್ಲಿ ತುಂಬಿದ್ದ ಹಿಂಸಾಪ್ರವೃತ್ತಿಯನ್ನು ಚರಿತಾರ್ಥ ಮಾಡುವುದಕ್ಕಾಗಿ ರತ್ನಮಯಿಯ ಮಗುವನ್ನು 'ಯಕ್ಷಬಲಿ' ಕೊಡುವು ದಾಗಿ ಸಂಕಲ್ಪ ಮಾಡಿದಳು. 'ಯಕ್ಷಬಲಿ' ಕೊಡಲು ತನ್ನ ಅಭ್ಯಂತರ ವೇನೂ ಇಲ್ಲವೆಂದೂ ಅಲ್ಲದೆ ಅದಕ್ಕಾಗಿ ಮಗುವನ್ನೂ ಒದಗಿಸುವುದಾ ಗಿಯೂ ಧನಂಜಯನೊಡನೆ ಹೇಳಿದಳು.

ಇಂತಹ ಕಾರ್ಯವನ್ನು ಅತಿ ಗುಟ್ಟಾಗಿಯೇ ಮಾಡಬೇಕು. ತಂದೆ ಮಗಳು ಇಬ್ಬರೂ ಈ ವಿಷಯವಾಗಿ ಆಲೋಚಿಸಿ ರಂಗಿಣಿ

ಮಲಗುವ ಮನೆಯ ಪಕ್ಕದ ಕೊಠಡಿಯ ನೆಲಮಾಳಿಗೆಯಲ್ಲಿ 'ಯಕ್ಷಬಲಿ' ಕೊಡಬೇಕೆಂದು ನಿರ್ಧರಿಸಿದರು ಎರಡು ಮೂರು ದಿನದೊಳಗೆ ಆ ಕೊಠಡಿ ಕಿಟಕಿ ಬಾಗಿಲು ಎಲ್ಲವೂ ಇಟ್ಟಿಗೆ ಗಾರೆಯಿಂದ ಮುಚ್ಚಲ್ಪಟ್ಟವು. ಒಂದೇ ಒಂದು ಸಣ್ಣ ದಾರಿ ತೆರೆದಿತ್ತು. ಅನಂತರ ಅತಿ ಗೋಪ್ಯ ವಾಗಿ ಧನಂಜಯನ ಸಂಚಿತ ಧನವೆಲ್ಲಾ ದೊಡ್ಡ ದೊಡ್ಡ ತಾಮ್ರದ ಹಂಡೆಗಳಲ್ಲಿ ತುಂಬಿ ಆ ಕೋಣೆಯಲ್ಲಿ ಇಟ್ಟರು ರಂಗಿಣಿ ರತೀಲಾಲ ನನ್ನು ಕರೆದು, ರತ್ನಮಯಿಯ ಮಗುವನ್ನು ಹೇಗಾದರೂ ಒಂದು ಸಲ ತನ್ನ ಮನೆಗೆ ಕರೆದುಕೊಂಡು ಬರಬೇಕೆಂದು ಕೇಳಿದಳು. ಆ ಸುಂದರ ಮಗುವನ್ನು ಅಂದೇ ಒಂದು ಸಲ ತೊಡೆಯಮೇಲಿಟ್ಟುಕೊಂಡು ತನ್ನ ಆಶೆಯನ್ನು ತೀರಿಸಿಕೊಳ್ಳುವೆನೆಂದಳು ಹೇಗಾದರೂ ಆ ಮಗು ವನ್ನು ಒಂದು ದಿನ ತಂದು ತನ್ನ ಕೈಲಿ ಕೊಡಬೇಕೆಂದು ಬೇಡಿ ಕೊಂಡಳು. ಅದು ಸಾಧ್ಯವಿಲ್ಲವೆಂದು ರತೀಲಾಲ ಹೇಳಿದ. ರತ್ನಮಯಿ ಆಳುಗಳಿಗೆ ಸುದ್ದಿ ತಿಳಿದರೆ ತಲೆಯೊಡೆಯುವರೆಂದ. ಆದರೆ ರಂಗಿಣಿ ಒಂದೇ ಸಮನಾಗಿ ಹಟಹಿಡಿದು ಕುಳಿತಿದ್ದರಿಂದ ಕೊನೆಗೆ ರತೀಲಾಲ ಬೇಸತ್ತು ಒಂದು ದಿನ ಸಂಜೆಗೆ ಕಿರೀಟಚಂದ್ರನನ್ನು ಎತ್ತಿಕೊಂಡು ಬಂದು ಅವಳಿಗೆ ಕೊಟ್ಟ. ಕಿರೀಟಚಂದ್ರ ಬಂದ ಕೂಡಲೆ ರಂಗಿಣಿ ಅವನನ್ನು ಎತ್ತಿಕೊಂಡು ಮುದ್ದಿಟ್ಟು ಆದರಿಸಿ ಬಹು ಪ್ರೀತಿ ತೋರಿಸಿ ದಳು. ಎಷ್ಟೋ ಮುದ್ದುಮಾತುಗಳನ್ನಾಡಿದಳು. ಆಮೇಲೆ ಅವಳು ಕಿರೀಟಚಂದ್ರನಿಗೆ ಕೆಂಪುರೇಶ್ಮೆಯ ಬಟ್ಟೆಯನ್ನುಡಿಸಿ ಕತ್ತಿನಲ್ಲಿ ಹೂವಿನ ಹಾರವನ್ನೂ ಹಣೆಯಲ್ಲಿ ರಕ್ತಚಂದನದ ಬೊಟ್ಟನ್ನೂ ಇಟ್ಟಳು.

ಆಮೇಲೆ ಆ ಮಗುವಿನ ಕೈಯಲ್ಲಿ ಎರಡು ಚಿನ್ನದ ಬಳೆಗಳನ್ನು ತೊಡಿಸಿದಳು. ರತೀಲಾಲ ಈ ಅಲಂಕಾರವನ್ನು ನೋಡಿ ಸಂತೋಷ ಪಟ್ಟ. ಆಮೇಲೆ ರಂಗಿಣಿ ಆ ಮಗುವನ್ನು ಎತ್ತಿಕೊಂಡು ಹೋಗಿ ಕತ್ತಲೆ ಕೋಣೆಯಲ್ಲಿ ತಳ್ಳಿ ಬಾಗಿಲು ಹಾಕಿಕೊಂಡು ಹೊರಟು ಹೋದಳು. ರತೀಲಾಲ ಇತ್ತ ಅತ್ತ ಬಾಗಿಲನ್ನು ತಳ್ಳಿನೋಡಿದ. ರಂಗಿಣಿ ಅವನನ್ನೂ ಕೋಣೆಯಲ್ಲಿ ಕೂಡಿ ಭದ್ರಪಡಿಸಿರುವಳೆಂಬ ಸಂಗತಿ ತಿಳಿಯಿತು. ರತೀ ಲಾಲ ತಳ್ಳಿನೋಡಿದ. ಕೈಯಿಂದ ಗುದ್ದಿ ಕಾಲಿನಿಂದ ಒದೆದು ಎಲ್ಲ ರೀತಿ

ಯಿಂದಲೂ ಆ ಕತ್ತಲೆಯ ಕೋಣೆಯ ಬಾಗಿಲನ್ನು ತೆಗೆಯಲು ಸರ್ವ ಪ್ರಯತ್ನ ಮಾಡಿದ. ಆ ಬಾಗಿಲಂತೂ ಕೊಡಲಿಯ ಏಟಿಗೂ ಬಿಚ್ಚ ದಂತೆ ಭದ್ರವಾಗಿತ್ತು ಕಿರೀಟಚಂದ್ರ ಆ ಕತ್ತಲೆಯ ಮನೆಯಲ್ಲಿ ಮೊದ ಮೊದಲು ಬಿಕ್ಕಿಬಿಕ್ಕಿ ಅಳುತ್ತಿದ್ದ. ಆಮೇಲೆ ರತೀಲಾಲನನ್ನು ಅಣ್ಣಾಅಣ್ಣಾ ಎಂದು ಕೂಗಲಾರಂಭಿಸಿದ. ಎರಡು ಮೂರು ಘಂಟೆಗಳ ನಂತರ ಆ ಅಳುವಿನ ಧ್ವನಿ ಕೇಳಬರಲಿಲ್ಲ. ಮಗು ಅತ್ತು ಅತ್ತು ಮಲಗಿತೆಂದು ರತೀಲಾಲ ಎಣಿಸಿದ. ಆಮೇಲೆ ಮೂರು ಹಗಲು ಮೂರು ರಾತ್ರಿ ತನ್ನ ಕೊರಡಿಯಲ್ಲೇ ಬಂದಿಯಾಗಿದ್ದು ಒಂದು ಸಮಯದಲ್ಲಿ ಮಗುವಿನ ಅಳುವನ್ನೂ ಒಂದುವೇಳೆ ಅದರ ಕೂಗನ್ನೂ ಕೇಳುತ್ತಿದ್ದ ಈ ಮೂರು ದಿನ ಅವನು ಮಾಡುವುದೇನೆಂಬುದನ್ನು ಅರಿಯದೆ ಹುಚ್ಚನಂತಾಗಿ ಗಳಿಗೆ ಗಳಿಗೆಗೆ ಆ ಬಾಗಿಲಿಗೆ ತನ್ನ ತಲೆಯನ್ನು ಹೊಡೆದುಕೊಳ್ಳುತ್ತಿದ್ದ. ಅವನ ವಿಶ್ವಪ್ರಯತ್ನದಿಂದ ಬಾಗಿಲು ಎಳ್ಳಷ್ಟೂ ಕದಲಿಲ್ಲ. ಆಗಾಗ್ಗೆ ಮಗು ಅಣ್ಣಾ ಅಣ್ಣಾ ಎಂದು ಅಳಲಾರಂಭಿಸಿದಾಗಲೆಲ್ಲಾ ರತೀಲಾಲ 'ಅಪ್ಪಾ ಹೆದರಬೇಡ ನಾನಿಲ್ಲಿರುವೆ' ಎಂದು ಹೇಳುತ್ತಿದ್ದ. ರತೀಲಾಲನ ಧ್ವನಿಕೇಳಿಯಂತೂ ಮಗು ಇನ್ನೂ ಬಲವಾಗಿ ಅಳುತ್ತಾ ಬಾಗಿಲಿಗೆ ತಲೆ ಯನ್ನು ಹೊಡೆದುಕೊಳ್ಳುತ್ತಿತ್ತು ರತೀಲಾಲನು ಎರಡು ಕಿವಿಗಳನ್ನೂ ಮುಚ್ಚಿಕೊಂಡು ಕೊರಡಿಯ ಇನ್ನೊಂದು ಮೂಲೆಗೆ ಓಡಿಹೋಗಿ ಅಳು ತ್ತಿದ್ದ. ಕೆಲವು ವೇಳೆ ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದ. ಕೆಲವು ವೇಳೆ ರಂಗಿಣಿಯನ್ನು ಮನಸ್ವೀ ಬಯ್ಯುತ್ತಿದ್ದ. ಈ ಪೈಶಾಚಿಕ ವ್ಯವಹಾರದಿಂದ ಅವನ ಬುದ್ಧಿಯೇ ಕೆಟ್ಟು ಕಿರೀಟಚಂದ್ರನನ್ನು ಬದುಕಿಸಲು ಬೇರೆ ದಾರಿ ಯನ್ನು ಹುಡುಕುವ ಯೋಚನೆಯೇ ಅವನ ತಲೆಯಲ್ಲಿ ಹೊಳೆಯಲಿಲ್ಲ. ಅವನ ಮನಸ್ಸೆಲ್ಲ ಅಂಧಕೂಪದಲ್ಲಿ ಸೆರೆಯಾಗಿದ್ದ ಮಗುವಿನ ಅಳುವಿ ನಲ್ಲೇ ನೆಲಸಿ ಹೋಗಿತ್ತು. ಮೂರುದಿನಗಳ ಅನಂತರ ಆ ಮಗುವಿನ ಅಳು ಕ್ರಮೇಣ ಅತಿ ಮೆಲ್ಲಗಾಗಿ ಕ್ಷೀಣಿಸುತ್ತ ಐದನೆಯ ದಿನ ನಿಂತು ಹೋಯಿತು. ಮಗುವು ಪ್ರಾಣ ಬಿಟ್ಟಿತೆಂದು ರತಿಲಾಲನಿಗೆ ಅನಿಸಿತು. ಆಗ ಅವನು ಅತಿ ಪ್ರಯತ್ನದಿಂದ ತನ್ನ ಕೊರಡಿಯ ಕಿಟಕಿಯ ಕಬ್ಬಿಣದ ಸಲಾಕಿಗಳನ್ನು ಕೈಯಿಂದ ಹೇಗೆಯೋ ಸರಿಸಿ ಆ ಮಾರ್ಗವಾಗಿ ಹೊರಕ್ಕೆ

ಧುಮುಕಿ ಒಂದೇ ಓಟದಲ್ಲಿ ರತ್ನಮಯಿಯ ಮನೆಗೆ ಓಡಿದ. ಅಲ್ಲಿ ಹೋದಾಗ ಅಂತಃಪುರದ ಬಾಗಲಲ್ಲಿ ಯಾರೂ ಇರಲಿಲ್ಲ. ಪಠಾಣ ವಾಡಿಯ ಕಾವಲುಗಾರರು ಮಗುವನ್ನು ಹುಡುಕುತ್ತ ಊರೂರು ಅಲೆಯು ತ್ತಿದ್ದರು. ಇಂತಹ ಸಮಯದಲ್ಲಿ ರತೀಲಾಲ ನೆಟ್ಟಗೆ ಅಂತಃಪುರವನ್ನು ಸೇರಿ ರತ್ನಮಯಿಗೆ ಒಂದೇ ಉಸಿರಿನಲ್ಲಿ ಎಲ್ಲ ಸಂಗತಿಯನ್ನೂ ತಿಳಿಸಿದ. ಮೂರು ವರ್ಷಗಳಿಂದ ರತ್ನಮಯಿಯ ಮುಖದಲ್ಲಿ ಯಾರೂ ನಗುವನ್ನು ಕಂಡಿರಲಿಲ್ಲ. ಇಂದು ತನ್ನ ಮಗನ ಈ ಕ್ರೂರಹತ್ಯೆಯ ಸುದ್ದಿಯನ್ನು ಕೇಳಿ ಅವಳ ಮುಖ ಕಣ್ಣು ಎಲ್ಲವೂ ಹೊಳೆಯಲಾರಂಭಿಸಿದವು. ನೋಡು ವವರಿಗೆ ಅವಳು ನಗುತ್ತಿರುವಂತೆ ಕಾಣಿಸುತ್ತಿತ್ತು. ಈ ವಿಚಿತ್ರ ವ್ಯಾಪಾರ ವನ್ನು ಕಂಡು ರತೀಲಾಲ ಆಶ್ಚರ್ಯಪಟ್ಟ. ಅವನು ರತ್ನಮಯಿಯಿಂದ ಅಪ್ಪಣೆ ತೆಗೆದುಕೊಂಡು ಎಲ್ಲಿಯೋ ಹೊರಟು ಹೋದ.

ಆಮೇಲೆ ಅದೇ ದಿನದ ಮಧ್ಯ ರಾತ್ರಿಯಲ್ಲಿ ಎಲ್ಲರೂ ಮಲಗಿರು ವಾಗ ರತ್ನಮಯಿ ತನ್ನ ಮನೆಗೆ ಬೆಂಕಿಯಿಟ್ಟಳು. ದಾಯಾದಿಗಳ ಮನೆ ಯೆಲ್ಲವೂ ಪಕ್ಕದಲ್ಲೇ ಒಂದಕ್ಕೊಂದು ಸೇರಿತ್ತು. ಒಂದೆರಡು ಗಂಟೆ ಯೊಳಗೆ ರೋಷಾಗ್ನಿ ಧಗಧಗಿಸುತ್ತ ಧನಂಜಯನ ಮನೆಯನ್ನೂ ಆಕ್ರಮಿಸಿತು. ಧನಂಜಯನೂ ರಂಗಿಣಿಯೂ ಮನೆಯಿಂದ ಹೊರಬಿದ್ದು ಓಡಿಹೋಗಲು ಯತ್ನಿಸಿದರು. ಮನೆಯ ಬಾಗಿಲನ್ನು ಸೇರಿದಾಗ ಅವರಿಗೆ ಒಂದು ಆಶ್ಚರ್ಯಕರ ಸಂಗತಿ ಕಣ್ಣಿಗೆ ಬಿತ್ತು. ಪಠಾಣವಾಡಿಯ ಎಲ್ಲ ಜನರೂ ಕೈಯಲ್ಲಿ ದೊಣ್ಣೆ, ಭರ್ಜಿಗಳನ್ನು ಹಿಡಿದುಕೊಂಡು ಬಾಗಿಲಲ್ಲಿ ನಿಂತಿದ್ದರು. ರತ್ನಮಯಿಯ ಅಪ್ಪಣೆಯಂತೆ ಅವರುಗಳು ರಂಗಿಣೀ ಧನಂಜಯರನ್ನು ಬಾರಿಬಾರಿಗೆ ಈಟಿಯಿಂದ ತಿವಿದು ಮೈಯೆಲ್ಲ ಗಾಯ ಮಾಡಿ ಕೊಂದರು. ಆಮೇಲೆ ಉರಿಯುತ್ತಿದ್ದ ಆ ಬೆಂಕಿಯಲ್ಲೇ ಆ ಹೆಣ ಗಳನ್ನು ಬಿಸಾಡಿದರು. ರತ್ನಮಯಿ ಅಟ್ಟಹಾಸದಿಂದ ವಿಕಟನಗುವಿ ನೊಂದಿಗೆ ಮುಂದೆ ಬಂದಳು. ಅವಳಿಗೆ ಹುಚ್ಚು ಹಿಡಿದಿದೆಯೆಂದು ಜನ ರಿಗೆ ತಿಳಿಯಿತು. ಆ ಸಮಯದಲ್ಲಿ ಪಠಾನ್‌ವಾಡಿಯ ಜನರ ರಕ್ತವೂ ಕುದಿಯಿತು. ಅವರುಗಳು ಧನಂಜಯನ ಅಡಿಗೆಯವ, ಆಳು, ದಾಸಿಗಳು ಅಂತೂ ಎದುರಿಗೆ ಸಿಕ್ಕಿದವರನ್ನೆಲ್ಲ ತಿವಿದು ಕೊಂದು ಆ ಬೆಂಕಿಯಲ್ಲಿ

ಬಿಸಾಡಲಾರಂಭಿಸಿದರು. ಈ ರೀತಿಯಲ್ಲಿ 'ರಾಯ್' ವಂಶೀಯರ ವಂಶಾನುಗತ ಮನೆಯಲ್ಲಿ ಮೇಲೆ ಅಗ್ನಿಪ್ರವಾಹ, ಕೆಳಗೆ ರಕ್ತಪ್ರವಾಹ. ಆ ಸಮಯದಲ್ಲಿ ಬಲವಾದ ಗಾಳಿ ಬೀಸಲಾರಂಭಿಸಿತು. ಅದರೊಡನೆಯೇ ಭೂಕಂಪ. ಎಲ್ಲವೂ ಮುಗಿದನಂತರ ರತ್ನಮಯಿ ಅದೇ ಬೆಂಕಿಯಲ್ಲಿ ಧುಮುಕಿ ಪ್ರಾಣ ಬಿಟ್ಟಳು.

ರುದ್ರಪುರ ಪೂರ್ಣವಾಗಿ ಧ್ವಂಸವಾಗಿದೆ. ಇಂದು ಕೇವಲ ಕಿರೀಟಚಂದ್ರನ ರೋದನ ಮತ್ತು ರತ್ನಮಯಿಯ ಉನ್ಮತ್ತ ನಗು ಇದೇ ಅಲ್ಲಿಯ ಆಕಾಶ ವಾಯುಗಳಲ್ಲಿ ತುಂಬಿರುವುದು.

# ಮರಾಠಿ ಸಾಹಿತ್ಯ

ಮರಾಠಿ ಸಾಹಿತ್ಯ ಕ್ರಿ.ಶ. ೯ನೆಯ ಶತಮಾನದಿಂದ ಆರಂಭವಾಯಿತೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರಾದರೂ ೧೨ನೆಯ ಶತಮಾನದ ಮುಕುಂದರಾಜನ ಕೃತಿಗಳೇ ಮರಾಠಿ ಸಾಹಿತ್ಯದ ಮೊದಲನೆಯ ಕೃತಿಗಳಾಗಿವೆ. ಇವನು ‘ವಿವೇಕ ಸಿಂಧು’, ‘ಪರಮಾಮೃತ’ವೆಂಬ ವೇದಾಂತ ಗ್ರಂಥಗಳನ್ನು ಬರೆದಿದ್ದಾನೆ. ೧೨ನೆಯ ಶತಮಾನದಲ್ಲಿ ಮಹಾನುಭವ ಪಂಥದ ಸಾಹಿತ್ಯ ವಿಪುಲವಾಗಿ ಸೃಷ್ಟಿಯಾಯಿತು. ಮರಾಠಿಯಲ್ಲಿ ಗದ್ಯಸಾಹಿತ್ಯ ಆರಂಭವಾದುದು ಇವರಿಂದಲೇ. ೧೩ನೆಯ ಶತಮಾನದಲ್ಲಿ ಜ್ಞಾನೇಶ್ವರ ‘ಜ್ಞಾನೇಶ್ವರಿ’ಯನ್ನು (ಗೀತಾರ್ಥಸಾರ) ಬರೆದ. ಅವನ ಸೋದರರು ಪ್ರವೃತ್ತಿನಾಥ, ಸೋಪಾನದೇವ ಮತ್ತು ಸೋದರಿ ಮುಕ್ತಾಬಾಯಿ ಕೆಲವು ಅಭಂಗಗಳನ್ನು ರಚಿಸಿದ್ದಾರೆ. ೧೪ನೆಯ ಶತಮಾನದಲ್ಲಿ ನಾಮದೇವ ಸಹಸ್ರಾರು ಅಭಂಗಗಳನ್ನು ಬರೆದು ಅಭಂಗಕಾರರ ಮಾರ್ಗದರ್ಶಕನಾದ. ೧೬ನೆಯ ಶತಮಾನದಲ್ಲಿ ಏಕನಾಥ ಅಭಂಗಗಳನ್ನೂ ಪದಗಳನ್ನೂ ಬರೆದ. ಶ್ರೀಮದ್‌ಭಾಗವತದ ೧೧ನೆಯ ಸ್ಕಂದದ ಮೇಲೆ ಮರಾಠಿ ವ್ಯಾಖ್ಯಾನವನ್ನೂ ರಚಿಸಿದ. ಮರಾಠಿಗೆ ವೈಶಿಷ್ಟ್ಯವನ್ನು ಕಲ್ಪಿಸಿಕೊಟ್ಟು ಸಂಸ್ಕೃತದ ಹೊಡೆತವನ್ನು ತಡೆಗಟ್ಟಲು ಏಕನಾಥ ತುಂಬ ಪ್ರಯತ್ನಿಸಿದ. ಜ್ಞಾನೇಶ್ವರನ ‘ಜ್ಞಾನೇಶ್ವರಿ’ಯ ಹರಿದು ಹಂಚಿಹೋದ ಹಾಳೆಗಳನ್ನು ಸಂಗ್ರಹಿಸಿ ಅದನ್ನು ಪರಿಷ್ಕರಿಸಿದ ಕೀರ್ತಿ ಏಕನಾಥನದು. ಹೆಚ್ಚುಕಡಿಮೆ ಇವನ ಸಮಕಾಲೀನರಾದ ದಾಸೋಪಂತ, ಗಂಗಾಧರ ಸ್ವಾಮಿ, ಆನಂದತಾನ್ಯಾ, ರಘುನಾಥ ಪಂಡಿತ ಮರಾಠಿ ಸಾಹಿತ್ಯವನ್ನು ನಾನಾಮುಖದಲ್ಲಿ ಬೆಳಸಿದರು. ೧೭ನೆಯ ಶತಮಾನ ಮತ್ತು ೧೮ನೆಯ ಶತಮಾನಗಳನ್ನು ಮರಾಠಿ ಸಾಹಿತ್ಯದ ‘ಸುವರ್ಣಯುಗ’ವೆಂದು ವಿದ್ವಾಂಸರು ಪರಿಗಣಿಸುತ್ತಾರೆ. ಈ ಕಾಲದಲ್ಲಿ ರಾಮದಾಸ್, ತುಕಾರಾಂ ಮತ್ತು ಮುಕ್ತೇಶ್ವರರು ವರ್ಧಿಸಿದರು. ಶಿವಾಜಿಯ ಗುರುವಾದ ಸಮರ್ಥ

ರಾಮದಾಸಸ್ವಾಮಿ 'ದಾಸಬೋಧ'ವನ್ನೂ ತುಕಾರಾಂ ಲಕ್ಷಾಂತರ ಅಭಂಗ ಗಳನ್ನೂ ಮುಕ್ತೇಶ್ವರ ರಾಮಾಯಣ ಮಹಾಭಾರತಗಳನ್ನೂ ರಚಿಸಿದ್ದಾರೆ. ಮರಾಠಿ ಸಾಹಿತ್ಯವನ್ನು ಮನೆಮನೆಗೆ ಕೊಂಡೊಯ್ದು, ಜಾನಪದ ಶಿಕ್ಷಣದ ವಾಹಕವನ್ನಾಗ ಮಾಡಿದ ಕೀರ್ತಿ ತುಕಾರಾಮನದು. ಶ್ರೀರಾಮ ಭಂಗ ವಾಗುವ ಸೇತುವೆಯನ್ನು ಕಟ್ಟಿದರೆ ತುಕಾರಾಮ ಅಭಂಗವಾದ ಸೇತುವೆ ಯನ್ನು ಕಟ್ಟಿದ ಎಂಬ ನಾಣ್ಣುಡಿ ಅವನ ಬಗ್ಗೆ ಪ್ರಸಾರದಲ್ಲಿದೆ. ಮುಕ್ತೇ ಶ್ವರನ ಮಹಾಭಾರತ ವೀರರಸಕ್ಕೆ ಪ್ರಸಿದ್ಧಿಯಾಗಿದೆ. ೧೭ನೆಯ ಶತಮಾ ನಾಂತ್ಯದಲ್ಲಿ ವಾಮನಪಂಡಿತ 'ರುಕ್ಮಿಣಿ ವಿಲಾಸ' ಕಾವ್ಯವನ್ನೂ ಭಾಗವತದ ಕಥೆಗಳ ಆಧಾರದ ಮೇಲೆ ಕೆಲವು ಕಾವ್ಯಗಳನ್ನೂ ರಚಿಸಿದ. ೧೭ನೆಯ ಶತಮಾನದಲ್ಲಿ ಶ್ರೀಧರ ರಾಮವಿಜಯ, ಪಾಂಡವ ಪ್ರತಾಪ, ಹರಿವಿಲಾಸವೆಂಬ ಮೂರು ಕಾವ್ಯಗಳನ್ನು ರಚಿಸಿದ. ಇದೇ ಶತಮಾನಕ್ಕೆ ಸೇರಿದ ಅಮೃತರಾಯ್, ಸೋಹಿರೋಬಾ, ಮಹೀಪತಿ ಕಥನಕವನ ಗಳನ್ನೂ ಸಂತರ ಚರಿತ್ರೆಗಳನ್ನೂ ಹಾಡುಗಬ್ಬಗಳಾಗಿ ಬರೆದರು. ೧೭ನೆಯ ಶತಮಾನದ ಕಾವ್ಯಾಕಾಶದಲ್ಲಿನ ಧ್ರುವತಾರೆಯೆಂದರೆ ಮೋರೋಪಂತ. ಭಾರತದ ೧೮ ಪರ್ವಗಳನ್ನೂ ಭಾಗವತದ ಕೆಲವು ಭಾಗಗಳನ್ನೂ ಇವನು ಮರಾಠಿಯಲ್ಲಿ ಬರೆದಿದ್ದಾನೆ. ಹಲವು ಸಣ್ಣಪುಟ್ಟ ರಾಮಾಯಣಗಳನ್ನು ಬರೆದಿದ್ದಾನೆ. ೧೮ನೆಯ ಶತಮಾನದ ರಾಮಜೋಶಿ, ಅನಂತಫಂಡಿ ಯವರ ಲಾವಣಿಗಳು ಪ್ರಸಿದ್ಧವಾಗಿವೆ. ಮರಾಠಿಯಲ್ಲಿ ಪಾವುಡಗಳೆಂಬ ವೀರಗೀತೆಗಳೂ, ಬಖೈರುಗಳೆಂಬ ಇತಿಹಾಸ ವೃತ್ತಗಳೂ ಕಾಲಕಾಲಕ್ಕೆ ಪ್ರಕಟವಾಗಿವೆ.

ಕಥಾ ಸಾಹಿತ್ಯ ಮರಾಠಿಯಲ್ಲಿ ಇಂಗ್ಲಿಷಿನ ಸಹವಾಸವಾದಂದಿ ನಿಂದ ಪ್ರಾರಂಭವಾಯಿತು. ಮೊದಲು ಸದಾಶಿವ ಕಾಶೀನಾಥ ಛತ್ರೆ ಯವರು 'ಬಾಹಮಿತ್ರ'ವೆಂಬ ಕತೆಯನ್ನು ಒಂದು ಇಂಗ್ಲಿಷ್ ಕತೆಯ ಆಧಾರದಿಂದ ಬರೆದರು. ಅವರಿಗಿಂತಲೂ ಪೂರ್ವದಲ್ಲಿ ೧೮೩೧ರಲ್ಲಿ ಚಿಪಳೂಣಕರ ಕೃಷ್ಣಶಾಸ್ತ್ರಿಗಳು ಅರಬೀ ಭಾಷೆಯ ಕತೆಗಳನ್ನು ತಮ್ಮ ಸರಸವಾದ ಶೈಲಿಯಲ್ಲಿ ಮರಾಠಿಗೆ ತಂದರು. ಕತೆಗಳನ್ನು ಸರಸವಾಗಿ ಬರೆದು ಜನತೆಯಲ್ಲಿ ಕತೆಗಳ ಬಗ್ಗೆ ರುಚಿಯನ್ನು ಹುಟ್ಟಿಸಿದವರಲ್ಲಿ ಹರಿ

ಭಾವು ಆಪಟೆಯವರು ಪ್ರಮುಖರು. ಕತೆ ಮತ್ತು ಕಾದಂಬರಿಯ ನಡುವೆ ಇದ್ದ ಅಂತರವನ್ನು ತೋರಿಸಿದವರೂ ಇವರೇ. ಆದರೆ ಇವರ ಕತೆಗಳಲ್ಲಿ ಸಣ್ಣಕತೆಯ ಸ್ವರೂಪ ಅಷ್ಟುಚೆನ್ನಾಗಿ ಅರಳಿಬಂದಿಲ್ಲ. ಇವರ ಬಳಿಕ ಸಮಾಜ ಸುಧಾರಣೆಯ ದೃಷ್ಟಿಯಿಂದ, ಕತೆಯನ್ನು ಬರೆದವರು 'ಸಹಕಾರೀ ಕೃಷ್ಣ'ರು. ತರುವಾಯ ಇದೇ ಕ್ಷೇತ್ರದಲ್ಲಿ ಕೀರ್ತಿಹೊಂದಿದ ವರು ಶಾ. ರ. ಮಿತ್ರರು.

ಮರಾಠಿಗೂ ಇತರ ಭಾಷೆಗಳಿಂದ ಅನುವಾದಿತವಾಗಿ ಅನೇಕ ಕತೆಗಳು ಬರಲಾರಂಭಿಸಿದವು. ಇತರ ಭಾಷೆಯ ಕತೆಗಳಿಗೆ ಮರಾಠಿ ಭಾಷೆಯ ಉಡುಪನ್ನು ತೊಡಿಸಿ ಕತೆಗಳನ್ನು ಬರೆದರು. ಈ ಬಗೆಯ ಕಾರ್ಯದಲ್ಲಿ ಹೆಸರಾದವರು ಗುರ್ಜರ, ವಾ.ಗೊ. ಆಪಟೆ, ಹ.ಬಾ. ಅತ್ರೆ ಮೊದಲಾದವರು.

ಹರಿಭಾವುಗಳ ನಂತರ ಸಮಾಜ ಸುಧಾರಣೆಯ ಉಪದೇಶಮಾಡಲು ಹೊರಟವರಲ್ಲಿ ಪ್ರ. ಶ್ರೀ. ಕೋಲ್ಹಟಕರ, ಕಾ. ಕೆ. ಜೋಶಿ ಮುಖ್ಯರು. ಇವರ ಕತೆಗಳೂ ನೀಳ್ಗತೆಗಳೇ. ಇವರ ಹಾಗೆಯೆ ಕಥಾಕ್ಷೇತ್ರವನ್ನು ಪ್ರವೇಶಿಸಿದ ಮಹಿಳಾ ಲೇಖಿಕೆಯರಲ್ಲಿ ಕಾಶೀತಾಯಿ ಕಾನಟಕರರು ಮೊದಲಿಗರು. ಗಿರಿಜಾಬಾಯಿ ಕೇಳಕರ, ಆನಂದೀಬಾಯಿ ಶಿರ್ಕೆ ಮುಂತಾದ ಹೆಸರಾದ ಕಥಾಲೇಖಿಕೆಯರೂ ಸಮಾಜ ಸುಧಾರಣೆಯ ದೃಷ್ಟಿಯಿಟ್ಟುಕೊಂಡೇ ಕತೆಗಳನ್ನು ಬರೆದರು.

ಮರಾಠಿ ಸಾಹಿತ್ಯದ ಸವ್ಯಸಾಚಿಗಳಾದ ಶಿವರಾಮ ಪರಾಂಜಪೆ, ಕೃ. ಕೋಲ್ಹಟಕರ, ನ. ಚಿ. ಕೇಳಕರ, ವಾ. ಮ. ಜೋಶಿ ಮೊದಲಾದ ವರೂ ಕತೆಗಳನ್ನು ಬರೆದರು. ಆದರೆ ಪ್ರೊ. ಫಡಕೆಯವರು ಕಥಾ ಸಾಹಿತ್ಯಕ್ಕೆ ಕೈಹಾಕಿದಂದಿನಿಂದ ಮರಾಠಿ ಕಥಾ ಸಾಹಿತ್ಯವು ಬೇರೆ ಬಣ್ಣ ವನ್ನೇ ತಾಳಿತು. ಅವರ ಕೃತಿಗಳು ಹೆಚ್ಚು ಜನಮೆಚ್ಚುಗೆಗೆ ಪಾತ್ರ ವಾದವು. ಅವರ ಕಲೆಯಲ್ಲಿ ಸೂಕ್ಷ್ಮ ನಿರೀಕ್ಷಣೆ, ಸುಂದರ ಓಜಮಯ ಭಾಷೆ, ಪಾತ್ರಪರಿಪೋಷಣೆ ಕಂಡುಬರುವುದು. 'ತುರಂಗಾತೂನ ಸುಟಕಾ' 'ನ್ಯಾಯ' ಮೊದಲಾದ ಶ್ರೇಷ್ಠಕತೆಗಳು ಇದಕ್ಕೆ ಉದಾಹರಣೆ ಯಾಗಿವೆ.

ಪ್ರೊ. ಫಡಕೆಯವರ ಅನಂತರ ಸಣ್ಣಕತೆಯ ಕಲೆಯನ್ನು ಅರಳಿಸಲು ಯತ್ನಿಸಿದವರಲ್ಲಿ ವಿ. ಸ. ಖಾಂಡೇಕರರು ಅಗ್ರಗಣ್ಯರು. ಇವರ ಕತೆಗಳಲ್ಲಿ ಧ್ಯೇಯವಾದಕ್ಕೆ, ಅಂತಃಕರಣಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಕೀಳುಜಾತಿಯವರ ಜೀವನಚಿತ್ರಗಳು ಇವರ ಕತೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಕಥನಕಲೆಗೆ ಒಂದು ನಿರ್ದಿಷ್ಟರೂಪವನ್ನು ಕೊಟ್ಟವರು ಅನಂತ ಕಾಣೇಕರ್. ಇವರು ರಷ್ಯಾಕ್ಕೆ ಹೋಗಿ ಬಂದಿದ್ದಾರೆ. ರಷ್ಯಾ ಸಾಹಿತ್ಯದ ಪ್ರಭಾವ ಇವರ ಕಲೆಯ ಮೇಲೆ ಚೆನ್ನಾಗಿ ಕಾಣುವುದು. ಸಾಮಾಜಿಕ ಜೀವನ, ಸಮಸ್ಯೆಗಳನ್ನು ಎತ್ತಿಕೊಂಡು ಮಾರ್ಮಿಕವಾಗಿ ಬರೆಯುವುದರಲ್ಲಿ ಕಾಣೇಕರ್ ಅವರು ಕುಶಲರು. ಮಾಡ್ಗೋಲ್‌ಕರ್ ಇಂದಿನ ಮರಾಠಿ ಕತೆಗಾರರಲ್ಲಿ ಪ್ರಸಿದ್ಧರು. ಇವರದು 'ಕಲೆಗಾಗಿ ಕಲೆ'ಯ ವಾದ. ಹಾಡಪ್‌ರವರು ಪ್ರಗತಿಶೀಲ ಕತೆಗಾರರು ಸ್ಫೂರ್ತಿಗಾಗಿ ಜನತೆಯ ಬಾಳುವೆಯ ಕಡೆ ತಿರುಗಬೇಕೆಂಬುದು ಹಾಡಪ್‌ರವರ ವಾದ. ಇವರಲ್ಲದೆ ಮಾಮಾ ವರೇರ್‌ಕರ್, ದತ್ತಕವತೇಕರ್, ಸಾನೆ ಗುಡೂಜಿ, ಬೊಕಿಲ್ ಮತ್ತು ಶಕುಂತಲಾ ಪರಾಂಜಪೆ ಉತ್ತಮ ಕತೆಗಾರರಾಗಿದ್ದಾರೆ

## ವಿ. ಸ. ಖಾಂಡೇಕರ

ಇವರು ಕವಿಗಳು, ಲಘುಕಥಾ ಲೇಖಕರು; ನಾಟಕಕಾರರೂ ಹೌದು; ಕಾದಂಬರಿಕಾರರೂ ಹೌದು. ಇವರ ಜನ್ಮವು ಸಾಂಗಲಿಯಲ್ಲಿ ೧೮೯೮ರಲ್ಲಿ. ಇಂಟರ ವರೆಗೆ ವಿದ್ಯಾಭ್ಯಾಸ ಮಾಡಿರುವರು. ಶಿರೋಡೆಯಲ್ಲಿ ನ್ಯೂ ಇಂಗ್ಲಿಷ್ ಸ್ಕೂಲಿನ ಪ್ರಧಾನ ಅಧ್ಯಾಪಕರಾಗಿದ್ದರು. ಈಗ ಪೂನಾ ,ಮುಂಬಯಿ ಚಿತ್ರಪಟಗಳಿಗೆ ಕತೆ ಬರೆದುಕೊಡುವ ಉದ್ಯಮದಲ್ಲಿದ್ದಾರೆ. ಇವರ ಎಲ್ಲ ರಚನೆಗಳು ಜನರ ಮೆಚ್ಚುಗೆಗೆ ಹೆಚ್ಚು ಪಾತ್ರವಾಗಿವೆ. ಮನಮೋಹಕವಾದ ಸುಂದರವಾದ ಸರಳವಾದ ಶೈಲಿ, ಧ್ಯೇಯವಾದದ ವಿಚಾರ ಸರಣಿ, ಮನೋವಿಜ್ಞಾನದ ದೃಷ್ಟಿಯಿಂದ ಪರಿಪೂರ್ಣವಾದ ಕತೆ ಹೆಣೆವ ರೀತಿ ಇವರ ರಚನೆಗಳಲ್ಲಿ ಕಂಡುಬರುತ್ತವೆ. ಇವರ ರಚನೆಗಳಲ್ಲಿ ಕೀಳುವರ್ಗದವರ ಬಾಳಿನ ಕೊಳವನ್ನು ಕದಡಿ ವಿಚಾರತರಂಗಗಳನ್ನು ಎಬ್ಬಿಸುವ ಚಿತ್ರಗಳು ಹೆಚ್ಚಾಗಿವೆ. 'ದೋನಧ್ರುವ', 'ಹೃದಯಾಚೀ ಹಾಕ' ಕಾದಂಬರಿಗಳೂ 'ಉತ್ಕಾ', 'ನವಮಲ್ಲಿಕಾ', 'ದತ್ತಾರ ಮತ್ತು ಇತರ ಕತೆಗಳು' ಮೊದಲಾದ ಕಥಾ ಸಂಗ್ರಹಗಳೂ, 'ರಂಕಾಚೆ ರಾಜ್ಯ' ಮೊದಲಾದ ನಾಟಕಗಳೂ ಪ್ರಕಟವಾಗಿವೆ.

# ಇಂದು - ನಾಳೆ

ಅನುವಾದಕ : **ಹ. ಪಿ. ಜೋಶಿ**

ಚಿಕ್ಕಂದಿನಲ್ಲಿಯ ತೀರ ಕೆಲವೆ ಸಂಗತಿಗಳು ನೆನಪಿನಲ್ಲಿ ಉಳಿಯುತ್ತವೆ. ಆತ್ಮ ಚರಿತ್ರೆ ಬರೆಯುವವರು ತಾವು ತೊಟ್ಟಿಲಲ್ಲಿದ್ದಾಗಿನ ಚಿಕ್ಕಪುಟ್ಟ ಘಟನೆಗಳನ್ನು ಹೇಗೆ ನೆನೆನೆನೆದು ಹೇಳುವರೊ ನನಗಂತೂ ಆಶ್ಚರ್ಯ! ನನ್ನ ಚಿಕ್ಕಂದಿನಲ್ಲಿ ತಾಸಿಗೆ ಅರವತ್ತು ಗಳಿಗೆ, ದಿನಕ್ಕೆ ಇಪ್ಪತ್ತನಾಲ್ಕು ತಾಸು ವರುಷಕ್ಕೆ ಮೂರುನೂರಾ ಅರವತ್ತೈದು ದಿನ; ಆದರೂ ಕಾಲೇಜಿಗೆ ಹೋಗುವ ಮೊದಲಿನ ನನ್ನ ಆಯುಸ್ಸು ಒಂದು ತಿಂಗಳಷ್ಟು ತೀರ ಚಿಕ್ಕದೆನಿಸುವುದು ನನಗೆ. ಚಿಕ್ಕತನವೆಂದರೆ ಸ್ವಪ್ನಗಳದೊಂದು ಮಾಲಿಕೆಯೆ ಅಲ್ಲವೆ? ಇಡೀ ರಾತ್ರಿ ಕನಸುಗಳು ಬೀಳುತಿದ್ದು ಬೆಳಗ್ಗೆ ಒಂದೂ ನೆನಪಿಗೆ ಬಾರದಾಗಬೇಕೆಂಬ ಅನುಭವ ಯಾರಿಗಿರಲಾರದು?

ಸ್ವಪ್ನಗಳಲ್ಲಿಯೂ ಕೆಲವು ಮಸಕುಮಸಕಾಗಿ ನೆನಪಿಗೆ ಬರುತ್ತಿದ್ದರೂ ಅದರಂ ನೆಳಲು ಮಾತ್ರ ದಟ್ಟವಾಗಿ ಮನದಮೇಲೆ ಬೀಳುವುದು. ಗಾಳಿಯ ಸುಳುವಿನಿಂದ ಹೊರಟ ಸುಗಂಧದಂತೆ ಮನವನ್ನು ಮೋಹಿಸುವುದು. ಹೆಜ್ಜೆಂ ಕಿವಿಗೆ ಕೇಳಿಬರಬೇಕು, ಮನುಷ್ಯ ಮಾತ್ರ ಕಣ್ಣಿಗೆ ಬೀಳಬಾರದು — ಹೀಗಾಗುವುದು ಮನದ ಸ್ಥಿತಿ ಇಂಥ ವೇಳೆಗೆ!

ಅಣ್ಣನ ಬಗೆಗೆ ನನ್ನ ನೆನಹು ಈ ಬಗೆಯದಾಗಿವೆ. ನನಗೆ ಎಂಟು ಒಂಬತ್ತು ವಯಸ್ಸಿರಬಹುದು. ಆಗ ಅಣ್ಣ ಮೆಡಿಕಲ್ ಕಾಲೇಜಿನಲ್ಲಿ ಕೊನೆಯ ಪರೀಕ್ಷೆಗಾಗಿ ಓದುತ್ತಿದ್ದ. ಆತನು ನನ್ನ ಮಲ ಅಣ್ಣನೆಂದು ಯಾರಾದರೂ ಹೇಳಿದರೆ ಹಾಗೆ ಹೇಳಿದವನ ಮೇಲೆ ನನಗೆ ಸಿಟ್ಟು ಬರುತ್ತಿತ್ತು. ಅವ್ವ ಆತನೊಂದಿಗೆ ಹೆಚ್ಚು ಮಾತನಾಡುತ್ತಿರಲಿಲ್ಲ. ಆದರೆ ಅಣ್ಣನೆಂದರೆ ನಾನು ಜೀವ ಕಳೆದುಕೊಳ್ಳುತ್ತಿದ್ದೆ. ಸೂಟಿಯಲ್ಲಿ

ಮನೆಗೆ ಬಂದಾಗ ಆತನು ನನಗೆ ಸೊಗಸಾದ ಇಂಗ್ರೇಜಿ ಕವಿತೆಗಳನ್ನು ಕಲಿಸುತ್ತಿದ್ದ, ನದಿಗೆ ಈಸಾಡಲಿಕ್ಕೆ ಕರೆದೊಯ್ಯುತ್ತಿದ್ದ. ಮಾವಿನ ಗಿಡಗಳಿಂದ ಮಿಡಿಗಾಯಿಗಳನ್ನು ತೆಗೆದುಕೊಡುತ್ತಿದ್ದ. ಮತ್ತು ತನ್ನ ಎರಡೂ ಕೈಗಳಲ್ಲಿ ನನ್ನ ಮುಖ ಹಿಡಿದು ನನ್ನೆಡೆಗೆ ನೇರವಾಗಿ ನೋಡುತ್ತ ನಿಲ್ಲುತ್ತಿದ್ದ.

"ಏನು ನೋಡುತ್ತಿ, ಅಣ್ಣಾ?" ನಾನು ಕೇಳುತ್ತಿದ್ದೆ.

ಆತನು ಉತ್ತರ ಕೊಡುತ್ತಿದ್ದ, "ನಿನ್ನ ಭವಿಷ್ಯ!"

ನಾನು ಮೂಗು ಮುರಿದು ಉತ್ತರ ಕೊಡುತ್ತಿದ್ದೆ "ಹಾಗಾದರೆ ನನ್ನ ಕೈಯ್ಯನ್ನಾದರೂ ನೋಡಬಾರದೆ?"

"ಈ ಭವಿಷ್ಯ ಕೈನೋಡಿ ತಿಳಿಯುವುದಲ್ಲ! ಕಣ್ಣುಗಳ ಮೇಲಿಂದ ತಿಳಿಯುವುದು! ಯಾವನಾದರೊಬ್ಬನು ಮುಂದೆ ಏನಾಗುವನೆಂಬುದು–"

"ನಾನೇನಾಗತಕ್ಕವನಿದ್ದೇನೆ?"

"ನೀನೇ ಹೇಳಬಾರದೆ?"

"ನಾನು ಮೋಟಾರಿನವನಾಗತಕ್ಕವನಿದ್ದೇನೆ!"

ಅಣ್ಣನ ಮುಖಮುದ್ರೆಯಿಂದ ಈ ನನ್ನ ದೊಡ್ಡ ಮಹತ್ವಾಕಾಂಕ್ಷೆ ಆತನಿಗೆ ಸರಿದೋರಲಾರದೆಂದೆನಿಸಿ ಕೂಡಲೆ ನನಗೆ ಒಳ್ಳೆಯ ಪೇಚು ಬಿದ್ದಂತಾಗುತ್ತಿತ್ತು. ಅಣ್ಣನ ಮನಕ್ಕೆ ವಿರುದ್ಧವಾಗಿ ನಡೆಯುವುದು ನನಗೆ ಜೀವದ ಸುತ್ತುಬಂದಂತಾಗುತ್ತಿದ್ದಿತು. ಆದರೆ ಮೋಟಾರಿನವನಾಗುವುದನ್ನು ಬಿಟ್ಟುಕೊಡುವುದೂ ಅಷ್ಟೇ ಕಠಿನವೆಂದೆನಿಸುತ್ತಿದ್ದಿತು. ಹಕ್ಕಿಗಳಂತೆ ಭರ್‍ರನೆ ಸಾಗುವ ಆ ಗಾಡಿ, ದಾರಿಯಲ್ಲಿಯ ಹಳ್ಳಿಗರನ್ನು ಗೊಂದಲಪಡಿಸುವ ಕಿವಿ ಮರಗುಡಿಸುವ ಆ ತುತೂರಿ, ಗಾಲಿಯ ಮೇಲೆ ಒಂದೇ ಒಂದು ಕೈಯಿಟ್ಟು ಝೋಕಾಗಿ ಅದನ್ನು ಹೊರಳಿಸುವ ಆ ಡ್ರೈವರ್ –

ಅಣ್ಣನೆನ್ನುತ್ತಿದ್ದ, "ಮಗು, ಇತಿಹಾಸದಲ್ಲಿ ನೀನು ಮೆಚ್ಚುವುದು ಯಾರನ್ನು?"

ಆಗ್ರಾದಿಂದ ಬುಟ್ಟಿಯಲ್ಲಿ ಅಡಗಿಕೊಂಡು ಪಾರಾದ ಶಿವಾಜಿ, ಉಡದ ಸಹಾಯದಿಂದ ಸಿಂಹಗಡವನ್ನೇರಿಹೋದ ತಾನಾಜಿ, ದಿಲ್ಲಿಯ

ಸಿಂಹಾಸನವನ್ನು ಸೆಳೆದ ಸದಾಶಿವರಾವ ಭಾವು, ಅಡ್ಡಗಟ್ಟಿದ ಶತ್ರುಗಳ ಗೋಡೆಯನ್ನು ಸೀಳಿ ಸಾಗಿದ ಝಾನ್ಸಿಯ ಲಕ್ಷ್ಮೀಬಾಯಿ, ಈ ಎಲ್ಲರ ವಿಷಯದಲ್ಲೂ ನನಗೆ ಪ್ರೀತಿಯೆನಿಸುತ್ತಿದ್ದಿತು! ಆದರೂ ಈ ಯಾರೂ ಮೋಟಾರಿನವನಿಗೆ ಸರಿಜೋಡಾಗಲಾರರೆಂದು ಮನಸ್ಸಿನಲ್ಲಿ ಬರುತ್ತಿದ್ದಿತು.

ನಾನು ಸುಮ್ಮನೆ ಕುಳಿತರೆ ಅಣ್ಣನೆನ್ನುತ್ತಿದ್ದ,

"ನೀನು ಇತಿಹಾಸದಲ್ಲಿ ನಾಪಾಸಾಗುತ್ತಿರಬೇಕು!"

ವರುಷದ ಪರೀಕ್ಷೆಯೊಳಗೆ ಇತಿಹಾಸದಲ್ಲಿ ಎಪ್ಪತ್ತು ಮಾರ್ಕು ಗಳನ್ನು ಕಾಪಿ ಮಾಡಿ ದೊರಕಿಸಲಿಲ್ಲವೆಂದು ನಾನು ಆತನಿಗೆ ಒಳ್ಳೆಯ ಅಭಿಮಾನದಿಂದ ಹೇಳುತ್ತಿದ್ದೆ.

ಆತನು ನನ್ನ ಬೆನ್ನು ಚಪ್ಪರಿಸಿ ಹೇಳುತ್ತಿದ್ದ, "ಮಗು, ಈ ಮಾರ್ಕು ಗಳದೇನೂ ನಿಜವಾದ ಪರೀಕ್ಷೆಯಲ್ಲ".

ನನಗೆ ಅಣ್ಣನ ಮಾತು ಕೇಳಿ ರೇಗುತ್ತಿದ್ದಿತು. ಆತನು ಹೇಳುತ್ತಿದ್ದ:

"ಚಿಕ್ಕಂದಿನಲ್ಲಿ ಇತಿಹಾಸದ ಪರೀಕ್ಷೆಯಾಗಲಾರದು. ನೀನು ನನ್ನಷ್ಟು ದೊಡ್ಡವನಾದಾಗ ನಿನ್ನ ಪರೀಕ್ಷೆಗೆ ಪ್ರಾರಂಭವಾಗುವುದು. ನಮ್ಮ ದೇಶದ ಇತಿಹಾಸವಿನ್ನೂ ಆಗಲಿದೆ!"

ಆತನು ಮಾತನಾಡಿಯೆ ಆಡುತ್ತಿದ್ದ. ನನಗೆ ಬೇಸರವಾಗುತ್ತಿತ್ತು. ಆತನ ಕೊರಳಿಗೆ ಬಿದ್ದು ಹೇಳುತ್ತಿದ್ದೆ, "ಆ ಇಂಗ್ರೇಜಿ ಹಾಡನ್ನು ಹಾಡ ಬಾರದೆ ಅಣ್ಣಾ!"

ಆ ಹಾಡು ನನಗೆ ಬಹಳ ಸೇರುತ್ತಿತ್ತು. ಬೆಕ್ಕಿನ ಕೊರಳಿನಲ್ಲಿ ಗಂಟೆ ಕಟ್ಟಬೇಕೆಂದು ಇಲಿಗಳ ದೊಡ್ಡ ಸಭೆಯೊಂದರಲ್ಲಿ ಗೊತ್ತುವಳಿ ಪಾಸಾಗುವುದು. ಆದರೆ ಆ ಗಂಟೆಯನ್ನು ಕಟ್ಟತಕ್ಕವರು ಯಾರು ಎಂಬುದೊಂದು ಪ್ರಶ್ನೆ ಸಭೆಯಲ್ಲಿ ಹೊರಡುವುದು. ಎಲ್ಲ ಇಲಿಗಳೂ ಓಡಿ ಹೋಗುವುವು. ಕೊನೆಗೆ ಮೇಜಿನ ಮೇಲೆ ಉಳಿದುದು ಗಂಟೆ ಯೊಂದೇ ಎಂಬುದಾಗಿ ಮೇಜಿನ ವರ್ಣನೆ ಆ ಕವಿತೆಯಲ್ಲಿದ್ದಿತು!

ಹಾಡು ಮುಗಿದನಂತರ ನಾನು ಅಣ್ಣನಿಗೆ ಹೇಳುತ್ತಿದ್ದೆ.

"ಅಣ್ಣಾ, ಎಲ್ಲ ಇಲಿಗಳು ಒಮ್ಮೆಲೆ ಬೆಕ್ಕಿನ ಮೇಲೇ ಸಾಗಿ ಹೋಗಿದ್ದರೆ, ಅದರ ಕೊರಳಲ್ಲಿ ಗಂಟೆಯನ್ನು ಕಟ್ಟಲಿಕ್ಕೆ ಬರುತ್ತಿದ್ದಿತು.

ಅಲ್ಲವೆ ? ಮುಂದಿದ್ದ ಕೆಲವು ಇಲಿಗಳು ಸಾಯುತ್ತಿದ್ದವು ಅಷ್ಟೆ! ಆದರೆ ಆಮೇಲೆ, ಉಳಿದವುಗಳಿಗೆ ,ಭಯ ಉಳಿಯುತ್ತಿರಲಿಲ್ಲ!!"

"ನನ್ನ ತಲೆಯನ್ನು ತನ್ನ ಹೆಗಲ ಕಡೆಗೆಳೆದು ನನ್ನ ಕೂದಲಿನ ಮೇಲೆ ಕೈಯಾಡಿಸುತ್ತ, ಅಣ್ಣ ಅನ್ನುತ್ತಿದ್ದ "ಹೀಗೆಯೇ ಜಾಣನಾಗ ಬೇಕು, ಮಗು."

*                *                *

• ಅಣ್ಣನ ಈ ಬಗೆಯ ಮಾತಿನ ಅರ್ಥ ನನಗೆ ಆಗ ಆಗುತ್ತಿರಲೇ ಇಲ್ಲ. ಆತನು ವರ್ತಮಾನ ಪತ್ರಗಳನ್ನು ಹೆಚ್ಚಾಗಿ ಓದುತ್ತಿದ್ದನೆಂದು ತಂದೆಯವರು ರೇಗುತ್ತಿದ್ದರು. ಎಂದೋ ಒಮ್ಮೆ ಆತ ನಾಪಾಸಾಗಿದ್ದ. ಆ ಮಾತು ಮತ್ತೆ ಮತ್ತೆ ಕೆದಕಿ ಅವ್ವ "ಈ ವರುಷ ಡಾಕ್ಟರನಾಗುತ್ತಿದ್ದ. ಎಲ್ಲಿದೆ ಆತನ ಲಕ್ಷ್ಯ ಓದುವ ಕಡೆಗೆ? ಆ ಟಿಳಕರೂ, ಆ ಕಾಂಗ್ರೆಸ್ಸೂ ನಮ್ಮ ಹೊಟ್ಟೆತುಂಬಲಿಕ್ಕೆ ಬರುತ್ತವೆಯೇನು? ಮನೆಗೆ ಬರುವ ಪೈ, ಕಾಸೂ ಈತನ ಓದಿಗಾಗಿ ವೆಚ್ಚವಾಗುತ್ತದೆ. ನನ್ನ ಕಂದನ ಗತಿ ಏನೆಂಬು ದನ್ನು ದೇವರೇ ಬಲ್ಲ!" ಎನ್ನುತ್ತಿದ್ದಳು.

ಇಂಥಾ ಸ್ವಗತ ಭಾಷಣಗಳನ್ನು ಬೇಕೆಂತಲೇ ಅವ್ವ ಗಟ್ಟಿಯಾಗಿ ಮಾಡುತ್ತಿದ್ದಳು. ಆದರೆ ಅಣ್ಣ ತನಗೆ ಅದು ಸ್ವಲ್ಪವೂ ಕೇಳಿಬರಲಿಲ್ಲ ವೆಂಬಂತೆ ನಟಿಸುತ್ತಿದ್ದ. ಅಣ್ಣನಿಗೆ ಚುಚ್ಚಿ ಮಾತನಾಡಬೇಕೆಂದು ಅವ್ವ ಹೀಗೆ ಮಾತಾಡಿದಾಗ ನನಗೆ ಬಲು ಕೆಡಕೆನಿಸುತ್ತಿತ್ತು. ನಾನು ಆತನ ಕೋಣೆಯ ಕಡೆಗೆ ಹೋಗಿ 'ಅಣ್ಣಾ, ನಿನಗೊಂದು ಮೋಜು ಹೇಳಲೆ.' ಎನ್ನುತ್ತಿದ್ದೆ.

"ಹೂ"

"ಕಿವಿ ಹೊರಳಿಸು ಇತ್ತ."

"ಅಣ್ಣನ ಕಿವಿ ಹಿಂಡುವುದಿದೆಯೋ ಏನೊ ?"

"ಹೀಗೇಕೋ ಅಣ್ಣಾ, ಒಳ್ಳೆಯ ಮೋಜು ಹೇಳುವೆ ನಿನಗೆ"

"ಒಳ್ಳೆ ಗುಟ್ಟಿನ ಮಾತಿದ್ದಂತಿದೆ"

"ಹೊ"

ಕ್ಷಣಹೊತ್ತು ಅಣ್ಣನ ಕಣ್ಣುಗಳು ತೀರ ಬದಲಾಯಿಸಿದಂತೆ

ತೋರುತ್ತಿದ್ದವು. ಹಸಿದ ಬೆಕ್ಕಿನ ಮರಿಗೆ ಹಾಲುಣಿಸಿದರೆ ಹೇಗೆ ಸಮಾಧಾನದಿಂದ ಅದು ನೋಡುವುದೋ ಹಾಗೆಯೇ ಆತ ನನ್ನೆಡೆಗೆ ನೋಡುತ್ತ ಕುಳಿತುಕೊಳ್ಳುತ್ತಿದ್ದ. ತತ್‍ಕ್ಷಣ ಸವರಿಸಿಕೊಂಡು, ಆತ ಅನ್ನುತ್ತಿದ್ದ:

"ಮಗು, ಎರಡು ವಸ್ತು ಎಂದೂ ಕೆಟ್ಟವಾಗಿರುವುದಿಲ್ಲ—ಒಂದು ತಾಯಿ—"

"ಮತ್ತೊಂದು ?" ನಾನು ಅಧೀರನಾಗಿ ಕೇಳುತ್ತಿದ್ದೆ. ನನ್ನ ಚಿಕ್ಕ ಮನಸ್ಸಿಗೆ ಆ ಇನ್ನೊಂದು ವಸ್ತು ಅಣ್ಣನೇ ಇದ್ದಿರಬೇಕೆಂದು ತೋರುತ್ತಿತ್ತು !

ಅಣ್ಣನು ಉತ್ತರ ಕೊಡುತ್ತಿದ್ದ.

"ಎರಡನೆಯದು, ನಮ್ಮ ಜನ್ಮ ಭೂಮಿ"

* *

ಮುಂದೆ ತುಸು ದಿನಗಳಲ್ಲಿ ತಂದೆಯವರಿಗೂ ಆತನಿಗೂ ಜಗಳವಾಯಿತು. ಅಂದು 'ಜನ್ಮಭೂಮಿ' ಎಂಬ ಶಬ್ದದ ನೆನಪು ಹೆಚ್ಚಾಗಿ ಆಯಿತು.

ಸೂಟಿಯಿಲ್ಲದಾಗ ಅಣ್ಣಾ ಒಂದು ದಿನ ಮನೆಗೆ ಬಂದ. ಆತ ಕಾಲೇಜು ಬಿಟ್ಟು ಬಂದಿದ್ದನಂತೆ. ನನಗೆನಿಸಿತು; ಇಲ್ಲಿ ಶಾಲೆಯಲ್ಲಿಯೆ ಮಾಸ್ತರರು ಅದೆಷ್ಟು ಹೊಡೆಯುತ್ತಿದ್ದರು, ಎಂದ ಬಳಿಕ ಕಾಲೇಜಿನಲ್ಲಿಯ ದೊಡ್ಡ ಮಾಸ್ತರರು ದೊಡ್ಡ ಹುಡುಗರನ್ನು ಅದೆಷ್ಟು ಹೊಡೆಯುತ್ತಿರಬೇಕೊ ಯಾರು ಬಲ್ಲರು ! ಬೆತ್ತದ ಬದಲಾಗಿ ಬಾರಕೋಲನ್ನೆ ತೆಗೆದುಕೊಳ್ಳುತ್ತಿರಬೇಕು ಅಲ್ಲಿಯ ಮಾಸ್ತರರು ! ಅಣ್ಣನು ಕಾಲೇಜು ಬಿಟ್ಟು ನೆಟ್ಟಗೆ ಮಾಡಿದನೆಂದು ನನಗೆ ಅನಿಸಿತು. ಈ ಆನಂದದಲ್ಲಿ ಸ್ವಾರ್ಥದ ಭಾಗ ಕಡಿಮೆಯಿರಲಿಲ್ಲ ! ವರುಷಕ್ಕೊಮ್ಮೆ ಒಂದೊ ಎರಡೊ ತಿಂಗಳು ನನಗೆ ಅಣ್ಣನೊಂದಿಗೆ ಇರಲಿಕ್ಕೆ ಸಿಗುತ್ತಿತ್ತು. ಇನ್ನು ಅಣ್ಣಾ ಇಲ್ಲಿಯೇ ಉಳಿಯುವನು ಮತ್ತು ಹನ್ನೆರಡೂ ತಿಂಗಳು ನನಗೆ ಆತನೊಂದಿಗೆ ಆಡಲಿಕ್ಕೆ ದೊರೆಯುವುದು ಎಂದು ಮುಂತಾಗಿ ಮನಸಿನಲ್ಲಿಯೆ ಮಂಡಿಗೆ ಮಾಡತೊಡಗಿದೆ.

ಅವ್ವ ಮತ್ತು ತಂದೆ ಇಬ್ಬರೂ ಈ ಸುಖಕ್ಕೆ ಶತ್ರುಗಳಾದರು. ಅವ್ವ ಅಣ್ಣನಿಗೆ ಮೊದಲು ಮನ ಬಂದಂತೆ ಅಂದುಕೊಂಡಳು. "ಎಲ್ಲ ದುಡ್ಡು ನೀರಲ್ಲಿ ಹೋಯಿತು! ಕುರುಡು ಕಾಂಚಾಣ ಕೈಗೆ ಬಂತು, ನನ್ನ ಕಂದನ ಕೈಗೆ ಜೋಳಿಗೆ . . ". ಒಂದಲ್ಲ ಎರಡಲ್ಲ, ಆಕೆ ಹಾಗೇ ಬಡಬಡಸಿದಳು. ರೇಗಿಕೊಳ್ಳುತ್ತ ಆಕೆ ಅಡಿಗೆಯ ಮನೆಗೆ ನಡೆದಳು. ಆಕೆ ಅಂದ ದ್ದನ್ನೆಲ್ಲ ಅಣ್ಣ ಸುಮ್ಮನೆ ಕೇಳಿಕೊಂಡಿದ್ದ. ತಂದೆಯವರು ಧಡ ಧಡ ಮಾತನಾಡಿದಾಗ ಬಾಯಿ ಬಿಚ್ಚಿದ.

ಆಗಿನ ಆ ಎಲ್ಲ ಮಾತುಕತೆ ನನ್ನ ನೆನಪಿಗೆ ಬರಲಾರವು. ಆದರೆ ತಂದೆಯವರೆನ್ನುತ್ತಿದ್ದರು,

"ದೊಡ್ಡ ದೇಶಭಕ್ತನಾಗಿರುವೆ! ತಂದೆಯ ಜೀವದ ಮೇಲೆ ದೇಶ ಭಕ್ತನಾಗುವುದು ಸುಲಭವಿದೆ. ಅಪ್ಪಾ, ಇಂದು ಕಾಲೇಜು ಬಿಟ್ಟರೆ ಎಲ್ಲಿ ಯಾದರೂ ಕಾಂಪೌಂಡರನಾಗಿರಬೇಕಾಗುವುದು ಜನ್ಮವಿರುವವರೆಗೆ. ಎಲ್ಲಿರುವಿ? ಹರಕು ಧೋತರವನ್ನುಟ್ಟು ನಾನು ಬಾಳುವೆ ಮಾಡಿದ್ದು ಏನೋ ನನ್ನ ಮಗ ಡಾಕ್ಟರಾಗಿ ವೃದ್ಧಾಪ್ಯದಲ್ಲಿ ನಾನು ಸುಖದಿಂದಿರಬಹು ದೆಂಬ ಆಶೆಯಿಂದ. ಈ ಗಾಂಧಿಯನ್ನು ತೆಗೆದುಕೊಂಡೇನು ಮಾಡುವೆ? ಟಿಳಕರ ಕಾಲಬೆರಳ ಸರಿಯಾಗಲಾರ ಈ ಗಾಂಧಿ. ಇದು ಆಫ್ರಿಕೆಯಲ್ಲ ವೆಂದು ಹೇಳು ಆತನಿಗೆ. ನಮಗಾದರೂ ದೇಶದ ಬಗ್ಗೆ ಪ್ರೀತಿ ಕಡಮೆ ಯಾಗಿಲ್ಲ. ಎಲಾ ಹುಡುಗಾ, ಜನ್ಮಭೂಮಿಯೆಂದರೆ ಎಲ್ಲರ ಪ್ರೀತಿಯೇ. ನೀನು ಲಂಗಟವನ್ನು ಕೂಡ ಉಡುತ್ತಿರಲಿಲ್ಲ. ಆಗ ಟಿಳಕರಿಗೆ ಆರು ವರುಷ ಶಿಕ್ಷೆಯಾಯಿತು. ಅಂದು ಬಾಯಲ್ಲಿ ನೀರು ಸಹ ಹಾಕದೆ ಉಪ ವಾಸ ಮಾಡಿದೆ ನಾನು. ಮುಂದೆ ಚಿರೋಲ್ ಕೇಸ್ ಪ್ರಾರಂಭವಾದಾಗ ಕೈಯಲ್ಲಿ ಉಂಗುರವಿಲ್ಲದಿದ್ದರೇನಾಯಿತು ಎಂದುಕೊಂಡೆ; ಅದನ್ನೆ ಮಾರಿ ಬಂದ ಎಲ್ಲ ಹಣವನ್ನು ಫಂಡಿಗೆ ಕೊಟ್ಟೆ ನಾನು. ನನ್ನ ಮಾತು ಕೇಳು. ತರುಣರಿಗೆ ಅನುಭವವಿರುವುದಿಲ್ಲ! ಸುಮ್ಮನೆ ಕಾಲೇಜಿಗೆ ಮರಳಿ ನಡೆ."

ತಂದೆಯವರು ಅದೇ ಮಾತನ್ನು ಮತ್ತೆ ಮತ್ತೆ ಹೇಳುತ್ತಿದ್ದರು. ತಾವು ಸರಕಾರಿ ನೌಕರಿಯಲ್ಲಿದ್ದರೂ ಶಿವಜಯಂತಿಯನ್ನು ಸಾಂಗಗೊಳಿ

ಸಿದ ಬಗೆ, ಅಂದು ನೆರೆದ ನೂರಿನ್ನೂರು ಜನರಿಗೆ ಬೇಕಾಗುವ ಕಬ್ಬಿನ ಹಾಲಿನ ಆಳತೆ, ಸ್ವದೇಶಿ ಗಿರಣಿಯಲ್ಲಿ ತಯಾರಾದ ಅರಿವೆ ಕೊಳ್ಳುವ ಕಾರಣ, ಒಮ್ಮೆ ಪೇಟೆಯಲ್ಲಿ ದೇಶಿ ಸಕ್ಕರೆ ಸಿಕ್ಕದಿರದುದಕ್ಕೆ ತಾವು ಬೆಲ್ಲದ ಚಹಾ ಕುಡಿದ ಸ್ವಾರಸ್ಯ—

ಅಣ್ಣನದೊಂದೆ ಉತ್ತರ—

"ಗಾಂಧಿಯವರು ದೇಶದ ಸೇನಾಪತಿ. ಅವರು ಹೊಸ ದಾರಿಯಿಂದ ಬಿಡುಗಡೆಯ ಕಾಳಿಗವನ್ನು ಹೂಡಿದ್ದಾರೆ. ಅವರ ನಿಶಾನೆಯ ನೆಳಲಲ್ಲಿ ನಿಲ್ಲುವುದೆ ಪ್ರತಿಯೊಬ್ಬ ತರುಣನ ಕರ್ತವ್ಯ. ಸೈನಿಕನು ಮನೆ ಮಾರು, ಮುಂದೆ ತನ್ನ ಗತಿಯೇನು ಎಂದು ವಿಚಾರ ಮಾಡಬಾರದು. ಕೇವಲ ತನ್ನ ಜನ್ಮ ಭೂಮಿಯ ವಿಷಯವಾಗಿಯೆ ವಿಚಾರ ಮಾಡಬೇಕು."

ತಂದೆಯವರು ರೇಗಿದರು—

"ನಿನಗೆ ಮನೆ ಮಾರಿನ ಪರಿವೆ ಇಲ್ಲ. ಮನೆ ನಿನ್ನನ್ನೇಕೆ ಸಲುಹ ಬೇಕು? ನಡೆ, ಬೇಕಾದಲ್ಲಿ ಹೋಗಿ ಬಿಕ್ಕೆ ಬೇಡು."

ಅಣ್ಣನು ಅಂದೆ ಮನೆ ಬಿಟ್ಟು ಹೋದ. ಆದರೆ ಭಿಕಾರಿಯಾಗ ಲಿಲ್ಲ. ಒಳ್ಳೆಯ ಗಳಿಸಾಳಾದ ಡಾಕ್ಟರನಾದ. ಟಿಳಕ ರಾಷ್ಟ್ರೀಯ ವಿದ್ಯಾಪೀಠದ ಪದವೀಧರನಾಗಿ ಚಳುವಳಿಯ ನಿಮಿತ್ತ ಮಧ್ಯ ಪ್ರಾಂತಕ್ಕೆ ಹೋದ. ಮತ್ತು ಜಬಲಪುರಿನಲ್ಲಿ ತನ್ನ ಉದ್ಯೋಗಕ್ಕೆ ನೆಲೆ ಸಿಕ್ಕುವು ದೆಂದೆನಿಸಿದ ಕೂಡಲೆ ಅಲ್ಲಿಯೆ ನೆಲೆಸಿದ

ಮನೆ ಬಿಟ್ಟು ಹೋದ ಬಳಿಕ ಮೊದಮೊದಲು ಆತ ನನಗೆ ಪತ್ರ ಬರೆ ಯುತ್ತಿದ್ದ. ಜಬಲಪೂರಿನಲ್ಲಿ ನೆಲೆಸಿದನಂತರ ಆತ ಬರೆದ ಪತ್ರವಿದು—

"ಮಗು,

ತಂದೆಯವರು ಒಳ್ಳೆಯವರು, ಅವ್ವ ಕೂಡ ಒಳ್ಳೆಯಾಕೆ. ತಂದೆ ಯವರದೂ ನನ್ನದೂ ಜಗಳವಾದುದರಿಂದ ಅವರು ಕೆಟ್ಟವರೆಂದು ನೀನು ತಿಳಿದಿರಬೇಕು. ಆ ಜಗಳ ತಂದೆ ಮಕ್ಕಳದಿರಲಿಲ್ಲ, ಎರಡು ಪೀಳಿಗೆ ಗಳದು. ನಿನ್ನೆ–ಇಂದು, ಇಂದು–ನಾಳೆ ಇವುಗಳ ಜಗಳ ಹೀಗೇ ನಡೆಯು ತಕ್ಕದ್ದಿದೆ. ತಂದೆಯವರದು ತಮ್ಮ ಹಿರಿಯರೊಂದಿಗೆ ಜಗಳವಾಗಿತ್ತೊ ಇಲ್ಲವೊ ನಾನು ಹೇಳಲಾರೆ. ಆದರೆ ತಂದೆಯವರು ತಮ್ಮ ಚಿಕ್ಕಂದಿನಲ್ಲಿ

ಟಿಳಕರ ಭಕ್ತರಾಗಿರಬೇಕು, ಆಗ ರಾನಡೆಯುವರನ್ನು ತಿಳಿದುಕೊಂಡ ಅವರ ಹಿರಿಯರು ಅವರಿಗೆ ಅಷ್ಟು ಇಷ್ಟು ದೋಷ ಕೊಡದಿರಲಿಕ್ಕಿಲ್ಲ.

"ಮನುಷ್ಯ ಮತ್ತು ಕಾಲ ಈ ಇಬ್ಬರ ಮೇಲಾಟ ನಡೆದಿರುತ್ತದೆ ಈ ಜಗತ್ತಿನಲ್ಲಿ. ಇಪ್ಪತ್ತರ ಸೆಟೆಯಲ್ಲಿ ಮನುಷ್ಯನು ಕಾಲನಿಗಿಂತ ಮುಂದೆ ಸಾಗಿರುತ್ತಾನೆ. ಮೂವತ್ತರಲ್ಲಿ ಆತನ ಹೆಜ್ಜೆಗೆ ಹೆಜ್ಜೆ ಕೂಡಿಸಿ ಓಡುತ್ತಾನೆ. ನಾಲ್ವತ್ತರ ಸೆಳವಿಗೆ ಬಿದ್ದನೆಂದರೆ ಆತನು ಕಾಲನಿಗೆ ಹಿಂದಾಗಿ ಉಳಿಯುವನು. ಆತನ ಮನದ ಬೆಳವಣಿಗೆ ನಿಲ್ಲುವುದು. ಇಂದು ಬಳ್ಳಿಯ ಮೇಲೆ ಚಿಗುರಿದ ಹೂಗಳು ನಾಳೆ ಉದುರತಕ್ಕುವೆಂಬುದನ್ನು ಮನುಷ್ಯನು ಮರೆತುಬಿಡುವನು. ಇಂದಿನ ಹೂಗಳು ನಾಳೆಗೆ ನಿರ್ಮಾಲ್ಯವಾಗುವುವು. ಇಂದಿನ ಮೊಗ್ಗುಗಳು ನಾಳೆ ಹೂವಾಗುವುವು. ಇದು ಸೃಷ್ಟಿಯ ನೇಮ. ರೂಢಿಯನ್ನು ಮೊದಲ್ಗೊಂಡು ಮನುಷ್ಯನವರೆಗೆ ಎಲ್ಲರೂ ಒಳಗಾಗತಕ್ಕ ಮಾತಿದು."

ಈ ಪತ್ರವನ್ನು ನಾನು ಬಾಯಿಪಾಠ ಮಾಡಿಕೊಂಡಿದ್ದೆ. ಅಂದವಾದ ಶಬ್ದಗಳಿಗೆ ಅಂದವಾದ ತತ್ತ್ವಗಳಿಗೆ ಮೋಹಗೊಳ್ಳುವ ವಯಸ್ಸು ಅದು!

ಅಣ್ಣನಿಗಾಗಿ ಹೆಣ್ಣು ಹೇಳಿ ಬಂದವು ತಂದೆಯವರಿಗೆ ಪೇಚು ಬಿದ್ದಿತು. ಕೊನೆಗೆ ಅವರು ಅಣ್ಣನಿಗೆ ಪತ್ರ ಬರೆದರು.

ನನಗೆ ಹಿಡಿಸಲಾರದಷ್ಟು ಆನಂದ. ಭಿನ್ನವಾದ ನಮ್ಮ ಮನೆಯನ್ನು ನಮ್ಮ ಹೊಸ ಅತ್ತಿಗೆ ಕೂಡಿಸುವಳೆಂಬ ಸವಿಗನಸು ನನಗೆ ಬೀಳತೊಡಗಿದವು.

ಆದರೆ ಕನಸುಗಳೆಂದಾದರೂ ನಿಜವಾಗಿರುವುವೆ? ಅಣ್ಣನ ಉತ್ತರ ಬಂದಿತು. ಆತನು ತಂದೆಯವರಿಗೆ ಬರೆದಿದ್ದ.

"ನಾನು ಒಬ್ಬ ವಿಧವೆಯನ್ನು ಮದುವೆಯಾಗಬೇಕೆಂದಿದ್ದೇನೆ. ಆಕೆಗೆ ಆರೇಳು ವಯಸ್ಸಿನ ಹೆಣ್ಣುಮಗುವಿದೆ. ಇದಕ್ಕೆ ತಮ್ಮ ಒಪ್ಪಿಗೆಯಿದ್ದಲ್ಲಿ ಆಶೀರ್ವದಿಸಲಿಕ್ಕೆ ಬರಬೇಕು!"

ಅಣ್ಣನ ಮೇಲೆ ಶಾಪಗಳ ಸುರಿಮಳೆಯಾಯಿತು. ನನಗೆ ಪುನರ್ವಿವಾಹದ ವಿಷಯವಾಗಿ ಏನೂ ಅನಿಸುತ್ತಿರಲಿಲ್ಲ. ಆದರೂ ನನ್ನ ಬರಲಿರುವ ಅತ್ತಿಗೆಗೆ ಮೊದಲಗಂಡನಿಂದ ಒಂದು ಹೆಣ್ಣು ಮಗುವಿರುವು

ದೆಂಬ ಮಾತಿಗೆ ನನ್ನ ಒಪ್ಪಿಗೆಯಿರಲಿಲ್ಲ. ನನ್ನ ಒಪ್ಪಿಗೆಯಿರದುದಕ್ಕೆ ಕಾರಣವನ್ನು ಮಾತ್ರ ಹೇಳಲಾಗುತ್ತಿರಲಿಲ್ಲ. ಮೈಮೇಲೆ ಬೆಳೆದ ವಾಳ ವನ್ನು ಕಂಡು ಹೇಗೆ ಹೇಗೊ ಎನಿಸುವುದಿಲ್ಲವೆ? ಹಾಗೇ ಏನೋ ವಿಚಿತ್ರ ಕಲ್ಪನೆ ಬಂದು ಹೋಗುತ್ತಿತ್ತು ಮನದಲ್ಲಿ.

ಈ ಮದುವೆಯ ಮೂಲಕ ತಂದೆಯವರು ಅಣ್ಣನ ಹೆಸರು ಬಿಟ್ಟು ಬಿಟ್ಟರು. ಅವ್ವ ಅಂತೂ ಹೇಳಿಕೇಳಿ ಮಲತಾಯಿ. ಆಕೆಯ ಧಾರ್ಮಿಕ ಭಾವನೆಗೂ ಧಕ್ಕೆ ತಗಲಿತ್ತು! ಆಕೆಗೆ ಅಣ್ಣನ ಬಗೆಗೆ ಸಹಾನುಭೂತಿ ಯೆನಿಸುವುದೆಂತು! ನಾನು ಮಾತ್ರ ಆತನೊಂದಿಗೆ ಪತ್ರವ್ಯವಹಾರ ನಡಸಿದ್ದೆ.

* * *

ನಾನು ಕಾಲೇಜಿಗೆ ಹೋದ ಸುದ್ದಿ ಅಣ್ಣನಿಗೆ ತಿಳಿದನಂತರ ಆತನು ನನಗೆ ದುಡ್ಡು ಕಳಿಸಲಾರಂಭಿಸಿದ. ತಂದೆಯವರ ಸ್ಥಿತಿ ಹರಿತಾಟದ್ದೆ ಆಗಿತ್ತು. ಭಾವಿ ಬತ್ತಿದಾಗ ಮಳೆ ನೀರು ಬಂದಂತೆನಿಸಿತು ನನಗೆ ಅಣ್ಣನ ಸಹಾಯ!

ತಂದೆಯವರಿಗೂ ಅವ್ವನಿಗೂ ಸುಳುವು ಸಹ ಕೊಡದೆ ನಾನೊಮ್ಮೆ ಅಣ್ಣನನ್ನು ಕಾಣಲು ಜಬಲಪೂರಿಗೆ ಹೋದೆ.

ಅತ್ತಿಗೆ ಸ್ವಭಾವದಿಂದ ಒಳ್ಳೆಯಾಕೆ. ಆಕೆಗೀಗ ಎರಡು ಮಕ್ಕಳೂ ಆಗಿದ್ದುವು. ಆಕೆಯ ಹಿರಿಯ ಮಗಳು ಮಣಿ ತಮ್ಮಂದಿರಿಗಾಗಿ ಜೀವ ಕಳೆದುಕೊಳ್ಳುತ್ತಿದ್ದಳು. ಆಕೆ ಅವರ ಮಲ ಅಕ್ಕ ಎಂಬುದನ್ನು ಹೇಳಿ ದರೂ ನಂಬುವಂತಿರಲಿಲ್ಲ.

ನಾನಿದನ್ನಾಡಿ ತೋರಿಸಿದಾಗ ಅಣ್ಣನೆಂದನು :—

"ಎಲಾ, ಇದು ತಲೆತಲಾಂತರದಿಂದ ಬಂದ ಮಾತು! ನೀನೂ ನಾನೂ ಮಲ ಅಣ್ಣತಮ್ಮಂದಿರೆಂದು ಹೇಳಿದರೆ ಯಾರಿಗೆ ನಿಜವೆನಿ ಸೀತು?"

ಅಣ್ಣನು ಹೀಗೆ ಮೋಜಿನಿಂದಲೆ ಮಾತನಾಡಿದ್ದು. ನನಗೆ ಮಾತ್ರ ಆತನ ಆ ಪತ್ರ ನೆನಪಿಗೆ ಬಂದಿತು — ಹೊಸ ಪೀಳಿಗೆ ಹಳೆಯ ಪೀಳಿಗೆ ಗಿಂತ ಬೇರೆಯಾಗಿ ಇದ್ದೇ ಇರುವುದಲ್ಲವೆ?

ಅಣ್ಣನ ಮನೆಯಲ್ಲಿ ಈ ತತ್ತ್ವ ಸುಳ್ಳಾಗಲಿದ್ದಿತು. ಅಣ್ಣನು ಗಾಂಧಿಯವರ ಗುಂಪಿಗೆ ಮುಂದಾಳಾಗಿದ್ದನು. ಮಣಿಯು ಮನೆಯಲ್ಲಿ ತಕಲಿಯ ಮೇಲೆ ನೂಲುತ್ತಿದ್ದಳು. ಖಾದಿಯ ಸೀರೆ ಉಡುತ್ತಿದ್ದಳು. ತಮ್ಮಂದಿರಿಗೆ 'ವೈಷ್ಣವ ಜನ ತೋ ತೇನ ಕಹಿಯೆ' ಎಂಬ ಹಾಡು ಹಾಡಲಿಕ್ಕೆ ಹೇಳಿಕೊಡುತ್ತಿದ್ದಳು.

* * *

ಮತ್ತೆ ನನಗೆ ಜಬಲಪೂರಿಗೆ ಹೋಗುವುದಾಗಲಿಲ್ಲ. ಪರೀಕ್ಷೆ, ತಂದೆಯವರ ಮರಣ, ಅವ್ವನ ಕಾಯಿಲೆ ಇವುಗಳಲ್ಲಿಯೇ ಎಷ್ಟೋ ವರ್ಷ ಹೋದವು. ವಕೀಲಿಗೆ ಪ್ರಾರಂಭ ಮಾಡಿದ ಮೇಲೆ ಉದ್ಯೋಗದಲ್ಲಿ ಲಕ್ಷ್ಯ ತೊಡಗಿಸಲೇಬೇಕಾಯಿತು. ಋಷಿಯ ಕುಲಾಚಾರ ನೋಡಲಾಗದೆಂದೊಂದು ಹಳೆಯ ಕಾಲದ ಹೇಳಿಕೆಯಿದೆ. ಹೊಸ ವಕೀಲನು ಯಾರ ಕುಲಾಚಾರವನ್ನೂ ನೋಡಲಾಗದೆಂದು ದಂಡಕವಿದೆ.

ಈ ಗೊಂದಲದಲ್ಲಿ ನನಗೆ ಮಣಿಯ ಮದುವೆಗೆ ಹೋಗುವುದೇ ಆಗಲಿಲ್ಲ. ಅಹಮದಾಬಾದಿನ ಯಾವುದೋ ಒಂದು ಗಿರಣಿಯಲ್ಲಿ ಆಕೆಯ ಗಂಡನಿದ್ದನಂತೆ. ಒಳ್ಳೆಯ ಸಂಬಳವಿದ್ದಿತು ಆತನಿಗೆ. ಮಣಿಯನ್ನು ನಾನು ಒಮ್ಮೆಯೆ ನೋಡಿದ್ದು. ಆಕೆಯ ಒಳ್ಳೆಯ ಸ್ವಭಾವವನ್ನು ನೋಡಿ ನಾನು ಬಲು ಮೆಚ್ಚಿದ್ದೆ. ಆಕೆಯ ಮದುವೆಗೆ ಹೋಗುವುದಾಗಲಿಲ್ಲವಾದರೂ ಆಕೆಗೆ ಒಳ್ಳೆಯ ಉಡುಗೊರೆಯನ್ನು ಕಳಿಸಲಿಕ್ಕೆ ಮರೆಯಲಿಲ್ಲ. ಅರ್ಥಾತ್ ಆ ಉಡುಗೊರೆಯಲ್ಲಿ ಒಂದು ಖಾದಿಯ ಸೀರೆ ಇದ್ದೆ ಇದ್ದಿತು.

ಅನಂತರ ಅಹಮದಾಬಾದಿನಿಂದ ಮಣಿಯ ಪತ್ರ ಬಂದಿತು. ಆಕೆ ಬರೆದಿದ್ದಳು:—

"ಗಾಂಧೀಜಿಯವರ ಅಹಮದಾಬಾದಿನಲ್ಲಿ— ನಾನಿನ್ನು ಇರತಕ್ಕವಳು. ಎಂತಹ ಸೋಜಿಗದ ಮಾತು ಇದು. ನೀವು ಖಾದಿಯ ಸೀರೆ ಕಳಿಸಿ ಒಳ್ಳೆಯ ಕೆಲಸ ಮಾಡಿದಿರಿ. ಇಲ್ಲವಾದರೆ ನಿಮ್ಮ ಮನಸ್ಸು ನೋಯಿಸುವ ಪ್ರಸಂಗ ಬರುತ್ತಿದ್ದಿತು. ನನಗೆ – ಸೀರೆ ಖಾದಿಯದಲ್ಲವಾಗಿದ್ದರೆ ಹಾಗೇ ಮರಳಿ ಕಳಿಸಿಬಿಡುತ್ತಿದ್ದೆ."

* * *

ಗಾಂಧಿ ಅಥವಾ ಖಾದಿ ಇವುಗಳ ಬಗೆಗೆ ಮಣಿಗೆ ಎನಿಸುತ್ತಿದ್ದಷ್ಟು ಪ್ರೀತಿ ನನಗೆ ಎಂದೂ ಅನಿಸುತ್ತಿರಲಿಲ್ಲ. ಹಾಗೆ ಅನಿಸುತ್ತಿದ್ದರೂ ಹಗಲಿರುಳು ಕೋರ್ಟಿನಲ್ಲಿ ಬರುವ ಅನುಭವದೆದುರಿಗೆ ಹೆಚ್ಚುದಿನ ತಡೆದು ನಿಲ್ಲುತ್ತಿರಲಿಲ್ಲ. ಆ ಪ್ರೀತಿ ತಲೆಯ ಮೇಲೆ ಏಟು ಬೀಳುತ್ತಿರುವಾಗ ಕನಸಿನಲ್ಲಿಯೆ ಎಷ್ಟು ಹೊತ್ತು ಮನುಷ್ಯನು ಗುಂಗು ಹೊಡೆದು ಕೂತಾನು. ಕಾಯಿಲೆಗೀಡಾದ ತಾಯಿಗಾಗಿ ಕಳವು ಮಾಡಿದ ಏಳೆಂಟು ವಯಸ್ಸಿನ ಹುಡುಗನನ್ನು ಕೋರ್ಟಿನಲ್ಲಿ ನೋಡಿ ನನಗನಿಸುತ್ತಿದ್ದಿತು :—ಸಮಾಜದ ಗಂಟಲಿಗೊಂದು ಕ್ಯಾನ್ಸರದಂತಹ ಭಯಂಕರ ರೋಗವಂಟಿಕೊಂಡಿದ್ದು ಗಾಂಧಿಯವರು ಸತ್ಯ-ಅಹಿಂಸೆಗಳ ಹೊಮಿಯೊಪಥಿಕ್ ಗುಳಿಗೆಗಳಿಂದ ಅದನ್ನು ನೆಟ್ಟಗೆ ಮಾಡಲು ಹವಣಿಸುವರು.

ಇಸ್ಪೇಟುಗಳಿಗಾಗಿ ನಡೆಯುತ್ತಿರುವ ವ್ಯಾಜ್ಯಗಳನ್ನೂ ಆ ವ್ಯಾಜ್ಯಗಳಾಚೆ ಇದ್ದ ಕಲ್ಲಿದೆಗಳ ಕಾರಸ್ಥಾನಗಳನ್ನೂ ದಿನವೂ ಕಾಣುತ್ತಿರುವವನಿಗೆ ಸಮಾಜದ ಹೃದಯವನ್ನು ಪಲ್ಲಟ ಮಾಡಹೊರಟ ಪ್ರಯೋಗ ಕ್ರಿಯೆಯಂತೆ ಅಸಂಭಾವ್ಯವೆನಿಸಿದರೆ ಸೋಜಿಗವೇನು?

ನನ್ನ ವಿಚಾರಗಳಲ್ಲಿ ಹೀಗೆ ಅದಲು ಬದಲು ಆಗುತ್ತಿದ್ದುದರಿಂದ ತ್ರಿಪುರಿಯಲ್ಲಿ ಸುಭಾಷಬಾಬು ಕಾಂಗ್ರೆಸ್ಸಿನ ಅಧ್ಯಕ್ಷರಾದಾಗ ನನಗೆ ಹಿರಿಹಿಗ್ಗಾಯಿತು. ಆ ಸಲ ಏನೇ ಆದರೂ ಕಾಂಗ್ರೆಸ್ಸಿಗೆ ಹೋಗಬೇಕು ಎಂದು ನಿರ್ಧರಿಸಿದೆ. ಬಹಳ ದಿನಗಳನಂತರ ಅಣ್ಣನ ಭೇಟಿ. ಅತ್ತಿಗೆಯನ್ನೂ ಕಾಣಲಿದ್ದೆ. ಆಕೆಯ ಮಕ್ಕಳು ಈಗ ದೊಡ್ಡವರಾಗಿರಬೇಕು.

ಒಳ್ಳೆಯ ಆನಂದದಲ್ಲಿದ್ದೆ. ಆದರೆ ನಾನು ಜಬಲಪೂರಿಗೆ ಹೋಗುವ ಮೊದಲೇ ವರ್ತಮಾನ ಪತ್ರಗಳಲ್ಲಿ ಒಂದು ಪತ್ರವು ಪ್ರಕಟವಾಯಿತು. ಅವರಲ್ಲಿ ಅನೇಕ ಮುಂದಾಳುಗಳೊಂದಿಗೆ ಅಣ್ಣನ ಸಹಿ ಇದ್ದಿತು.

ಈ ಪತ್ರದ ಉದ್ದೇಶವೆಲ್ಲ ಸುಭಾಷಬಾಬುಗೆ ವಿರೋಧ. ಇಂದು ರಾಷ್ಟ್ರಕ್ಕೆ ಗಾಂಧಿಯವರ ನೇತೃತ್ವಬೇಕಿದೆ. ಗಾಂಧಿವಾದದಿಂದ ಹಿಂದುಸ್ಥಾನದಲ್ಲಿಯ ತೊಡಕುಗಳೆಲ್ಲ ಬಿಡುವುವು ಇತ್ಯಾದಿ ಮಾತುಗಳೆ ಆ ಪತ್ರದಲ್ಲಿದ್ದವು.

ಅಣ್ಣನ ಆ ಪತ್ರದಲ್ಲಿಯ ಆ ವಿಚಿತ್ರ ವಾಕ್ಯವೊಂದು ನನ್ನ ನೆನಪಿಗೆ

ಬಂದಿತು – ನಾಲ್ವತ್ತರ ನೆಳವಿಗೆ ಬಿದ್ದಾಗ ಮನುಷ್ಯನು ಕಾಲನಿಗೆ ಹಿಂದಾಗಿ ಉಳಿಯುವನು.

*　　　*　　　*

ಜಬಲಪೂರಿಗೆ ಹೋಗುವಾಗ ಒಂದೇ ಒಂದು ಪ್ರಶ್ನೆ ನನ್ನನ್ನು ಕೆಣಕುತ್ತಿದ್ದಿತು. ಮನುಷ್ಯನ ವಿಚಾರದ ಮರವು ಆಯುಸ್ಸಿನ ಮಧ್ಯಕಾಲಕ್ಕೇ ಒಣಗಬೇಕೆಂದು ಸೃಷ್ಟಿಯ ನೇಮವೇ? ಬದಲು ಆಗುವ ಜಗತ್ತಿನೊಂದಿಗೆ ಆತನೂ ಬದಲಾಗಬಾರದೇಕೆ? ಒಂದು ಮೆಟ್ಟಿನ ವರೆಗೆ ಮುಂದುವರಿದು ಆಮೇಲೆ ತನ್ನ ಸುತ್ತ ತಾನೇ ಕುಣಿಯುತ್ತ ಕೂಡಬೇಕೆ? ಹೀಗೆ ಮಾನವನ ಬುದ್ಧಿಗೆ ಶಾಪವಿದ್ದೀತೇನು?

ಕಾಂಗ್ರೆಸ್ಸಿಗಾಗಿ ಅಣ್ಣನ ಮನೆಗೆ ಹೋದಕೂಡಲೆ ತವರೂರಿಗೆ ಬಂದ ಮಣಿ ನನ್ನನ್ನು ಸ್ವಾಗತಿಸಲು ಮುಂದೆ ಬರುವಳು. ನಾನು ಚೇಷ್ಟೆ ಮಾಡಿ ಆಕೆಗೆ ಸಾಕುಬೇಕಾಗಿ ಮಾಡುವೆನು. ದೊಡ್ಡವರಾದ ಅಣ್ಣನ ಮಕ್ಕಳು 'ಕಕ್ಕ, ಕಕ್ಕ' ಎಂದು ನನ್ನ ಸುತ್ತ ಸೇರುವರು, ಎಂದು ಮುಂತಾದ ಎಷ್ಟೋ ಕಲ್ಪನೆ ಮನದಲ್ಲಿ ನೆಲಸಿದವು.

ಆದರೆ ಅಣ್ಣ ಮತ್ತು ಅತ್ತಿಗೆ ಇಬ್ಬರೂ ಮರೆತುಕೊಂಡಂತೆ ಕಂಡರು.

"ಹುಡುಗರಿಲ್ಲವೆ?" ನಾನು ಕೇಳಿದೆ.

"ಸ್ವಯಂ ಸೇವಕರಾಗಿರುವರು!"

"ಮಣಿಯು ಕೂಡ?"

"ಮಣಿಯು ಇಲ್ಲಿ ಇಲ್ಲ!"

ನನಗೆ ಆಶ್ಚರ್ಯ–ಕಾಂಗ್ರೆಸ್ಸು ತವರೂರ ಹತ್ತಿರ ಬಂದಾಗ ಆಕೆ ಬರಲಿಲ್ಲ! ನನಗೆನಿಸಿತು, ದಿನಗಿನ ತುಂಬುತ್ತ ಬಂದಿರಬೇಕು.

"ನೆಟ್ಟಗಿದ್ದಾಳೆಯೆ ಆಕೆ?"

"ಆಕೆಗೇನು ಧಾಡಿ?"

ಅಣ್ಣನ ಬಾಯಿಂದ ಈ ಮಾತು ಕೇಳಿ ನನ್ನ ಮನಸಿಗೆ ಚುರುಕು ತಗಲಿದಂತಾಯಿತು. ಅತ್ತಿಗೆಯ ಮೋರೆಯಮೇಲೆ ಸಿಟ್ಟೋ ಕಂಡು ಬರಲಿಲ್ಲ.

ಅಣ್ಣನು ಅಸ್ವಸ್ಥನಾಗಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದನು. ಅಷ್ಟರಲ್ಲಿ ತಂತಿಯ ಜವಾನ ಬಂದ.

ತಂತಿಯ ಫಾರ್ಮಿನಮೇಲೆ ಸಹಿಯಿಕ್ಕುವ ಮೊದಲೆ ಅಣ್ಣನು ಪಾಕೀಟ ಹರಿದು ತಂತಿಯನ್ನೋದಿದನು.

ತಂತಿಯ ಜವಾನ ಹೋದಮೇಲೆ ಆತನು ಸಿಟ್ಟಿನಿಂದ ವಟಗುಟ್ಟಿದ. "ಈ ..... ನನ್ನ ಮೋರೆಗೆ ಕಪ್ಪು ಸವರುವಳು" ಹೀಗಂದವನು ತಂತಿಯನ್ನು ಮೇಜಿನ ಮೇಲೆ ಎಸೆದು ಹೊರಟು ಹೋದ. ನಾನದನ್ನೆತ್ತಿ ಓದಿದೆ—

"ಏನೆ ಆದರೂ ನಾನು ನನ್ನ ಏಪರ್ಾಟು ಬಿಡಲಾರೆ!"

—ಮಣಿ

"ಅತ್ತಿಗೆ, ಇದೇನು?"

"ನಮ್ಮ ಹಣೇ ಬರೆಹ! ಮಣಿಯು ಗಂಡನ ಮನೆ ಬಿಟ್ಟು ಹೊರಗೆ ನೆಲೆಸಿದ್ದಾಳೆ!"

"ಯಾಕೆ? ಆಕೆಯ ಗಂಡ ಚಂಗಿ ಭಿಂಗಿ ಇರುವನೆ?"

"ಛೀಃ!"

"ಹಾಗಾದರೆ?"

"ಗಿರಣಿಯಲ್ಲಿ ಒಳ್ಳೆಯ ಸಂಬಳದ ಮೇಲಿದ್ದಾನೆ ಈಕೆ ಕೂಲಿ ಕಾರರ ಪಕ್ಷ ಹಿಡಿದು ಬಡಿದಾಡಿದಳು. ಆತ ಅದನ್ನು ಒಪ್ಪಲಿಲ್ಲ. ಮನೆ ಬಿಟ್ಟು ಈಕೆ ಹೊರಬೀಳಲಾಗದೆಂದು ಕಟ್ಟು ಮಾಡಿದನು. ಈಕೆ ಮನೆಯಿಂದ ಹೊರಬಿದ್ದಳು!"

ನನಗೆ ಅಣ್ಣ ಮನೆ ಬಿಟ್ಟು ಹೊರಬಿದ್ದ ದಿನದ ನೆನಪಾಯಿತು. ಇವಾದರೂ ತಲೆ ತಲಾಂತರದಿಂದ ಬಂದ ಮಾತುಗಳೆ!

ನಾನು ಕೇಳಿದೆ, "ಅಣ್ಣನೇನು ಮಾಡಿದ?"

"ಮಣಿಗೆ ಬರೆದರು, 'ಇನ್ನುಳಿದ ಅನೇಕ ಕೆಲಸಗಳಿವೆ. ಗಂಡನನ್ನು ಕೆಣಕಬೇಡ! ಸುಮ್ಮನೆ ಆತನ ಹತ್ತಿರಹೋಗಿ ಇರು!' ಆಕೆ ಅವರ ಮಾತು ಕೇಳಲಾರಳು. ಅವರು ಆಕೆಯನ್ನೆಷ್ಟು ಪ್ರೀತಿಯಿಂದ ಸಲಹಿದರು!—"

ಅತ್ತಿಗೆ ಕಣ್ಣೀರು ಸುರಿಸತೊಡಗಿದಳು. ನನಗೆ ಅನಿಸಿತು: ಸತ್ಯ

ವನ್ನು ನೇರವಾಗಿ ನೋಡಲಾರದ ಕಣ್ಗಳಿ ಹೊತ್ತು ಗೊತ್ತು ಇಲ್ಲದೆ ಕಣ್ಣೀರಿನಿಂದ ತುಂಬಿ ತುಳುಕುವುವು.

ಗಂಡನೊಂದಿಗೆ ಕೂಡಿ ನಡೆಯದ್ದಕ್ಕೆ ಮಣಿಯು ಆತನನ್ನು ಬಿಟ್ಟು ಹೊರಟಿರುವಳು! ತಂದೆಯವರೊಂದಿಗೆ ಕೂಡಿ ನಡೆಯಲಿಲ್ಲವೆಂದು ಅಣ್ಣನಾದರೂ ಹೀಗೇ ಮಾಡಲಿಲ್ಲವೇ? ಮಣಿಯು ಕೂಲಿಕಾರರ ಕಕ್ಷಿಗೆ ಸೇರಿದಳು, ಅದರಲ್ಲಿ ಆಕೆಯ ತಪ್ಪೇನು? ಕೋರ್ಟಿನಲ್ಲಿಯ ನೋಟಗಳನ್ನು ನೋಡಿ ಗಾಂಧಿವಾದದ ಜೊಳ್ಳುತನ ನನ್ನಂತಹವನಿಗೆ ಮನದಟ್ಟಾಗುತ್ತದೆ. ಗಿರಣಿಯ ಕೂಲಿಕಾರರಲ್ಲಿ ಬೆರೆತುಕೊಂಡಿರುವ ಮಣಿಗೆ ಅವರ ದುಃಖಗಳು ಕಣ್ಣಾರೆ ಕಂಡರೆ ಆಶ್ಚರ್ಯವೇನು?

ಹದಿನೆಂಟು ವರುಷಗಳ ಹಿಂದೆ ತಂದೆಯವರು ನಿಂತಿದ್ದ ನೆಲೆಯಲ್ಲಿ ಈಗ ಅಣ್ಣ ಇದ್ದನು. ಆಗಿನ ಅಣ್ಣನ ನೆಲೆ ಈಗ ಮಣಿಯದು. ಆಗ ಅಣ್ಣನು ಮಾಡಿದುದು ಸರಿ. ಈಗ ಈತ ಮಣಿಗೇಕೆ ದೋಷ ಕೊಡಬೇಕು? ಮನುಷ್ಯನು ಹೇಗೆ ಮೋಸಹೋಗುತ್ತಾನೆ ತನ್ನಷ್ಟಕ್ಕೆ ತಾನೇ! ಹಿಂದೆ ಅಣ್ಣನು ಇತಿಹಾಸದ ಒಂದು ಪುಟವನ್ನು ಬರೆದಿಟ್ಟನು, ಈಗ ಮಣಿಯು ಅದರ ಮುಂದಿನ ಪುಟವನ್ನು ಬರೆಯಲಿರುವಳು.

ನಾನು ಅತ್ತಿಗೆಗೆ ಹೇಳಿದೆ.

"ಈಗಲೆ ನಾನು ಅಹಮದಾಬಾದಿಗೆ ಹೋಗುತ್ತೇನೆ."

ಪಾಪ ತಾಯಕರುಳು! ಅದರ ಆಶೆಗೆ ಅರಳುವುದಕ್ಕೆ ಯಾವ ಕಾರಣವಾದರೂ ಸರಿಯೆ.

ಅತ್ತಿಗೆ ಕೇಳಿದಳು. "ಮಣಿಗೆ ಬುದ್ಧಿಯಮಾತು ಹೇಳುವುದಕ್ಕೇನು?"

"ಉಹೂಂ, ಆಕೆಗೆ ಧೈರ್ಯ ಹೇಳಲಿಕ್ಕೆ! ಬೆನ್ನು ಚಪ್ಪರಿಸಲಿಕ್ಕೆ!"

ಆಶ್ಚರ್ಯದಿಂದ ನನ್ನೆಡೆಗೆ ನೋಡಿದಳು ಅತ್ತಿಗೆ ಆಕೆಗೆ ಸಮಾಧಾನ ಹೇಳುವ ಬಗೆ ನನಗೆ ತಿಳಿಯದು. ಏನಾದರೂ ಮಾತನಾಡಬೇಕೆಂದು ನಾನೆಂದೆ—

"ಅತ್ತಿಗೆ, ನಾವೂ ನೀವೂ ಇಂದಿನ ಹೂಗಳು. ಮಣಿಯು ಇಂದಿನ ಮೊಗ್ಗು. ಆಕೆಯನ್ನು ನಾವು ಹೆಚ್ಚು ಜೋಪಾನ ಮಾಡಬೇಕಲ್ಲವೆ?"

—೦—

# ಮಲಯಾಳಿ ಸಾಹಿತ್ಯ

ಮಲಯಾಳಿ ಭಾಷೆಗೆ ತಮಿಳು ಮೂಲವೆಂಬ ಭಾವನೆಯಿದೆ ಇದನ್ನು ಮಲಯಾಳಿ ವಿದ್ವಾಂಸರು ಒಪ್ಪುವುದಿಲ್ಲ. ಮಲಯಾಳಿ ಅಕ್ಷರ ಮಾಲೆ ಆರಂಭವಾದುದು ಕ್ರಿ.ಶ. ೭ನೆಯ ಶತಮಾನದಲ್ಲಿ. ಮಲಯಾಳದ 'ಮರಮ ಕತಾಯಂ' (ಅಳಿಯ ಸಂತಾನ) ಪದ್ಧತಿಯಿಂದ ಸ್ತ್ರೀಯರಿಗೆ ಹೆಚ್ಚಿನ ಸ್ಥಾನ ಸಮಾಜದಲ್ಲಿ ದೊರೆಯಿತು. ನಂಬೂದರಿ ಬ್ರಾಹ್ಮಣರಲ್ಲಿ ಹಿರಿಯಮಗನೊಬ್ಬನಿಗೇ ಮದುವೆಯಾಗುವ ಅಧಿಕಾರ. ಉಳಿದ ಮಕ್ಕಳು ನಾಯರ ಸ್ತ್ರೀಯರೊಡನೆ 'ಕೂಡಿಕೆ' ಮಾಡಿಕೊಳ್ಳುತ್ತಾರೆ. ಮಲಯಾಳಿಗಳ ಈ ಎರಡು ಸಾಮಾಜಿಕ ವ್ಯವಸ್ಥೆಗಳು ಮಲಯಾಳದ ಸಾಹಿತ್ಯಕ್ಕೂ ಒಂದು ವಿಶಿಷ್ಟರೂಪನ್ನಿತ್ತವು.

ಮಲಯಾಳಿ ಸಾಹಿತ್ಯದಲ್ಲಿ ದೊರೆಯುವ ಮೊದಲನೆಯ ಕೃತಿ 'ರಾಮಚರಿತಂ'. ಇದನ್ನು ಬರೆದ ಕವಿಸಾರ್ವಭೌಮ ಮಲಯಾಳಿ ಭಾಷೆಯಲ್ಲಿ 'ಮಹಾಭಾರತ, ಭಾಗವತ'ಗಳನ್ನೂ ಬರೆದ. ೧೫ನೆಯ ಶತಮಾನದಲ್ಲಿ ಕಣ್ಣಚ್ಚನ್ ಪಣಿಕ್ಕರ್ ರಾಮಾಯಣವನ್ನು ಬರೆದು ಕೇರಳದಲ್ಲಿ ಒಂದು ಅಲಂಕಾರ ಸಂಪ್ರದಾಯವನ್ನಾರಂಭಿಸಿದ. ಇವನ ಪಂಗಡಕ್ಕೆ ಸೇರಿದ ಕುಂಜತ್ ರಾಮಾನುಜ ಎವುತಚ್ಚನ್ ಮಲಯಾಳಿಗೆ ಒಂದು ಲಿಪಿಯನ್ನುಂಟುಮಾಡಿಕೊಟ್ಟ. ಸಂಸ್ಕೃತದಿಂದ ಹಲವು ಕಾವ್ಯ ನಾಟಕಗಳನ್ನು ತಮ್ಮ ಭಾಷೆಗೆ ಇಳಿಸಿಕೊಂಡು ತುಂಬ ಹೆಸರುಗಳಿಸಿದ. ಈತನ ಅಧ್ಯಾತ್ಮ ರಾಮಾಯಣ, ಭಾರತ ಭಾಗವತ ಗ್ರಂಥಗಳು ಕೇರಳ ಸಾಹಿತ್ಯದಲ್ಲಿ ಅದ್ವಿತೀಯ ಗ್ರಂಥಗಳೆಂದು ಪರಿಗಣಿಸಲ್ಪಟ್ಟಿವೆ.

ಸುಮಾರು ೧೭ನೆಯ ಶತಮಾನಕ್ಕೆ ಬರುವಾಗ ಸಾಹಿತ್ಯದೃಷ್ಟಿ ತುಂಬ ಬದಲಾದಂತೆ ತೋರುತ್ತದೆ. ಮಲಯಾಳಿಯನ್ನು ಸಂಸ್ಕೃತದ ಕಪಿಮುಷ್ಟಿಯಿಂದ ಬಿಡುಗಡೆ ಮಾಡಿದವನು ಕುಂಜನ್ ನಂಬಿಯಾರ್. ವೀರರ ಚರಿತ್ರೆಗಳನ್ನು ಲಾವಣಿಗಳನ್ನಾಗಿ ಬರೆದು ಮಲಯಾಳಿ ಸಾಹಿ

ತ್ಯಕ್ಕೆ ಒಂದು ವ್ಯಕ್ತಿತ್ವವನ್ನು ನಿರ್ದೇಶಿಸಿ ಕೊಟ್ಟ. ತನ್ನ ಕಾವ್ಯಗಳಲ್ಲಿ ಹಾಸ್ಯವನ್ನು ಧಾರಾಳವಾಗಿ ಬಳಸಿಕೊಂಡು ಕುಂಜನ್ ಹಾಸ್ಯ ಕವಿಯೆಂದೂ ಹೆಸರಾಗಿದ್ದಾನೆ. ಅನಂತರ 'ಕೃಷ್ಣಲೀಲಾ' ಮಹಾಕಾವ್ಯ ಬರೆದ ನಂಬೂದರಿ ಬ್ರಾಹ್ಮಣ, 'ನಾರಾಯಣೀಯಂ' ಬರೆದ ವಾರಿಯರ್ ಕುಲದ ಕವಿಗಳು ಪ್ರಧಾನರು. ಮಲಯಾಳದ ಕಲಾ ವಿಶೇಷವಾದ 'ಕಥಾಕಳಿ' ನಾಟ್ಯಕ್ಕೆ ಹಿನ್ನೆಲೆಯ ಹಾಡಿಕೆಗೆ ಉಪಯೋಗಿಸಲು ಅನೇಕ ಕಾವ್ಯಗಳು ರಚಿತವಾದವು. ಮಲಯಾಳಿ ಸಾಹಿತ್ಯದಲ್ಲಿ ಹೆಚ್ಚಾಗಿ ದೊರೆಯುವುದು 'ಕಥಾಕಳಿ ಸಾಹಿತ್ಯ'

ಹೀಗೆ ಹತ್ತನೆಯ ಶತಮಾನದಿಂದ ಹದಿನಾರನೆಯ ಶತಮಾನದ ವರೆಗೆ ಕೇರಳ ಸಾಹಿತ್ಯ ಹಳೆಯ ಕಬ್ಬದ ಹಬ್ಬದ ಸಡಗರದಲ್ಲಿ ನಡೆಯಿತು. ಈ ಬಳಿಕ ಕೇರಳವರ್ಮ ರ್‍ಾಜ ಮತ್ತು ರಾಜಾ ರವಿವರ್ಮ ಎಂಬ ಇಬ್ಬರು ಕವಿಗಳು ಗದ್ಯ ಸಾಹಿತ್ಯದ ಹೊನಲುಕ್ಕಿಸಿದರು. ಸಂಸ್ಕೃತದಿಂದ ಹಲವು ಉತ್ತಮ ಕೃತಿಗಳನ್ನಾಯ್ದುಕೊಂಡು ತಮ್ಮ ನುಡಿಯಲ್ಲಿ ಬರೆದು ತೋರಿಸಿದರು. ೧೮, ೧೯ ಶತಮಾನಗಳವರೆಗೆ ಗದ್ಯ ಸಾಹಿತ್ಯ ಬೆಳೆಯಿತಾದರೂ ಅದರ ಬಗೆಯಲ್ಲಿ ಹೊಸತಿರಲಿಲ್ಲ, ಬಿಗು ಬಲಗಳಿರಲಿಲ್ಲ. ಈ ಇಬ್ಬರು ಕವಿಗಳು ಬರೆದ ಗದ್ಯವನ್ನು ತಿದ್ದಿ ಅದಕ್ಕೊಂದು ಹೊಸ ರೂಪು, ಹೊಸ ಬಗೆಯ ತೊಡವು ತೊಡಿಸಿ ಜನಕ್ಕೆ ಅಚ್ಚುಮೆಚ್ಚಾಗುವಂತೆ ಮಾಡಿದ ಕೀರ್ತಿ ನಾಲಪ್ಪಾಡು ನಾರಾಯಣ ಮೆನೋನರದು. ಮಲಯಾಳಿಗೆ ಇಂಗ್ಲಿಷ್ ಸಾಹಿತ್ಯದ ವಿಚಾರ ವೈಭವವನ್ನು ತಂದವನು ಟಿ. ಕರುಣಾಕರನ್. ಇವನು ಕೆಲವು ಇಂಗ್ಲಿಷ್ ಕಾದಂಬರಿಗಳನ್ನೂ ರವೀಂದ್ರರ ಕೃತಿಗಳನ್ನೂ ಮಲಯಾಳಿಗೆ ಅನುವಾದ ಮಾಡಿದ್ದಾನೆ.

ಮಲಯಾಳಿ ನುಡಿಗೆ ಜೀವಕಳೆ ತುಂಬಿದವನು ಮಹಾಕವಿ ಕುಮಾರನ್ ಆಶನ್. ಇವನು ಧೀಯ್ಯಾ ಕುಲದವನು. ಅನೇಕ ವರ್ಣಕ ಕಾವ್ಯಗಳನ್ನು ಬರೆದಿದ್ದಾನೆ. ವಲ್ಲತೋಳ್ ಕವಿ ಅನೇಕ 'ಕಥಾಕಳಿ ಕಾವ್ಯ' ಗಳನ್ನೂ ರಾಮಾಯಣವನ್ನೂ ಬರೆದ. ಕೇರಳ ಸಂಸ್ಕೃತಿಯ ರಾಯಭಾರಿಯಾಗಿ ಕಥಾಕಳಿ ನಾಟ್ಯಗಾರರೊಂದಿಗೆ ಭಾರತವನ್ನು ಸಂಚರಿಸಿ ಕೇರಳ ಸಾಹಿತ್ಯಕ್ಕೆ ಅಪಾರ ಕೀರ್ತಿಯನ್ನು ತಂದುಕೊಟ್ಟ.

ಪ್ರಗತಿಶೀಲ ಸಾಹಿತ್ಯದ ಕಹಳೆ ಕೇಳಿಬರಲು ಹಳೆಯದನ್ನು ಮೂಲೆಗೊತ್ತಿ ದೇಶದಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸಲು ವಲ್ಲತ್ತೋೞ್ ಲೇಖನಿ ಮಿಾಸಲಾಯಿತು. ದೇಶಾಭಿಮಾನವನ್ನು ಉಕ್ಕಿಸುವ ಇವನ ಕವಿತೆಗಳು ಮಲಯಾಳಿಗಳ ರಕ್ತವನ್ನು ಬಿಸಿಮಾಡಿದವು. ಆಧುನಿಕ ರಷ್ಯಾವೀರರು ಜಗತ್ತಿನ ಮೇಲೆ ಮೂಡುತ್ತಿರುವ ನವ ವಿಚಾರವಾದವನ್ನು ಕಂಡುಕೊಂಡು ಅವರನ್ನು ಅಭಿವಂದಿಸುವ ಅನೇಕ ಗೀತೆಗಳನ್ನು ವಲ್ಲತ್ತೋೞ್ ಬರೆದಿದ್ದಾನೆ.

ಆಶನ್, ವಲ್ಲತ್ತೋೞ್ ಇಬ್ಬರನ್ನು ಮಲಯಾಳಿ ಸಾಹಿತ್ಯದ ಸೂರ್ಯಚಂದ್ರರೆಂದು ಪರಿಗಣಿಸುವುದುಂಟು. ಇವರ ಬೆಳಕಿನಲ್ಲಿ ರವಿವರ್ಮ, ಎಂ. ಆರ್. ನಾಯರ್ (ಸಂಜಯ), ಮಹಾಕವಿ ಉಳ್ಳೂರು, ಶಂಕರ ನಂಬಿಯಾರ್, ಸರ್ದಾರ ಕೆ. ಎಂ ಪಣಿಕ್ಕರ್, ಪ್ರೊ. ಜೋಸೆಫ್ ಮುಂಡಶ್ಶೇರಿ, ಪಿ. ಕುಂಞಿರಾಮನಾಯರ್, ಕೇಸರಿ, ಅಜ್ಞಾತ ಮೇನೋನರೇ ಮೊದಲಾದವರು ಮಲಯಾಳಿಯಲ್ಲಿ ಹೊಸ ಬಗೆಯ ಗದ್ಯವನ್ನು ಬಳಕೆಗೆ ತಂದರು. ಇವರು ಬೆಲೆಯುಳ್ಳ ಬಹುಮುಖದ ವಿಚಾರ ಸಾಹಿತ್ಯವನ್ನು ಸೃಷ್ಟಿಮಾಡಿದ್ದಾರೆ. ಮುರ್ಕೋತ್ ಕುಮಾರನ್, ಕೆ. ಪಿ. ರಾಘವ ಕುರುಪು, ಕೆ. ವಾಸುದೇವ ಮುಸಾದ್, ಕುಟ್ಟಿ ಕೃಷ್ಣಮಾರಾರ್ ಮೊದಲಾದವರು ಒಳ್ಳೊಳ್ಳೆಯ ಲಲಿತ ಸಾಹಿತ್ಯ, ವಿಮರ್ಶೆಗಳನ್ನು ಬರೆದಿದ್ದಾರೆ.

ಇವರೊಂದಿಗೆ ಕಬ್ಬಿಗರೂ ಜತೆಗೂಡಿ ನಡೆದಿದಾರೆ. ಇವರ ಮುನ್ನಡೆಯಲ್ಲಿ ಕುಂಡೂರು ನಾರಾಯಣ ಮೇನೋನ್, ವೇನ್ಮಣಿ, ನಡುವಂ (ತಂದೆ ಮಗ ಇಬ್ಬರು) ಕುಟ್ಟಿಮತ್ತ್ ಮತ್ತು ಡಿ. ಕುಂಞಿರಾಮನ್ ನಾಯರ್ (ಇಬ್ಬರೂ ಕಾಸರಗೋಡು ತಾಲ್ಲೂಕಿನವರು) ಮೊದಲಾದವರು ಮಹಾಕವಿಗಳೆಂದು ಜನತೆಯಿಂದ ಮೆಚ್ಚಿಗೆ ಪಡೆದಿದಾರೆ. ಇವರಿಂದ ಆಧುನಿಕ ಕೇರಳ ಸಾಹಿತ್ಯ ನಿರ್ಮಾಣವಾಯಿತು. ಕಾವ್ಯ, ನಾಟಕ, ಪ್ರಬಂಧಗಳು; ಕತೆ, ನಗೆನುಡಿಗಳು—ಮೊದಲಾದ ಹಲವೂ ಮೊಗಗಳಲ್ಲಿ ಮಲಯಾಳನುಡಿ ತುಂಬಿ ಚೆಲುವುಗಾಣಿಸಿತು.

ಕಳೆದ ಒಂದು ಶತಮಾನದ ಈಚೆಗೆ ವಿಪುಲವಾದ ನಾವೆಲು ಗ್ರಂಥ

ಗಳು ಹೊರಬಂದಿವೆ. ಇವನ್ನು ಮೊದಲು ಮಲಯಾಳದಲ್ಲಿ ಬರೆಯಲು ತೊಡಗಿದವರು ಓ. ಚಂದುನಂಬಿಯಾರ್ ಎಂಬವರು. ಸಿ. ವಿ. ರಾಮನ್ ಪಿಳ್ಳೈ, ಸುಕುಮಾರನ್ ಮೊದಲಾದವರು ಒಳ್ಳೆಯ ನೀಳ್ಗತೆಗಳನ್ನು ಬರೆದಿದಾರೆ.

ಸಣ್ಣಕತೆಗಳು ಇಲ್ಲವೆ ಕಿರುಗತೆಗಳು ಹುಟ್ಟಿ ಸುಮಾರು ಇಪ್ಪತ್ತೈದು ವರುಷಗಳಾದುವು. ಮೊದಲು ಮಲಯಾಳದಲ್ಲಿ ಕಿರುಗತೆಗಳನ್ನು ಬರೆದವರಲ್ಲಿ ಭವತ್ರಾತ್ರದನ್ ನಂಬೂದಿರಿಪ್ಪಾಡ್ ಅವರ ಹೆಸರನ್ನು ಮೊದಲು ಹೇಳಬೇಕಾಗುತ್ತದೆ. ಇವರನ್ನು ಅನುಕರಣೆ ಮಾಡಿಕೊಂಡು ಹಲವು ಕತೆಗಾರರು ಬರೆದರು. ಆದರೆ ಎಸ್. ಕೆ. ಪೊಟ್ಟೆಕಾಟ್ ಅವರು ಕಿರುಗತೆಗಳನ್ನು ಬರೆದು ಕೇರಳದಲ್ಲಿ ಹೆಸರು ಗಳಿಸಿದರು. ಬೆಳೆಯನ್ನು ಬೆಳೆಸಿದವರಲ್ಲಿ ಶಿವಶಂಕರಪಿಳ್ಳೈ, ಗ್ರಾಮೀಣನ್, ಬಾಲಕೃಷ್ಣಪಿಳ್ಳೈ, ಕೆ. ಪಿ. ಕೇಶವ ಮೇನೋನ್, ವೈಕ್ಕಂ ಮುಹಮ್ಮದ್ ಬಶೀರ್, ಸುಕುಮಾರನ್ ಮೊದಲಾದವರು ಕಿರುಗತೆಗಳ ಸುಗ್ಗಿಯನ್ನು ಎಬ್ಬಿಸಿದರು. ಹೆಣ್ಣುಮಕ್ಕಳೂ ಕೆಲವರು ಕತೆ ಬರೆದಿದಾರೆ

—o—

## ಎಸ್. ಕೆ. ಪೊಟ್ಟೆಕಾಟ್

ಪೊಟ್ಟೆಕಾಟ್ ಇನ್ನೂ ತರುಣರು ಇವರು ಸಣ್ಣಕತೆಗಳನ್ನು ಬರೆವಾಗ ತಮ್ಮದೇ ಒಂದು ಬಗೆ ಒಂದು ನೋಟವನ್ನು ತಮ್ಮದೇ ಆದ ರೀತಿಯಲ್ಲಿ ತಿಳಿಯಾಗಿ ಬರೆಯುತ್ತಾರೆ. ತಾವು ನೋಡಿದ ಜನಪದ ಜೀವನಚಿತ್ರಗಳನ್ನು ಬರೆದು ತಮ್ಮ ಜನರ ರಸಿಕತೆಯನ್ನು ಮೆರೆದು ಬಾಳಿನಲ್ಲಿ ಬೆಳಕು ಕಾಣಿಸುವ ಕತೆಗಳನ್ನು ಬರೆದಿದಾರೆ. 'ನಾಡನ್' 'ಪ್ರೇಮ ಶಿಕ್ಷೆ' ಎಂಬ ಎರಡು ನೀಳ್ಗತೆಗಳನ್ನು ಬರೆದಿದಾರೆ. ಕತೆಗಾರಿಕೆಯಲ್ಲಿ ಇವರದು ಪಳಗಿದ ಕೈ. ಹೇಳುವ ಕತೆಯನ್ನು ಕಟ್ಟುವ ಬಗೆ, ಅದನ್ನು ಬರೆವುದರಲ್ಲಿ ಬಳಸುವ ಮಾತು, ಅದರೊಂದಿಗೆ ಎಡೆಯರಿತು ತಲೆದೋರುವ

ತಿಳಿನಗೆಯ ತುಣುಕು ಇವೆಲ್ಲ ಹದವರಿತು ಕಲೆಗಾರನ ಕೈವಾಡವನ್ನು ಇವರ ಒಂದೊಂದು ಕತೆಯಲ್ಲಿ ಕಾಣಬಹುದು. ಇವರು ಬರೆದ ಸ್ತ್ರೀ ಎಂಬ ನೀಳ್ಗತೆ ತುಂಬ ಒಳ್ಳೆಯ ಕತೆಯೆಂದು ಎಲ್ಲ ಜನ ಕೊಂಡಾಡಿದೆ.

ಈಗ ಹೇಳಿರುವ ಕತೆ ಈಚೆಗೆ ಬರೆದುದು. ಬರಗಾಲ ಬಡಿದ ಮಲಬಾರಿನ ಜನರು ಸಾವಿಗೆ ಎರವಾಗಿ ನಾಡಿಗೆ ನಾಡೇ ಮಸಣದಂತೆ ಕಂಡ ನೋಟವನ್ನು ಕತೆಯಲ್ಲಿ ಹೆಣೆದಿದ್ದಾರೆ.

ಇವರು ಈಗ ತಮ್ಮ ಹುಟ್ಟುನಾಡನ್ನು ಬಿಟ್ಟು ಊರೂರು ಅಲೆಯುತ್ತಿದ್ದಾರೆ. ಕಂಡುದನ್ನು ಆಗಾಗ ಬರೆಯುತ್ತಿದ್ದಾರೆ. ಈಗ ಇವರು ಮುಂಬಯಿಯಲ್ಲಿ ದುಡಿಯುತ್ತಿದ್ದಾರೆ ಎಂದು ತಿಳಿದುಬಂದಿದೆ.

ಇವರು ಬರೆದ ಕತೆಗಳು ಇನ್ನೂ ಸಂಗ್ರಹವಾಗಿ ಪುಸ್ತಕರೂಪದಿಂದ ಹೊರಬಂದಿಲ್ಲ. ಅವು ವಿಪುಲವಾಗಿವೆ. ಆದರೆ ಸದ್ಯ ಅಚ್ಚಾಗಿ ಸಿಕ್ಕಿರುವ 'ನಾಡಿನ್ ಪ್ರೇಂ', 'ಪ್ರೇಮಶಿಕ್ಷಾ' ಎಂಬ ನೀಳ್ಗತೆಗಳು ಉತ್ತಮ ಕತೆಗಳ ಸಾಲಿನಲ್ಲಿ ನಿಲ್ಲುವಂತಹವು. ಇವರು ಬರೆದ 'ಸ್ತ್ರೀ' ಎಂಬ ಇನ್ನೊಂದು ನೀಳ್ಗತೆ ಇದೆ. ಇದು ಕೂಡ ಹೀಗೇ ಉತ್ತಮ ಕತೆಯ ಮಾದರಿಯದು. ಇವರು ಸಣ್ಣಕತೆಯನ್ನು ಹೇಳುವುದರಲ್ಲಿ ಎಷ್ಟು ಚೆನ್ನಾಗಿ ನುರಿತಿದ್ದಾರೆ ಎಂದು ತಿಳಿಯಬೇಕಾದರೆ, ಪರ್ಲ್‌ಬಕ್ ಅವರು ಬರೆದ 'ದಿ ಗುಡ್ ಅರ್ತ್' ಎಂಬ ಕಾದಂಬರಿಯನ್ನು ಒಂದು ಸಣ್ಣ ಕತೆಗೆ ಇಳಿಸಿಕೊಂಡುದೇ ಸಾಕು.

ಕೇರಳದ ನಾಡು ನುಡಿಗಳಲ್ಲಿ ಹಲವು ಹತ್ತು ಶೈಲಿ ಸಂಪ್ರದಾಯಗಳಿವೆ. ಇವರದು ಸುಂದರ ಶೈಲಿ. ಇವರ ಬರವಣಿಗೆಯ ರೀತಿಯನ್ನು ಜನ ಒಪ್ಪಿದ್ದಾರೆ. ಇವರು ಹೆಚ್ಚುಹೆಚ್ಚಾಗಿ ಮಲಯಾಳದ ದೇಸಿ ನುಡಿಗಳನ್ನು ಬಳಸಿಕೊಳ್ಳುವುದೊಂದು ಹೆಚ್ಚುಗಾರಿಕೆ, ಹೊಸ ಪ್ರಯೋಗಗಳು ಇವರಿಂದ ತುಂಬಾ ಒದಗಿದೆ. ಈಗ ಇವರದೇ ಒಂದು ಶೈಲಿಯ ಸಂಪ್ರದಾಯವು ಹೊರಟು, ತರುಣರಿಗೊಂದು ನವಸ್ಫೂರ್ತಿ ಕೊಟ್ಟಿದೆ.

—೦—

# ಸಾವಿನ ಮೋಟಿ

ಅನುವಾದಕ : **ಕಾರ್ಕಹಳ್ಳಿ ರಾಮಕೃಷ್ಣಶೆಟ್ಟಿ**

ನಾನು ಎತ್ತ ಹೊರಟಿದ್ದೆನೆಂಬ ಅರಿವು ನನಗೆ ಇರಲಿಲ್ಲ. ಅಂತು ಆ ಸಣ್ಣ ಹಳ್ಳಿಯ ಬಯಲಲ್ಲಿ ಓರೆಕೋರೆಯಾಗಿ ಹೆಣೆದಿದ್ದ ಹೊಲದ ತಿಟ್ಟುಗಳ ಮೇಲೆ ನಡೆದು ಹೋದೆ. ಮಳೆಗಾಲ. ಆಟಿತಿಂಗಳ ಕಾರ್ಮೋಡಗಳು ಕವಿದು ಆಗಸದಿಂದ ನೆಲದ ವರೆಗೂ ಕತ್ತಲೆಗೂಡಿದ್ದವು. ಸಂಜೆಯ ಹೊತ್ತು ಇರುಳನ್ನು ಕೂಡಿ ಬಹುದೂರ ನಡೆದಿತ್ತು. ಕತ್ತಲೆಯ ಕಡೆನೋಟದಂತೆ ಮುಗಿಲುಗಳೆಡೆಯಿಂದ ಎಳೆ ಮಿಂಚುಕೊನೆಗಳು ಅಲ್ಲಿ ಇಲ್ಲಿ ಹೊಂಚಿ ಹೊಳೆಯುತ್ತಿದ್ದವು.

ನಾನು ಈ ಊರುಬಿಟ್ಟು ಇಂದಿಗೆ ಏಳು ಮಳೆಗಾಲಗಳು ಕಳೆದಿದ್ದುವು. ಈ ಹಳ್ಳಿಯನ್ನು ಈಗ ಹೊಸದಾಗಿ ನೋಡಿದೆ. ಎಂತಹ ಬದಲಾವಣೆಗಳು! ಅಯ್ಯೋ! ಕಾಲೆರಾ, ಟೈಫ್ಯಾಡ್ ...ಡಿಸೆಂಟ್ರಿ... ಇನ್ನು ಎಂತೆಂತಹ ಹೆಸರುಗಳೋ! ಎಲ್ಲ ಹೊಸ ಜಗತ್ತಿನ ಹೊಸ ಜಾಡು. ಒಬ್ಬನಿಗೆ ಬಂದರೆ ಅಲ್ಲೆ ನಿಲ್ಲುವುದಿಲ್ಲ. ಎಲ್ಲರಿಗೂ ಕಾದಿಟ್ಟಿರುವಂತಹವು. ಮೊದಲಿಗೇ ಈ ಹಳ್ಳಿ ಜಾಡ್ಯದ ತವರು. ಎಲ್ಲಿ ನೋಡಿದರೂ ಹೊಲಸು ಕೊಂಪೆಗಳು. ಬಡತನದ ಬಾಳಿಗೆ ಅದು ಚೆನ್ನು. ಆಡುವ ಆಟದ ಬಯಲಾಗಿದ್ದ ಈ ಹಳ್ಳಿ ಇದೀಗ ಹೊಸ ಕೋಲಕಟ್ಟುವಂತಿದೆ. ಅಂತೂ ನಾನು ಇದನ್ನೆಲ್ಲ ನೋಡಬೇಕಾಗಿಯೇ ಈ ವೇಳೆಯಲ್ಲಿ ಹಿಂತಿರುಗಿದೇನೆಯೇ?

ನೆಲ್ಲಿನ ಹೊಲಗಳು ಎಂದಿನಂತೆ ಇಂದೂ ಹೊರವಾಗಿ ಬೆಳಸು ಬಿಟ್ಟಿರುವುದನ್ನು ಕಂಡು ನನ್ನ ಹೊಟ್ಟೆತುಂಬಿದಂತಾಯಿತು. ತಂಗಾಳಿಯ ಸೊಂಪಿಗೆ ಕಳಮೆಗಳು ತಲೆದೂಗುತ್ತಿದ್ದವು. ತೆನೆ ನೋಡುವುದಕ್ಕೆ ಕಣ್ತುಂಬುವಂತಿದ್ದುವು. ಒಕ್ಕಲ ಮಕ್ಕಳು ಯಾವ ಬಗೆ

ಯಿಂದಲೂ ಬದಲಾದ ಹಾಗೆ ತೋರುವುದಿಲ್ಲ. ಅವರ ಬಾಳು ಒಂದು ಹಾಳಿನ ಕತೆಯಿದ್ದ ಹಾಗೆ. ಎಂದಿಗೂ ಅದೇ ಕರಕರಿ. ಈ ಬಡ ವೇಷವನ್ನು ಅವರು ಎಂದಿಗೆ ಬದಲಾಯಿಸುವರೋ ? ಬಡಕಲು ಬಿದ್ದ ಹಾಳು ಗೂಳಿಗಳಂತೆ ನೋಡಲು ಮರುಳರಂತೆ ಕಾಣುತ್ತಾರೆ. ಈ ಪಾಡು ಬೇರೆ ಬಗೆಯನ್ನು ಕಾಡಲಾರದೆಂತಲೋ ಏನೊ ಸಂಜೆಯ ಇಳಿಹೊತ್ತಿಗೆ ಹಕ್ಕಿಗಳು ಆಗಸದ ಏರಿಗೆ ಹಾಯಾಗಿ ಹಾರಿ ತಮ್ಮತಮ್ಮ ಹಾಡನ್ನೇ ಹಾಡುತ್ತಿದ್ದುವು.

ಹಳೆಯ ಜಾಡ್ಯ ಹೋಗಿ, ಹೊಸ ಜಾಡ್ಯ ಅಂಟಿಕೊಂಡುದು ಒಂದೇ ಹೊಸತು ; ಅವುಗಳ ಹೆಸರು ಕೂಡ ಹೊಸತು. ಉಳಿದವೆಲ್ಲ ಇದ್ದ ಹಾಗೇ ಮೊದಲಿನ ಹಾಡಿನ ಕರಕರೆಯನ್ನು ಬಳಕೆಯಿಂದ ಕೊಂಡಾಡುವ ಹಾಳಾಗಿವೆ. ಆಟ ಮುಗಿದ ಬಯಲಿನ ಮುಂದೆ ನಾನು ಹೊತ್ತಾಗಿ ಬಂದು ನಿಂತಂತೆ ನನಗೆ ಅನಿಸಿತು. ಅನಿಸಿಕೆ ಬೆದರಿಕೆಯನ್ನು ಬೆನ್ನಿನಲ್ಲಿಯೇ ಕಟ್ಟಿಕೊಂಡು ಬಂದಿತ್ತು. ನಾನು ಬೆಚ್ಚಿದೆನು.

ಬರಿದಾಗಿ ಬಾಯ್ಬಿಡುವ ಒಡಲನ್ನು ಅವುಕಿ, ಹಸಿದು ಬಸಗೆಟ್ಟ ತುತ್ತಿನ ತೊಗಲಿನ ಚೀಲವನ್ನು ಪಿಕ್ಕಿ, ಓಕರಿಸಿ ಕಾರಿಸುವ ಕಾಲರಾದ ಬಲಗೊಂಡು ಮದವೇರಿ ಬಂದ ಸಾವು ಮುಂದಿನ ಹೋರಾಟಕ್ಕೆ ಇಳಿಯುವ ಹವಣಿನ ಆಸೆಯಿಂದ ಬಾಳಿನ ಕಡೆಗೆ ಕಣ್ಣಿಟ್ಟು ನೋಡುವ ಈ ಹಳ್ಳಿಯ ಪುಟ್ಟ ಮಕ್ಕಳನ್ನೂ ಬಾಳಿನ ಹಿಗ್ಗಿನಲ್ಲಿ ನಕ್ಕು ನಲಿವ ತುಂಬುಹರಯದ ಜವ್ವನ ಜವ್ವನೆಯರನ್ನೂ ಈ ಹಳ್ಳಿಯ ಬಾಳನ್ನು ಕಂಡುಂಡು ಅದನ್ನು ಮೆಲುಕುವ ಮುಪ್ಪಿನ ಮುದುಕರನ್ನೂ ಕಣ್ಣುಮೋರೆ ಯಿಲ್ಲದೆ ಬಾಡಿಸಿ, ಉದುರಿಸಿ, ಮರವೆಯ ಪೊರಕೆಯಿಂದ ಗುಡಿಸಿ, ಒಟ್ಟೈಸಿ ಕೊಂಡು ಹೋಯಿತು. ನಲವು ನಲಿಕೆಗಳಿಂದ ಕೂಡಿದ ಈ ಹಳ್ಳಿಯ ಒಕ್ಕಲುಗಳು ಬಿದ್ದು ಮಸಣವಾಯಿತು. ಎಲ್ಲಿ ನೋಡಿದರೂ ಸಾವಿನ ಹಸಿದ ರಕ್ಕಸನ ಕೈಮುಟ್ಟದಿಲ್ಲ. ಋತುಗಳು ಮತ್ತೆ ಮತ್ತೆ ಬಂದು ಹೋಗುತ್ತವೆ. ಹರಿವ ನೀರಿಗೆ ಯಾರ ಹೇಳಿಕೆಯೂ ಇಲ್ಲ. ಅದೂ ಒಂದು ಸುತ್ತು ಬರುತ್ತದೆ.

ಹಲವು ನಾಡನ್ನು ಸುತ್ತಿ ಈಗ ನನ್ನ ಹುಟ್ಟೂರಿಗೆ ಬಂದಿದೇನೆ.

ಯಾವ ಯಾವ ಬಯಕೆಯಿಂದ ಯಾವ ಯಾವ ಊರಲ್ಲಿ ಅಂಡಲೆದು ಬಂದೆನು; ಇನ್ನು ಯಾವ ಬಯಕೆ? ನನ್ನ ಅಚ್ಚುಮೆಚ್ಚಿನ ಹುಟ್ಟೂರ ಮುಟ್ಟಿನೋಡಿ ಕಂಬನಿ ಮಿಡಿಯುವ ಬಯಕೆಯೊಂದು ಉಳಿದಿತ್ತು. ಆಸೆಗೆಟ್ಟು ದಿಕ್ಕುಗೆಟ್ಟು ಪಾಡಳಿದ ಜನಕ್ಕೆ ಹುಟ್ಟೂರು ತಣಿವೀವುದಂತೆ. ಯಾವ ಊರೊ, ಯಾವ ದೇಶವೊ ಎಲ್ಲಿದ್ದರೂ ಒಂದೊಮ್ಮೆಗೆ ನನ್ನ ಎಳವೆಯ ಆಟದ ದಿನಗಳು ಮಗುಳುದಿಸಿ, ಸವಿನೆನಹುಗಳು ಅರಳುತ್ತಿದ್ದುವು. ಕರಿಯ ಹಲ್ಲುಗಳಿಂದ ತುಂಬಿದ ನಮ್ಮ ಹಳ್ಳಿಯ ಗುಡ್ಡೆ ಕಾಡುಗಳನ್ನು ಸುತ್ತಿ, ನೀರು ತುಂಬಿದ ಕೊಳಚೆ ಹೇರಿದ ಹೊಲಗದ್ದೆಗಳ ಹುಣಿ (ತಿಟ್ಟು) ಗಳ ಬಳಿಸಂದು ನೆನಕೆಯ ಬಳ್ಳಿ ಹರಿಯುತ್ತಿತ್ತು. ಹೊರನಾಡಿಗೆ ಹೋಗಿ ಅಲ್ಲಿ ಇರುಳು ಹಗಲು ಬಡ ಕೂಲಿಗಾರರ ಮೈಯ ಕೆನ್ನೀರು ಕುಡಿದು ದಪ್ಪಾದ ಕಪ್ಪು ಹೊಗೆ ಕಾರುವ ಕಬ್ಬಿಣದ ರಕ್ಕಸನು ಮರುಳಿನ ಉಬ್ಬಸದಂತೆ ಕೂಗಾಡುವ ಗೋಳಿಗೆ ಬೇಸರಾಗಿ, ಉಸಿರಾಡಲು ತಿಳಿಗಾಳಿಯಿಲ್ಲದೆ, ಮೈಜಡ್ಡಾಗಿ, ಬೆಮರ ಎಸರಟ್ಟು ಉಕ್ಕೇರುವ ಶೆಖೆಯಿಂದ ಅಲಸಾಗಿ ಇರುಳಿನ ನಿದ್ದೆಯಿಲ್ಲದೆ ಹಗಲಿನ ಹಸಿವಿಲ್ಲದೆ ಎಲ್ಲಾದರೂ ಉಸ್ಸಪ್ಪಾ ಎಂದು ಬಿದ್ದುಕೊಂಡರೆ, ತನಿಯ ಸೊಗಸು ತರುವ ಈ ಹಳ್ಳಿಯ ಮಳೆಗಾಲದ ನಟ್ಟಿರುಳು ನನ್ನನ್ನು ಅಣಕಿಸುವಂತೆ ನನ್ನ ಬಾಳಿನಿಂದ ದೂರಾದಂತೆ ತೋರುತ್ತಿತ್ತು.

ಹುಲ್ಲು ಹೊದಿಸಿದ ಮಾಡಿಂದ ಸುರಿವ ಮಳೆನೀರ ತೊಯ್ಯಲು ಎಳೆವಳ್ಳಿ ತಂಬುರದನಿ ಮಿಡಿಯುವುದು; ಮಳೆನೀರ ತೋಡುಗಳಿಂದಲೂ ಹೊಲಗದ್ದೆಗಳಿಂದಲೂ ಗೊಗ್ಗರ ಕಪ್ಪೆಗಳು ಬ್ಯಾಂಡು ಬಾರಿಸುತ್ತಿರುವುವು; ಮರದ ರೆಂಬೆಗಳು ಮದ್ದಳೆ ಹಿಡಿದು ತಿಕ್ಕುತ್ತಿದ್ದುವು; ಕಿರುಚಲು ಹುಳುಗಳು ಹಾಡಲು ಕಲಿಯುತ್ತಿದ್ದುವು. ಕತ್ತಲೆಯ ಹಾಸಿನಲ್ಲಿ ಇವುಗಳ ಮೇಳ ನಡೆದಿರಲು ನಿದ್ದೆಗೆ ಆಸರಾಗುತ್ತಿತ್ತು. ತೊಡಕಿಲ್ಲದ ಒಂದು ನಿಡುನಿದ್ದೆಯ ಕೊನೆಗೆ, ಮುಂಜಾವಿಗೆ ಕೋಳಿ ಕೆಲೆದು ಬೆಳಗಾದುದೆಂದು ಎಚ್ಚರಿಸುವುದು. ಮತ್ತೆ ನಿದ್ದೆ ತೂಗುವುದಿಲ್ಲ. ಪಟ್ಟಣದ ಬೆಳುವಲ ಬೆಳಗನ್ನು ಕೊರೆದು ಕೋರೈಸಿಕೊಂಡು ಹೋಗುವ 'ಫ್ಯಾಕ್ಟರಿ ವಿಸಿಲ್" ಕೇಳಿದೊಡನೆ ಮೈಯಲ್ಲೆಲ್ಲ ಚುಚ್ಚಿದಂತಾಗುತ್ತಿತ್ತು. ಯಾಕೋ ಈ

ಹಾಳು ಎಂದು ಆಲಸಿನ ಹಾಸಿಗೆ ಹಿಡಿದು ಒಂದಿನಿತು ಹೊತ್ತಾದರೂ ನಿದ್ದೆಹೋಗಲು ಮನಸ್ಸೆ ಇಚ್ಛಿಸುತ್ತದೆ. ಅದಕ್ಕೆ ಅಡ್ಡಿಯೋ ಬಡ್ಡಿಯೋ ಎನಿಸುವಂತೆ ತಗಣೆ ಒಂದುಕಡೆ ಸೊಳ್ಳೆ ಇನ್ನೊಂದು ಕಡೆ ಕೈಕಾಲು ಗಳಿಗೆ ಕೆಲಸ ಕೊಡುತ್ತವೆ . . . .

ನಾನು ಉಟ್ಟ ಬಟ್ಟೆಯನ್ನು ತೊಟ್ಟುಹಿಡಿದು ಮೊಣಕಾಲಿನವರೆಗೆ ಎತ್ತಿ ಕಟ್ಟಿದೆ. ಬಾಯಾರುವುದಕ್ಕೊಂದು ಸಿಗರೇಟು ಹೊತ್ತಿಸಿ ಮುಂದೆ ನಡೆದೆ. ಹೊಗೆ ಬಿಡದೆ ಇದ್ದರೆ ಯಾವ ಎಂಜಿನ್ನೂ ನಡೆವುದಿಲ್ಲ ತಾನೆ? ನಾವು ಇರುವುದೇ ಹೊಗೆಯ ಬಲದಿಂದ.

ನಮ್ಮ ಹಳ್ಳಿಯ ಜನ ತುಂಬ ರಸಿಕರು. ನನಗೆ ಈ ಜನರ ಮೇಲೆ ತುಂಬಾ ನೆಚ್ಚಿಗೆ. ನಾನು ಹೋದರೆ ಸಗ್ಗ ಸಿಗುವುದೆಂಬ ಅಚ್ಚುಕಟ್ಟಾದ ನಡವಳಿಯ ಬಡ ಜನರು. ಸಕ್ಕದರೆಂಬ ಸಕ್ಕದತನ ಅವರಲ್ಲಿ ಎಳ್ಳಷ್ಟು ತೋರುವುದಿಲ್ಲ. ಹಳ್ಳಿಗೆ ತಕ್ಕ ಹುಂಬರು.

ಹಳ್ಳತಿಟ್ಟುಗಳನ್ನು ದಾಟಿ, ‘ಕಟ್ಟ–ಹುಟಿ’ಗಳನ್ನು ಮೆಟ್ಟ ನಡೆದೆ. ಆಗ ಅಲ್ಲೇ ನೆರೆಕರೆಯವರಲ್ಲಿ ನನ್ನ ಮೊದಲಿನ ಗೆಳೆಯರ ನೆನಪಾಯಿತು.

ಹೊಲಗಳನ್ನು ದಾಟಿ ಏರಿಗೆ ಹತ್ತಲು ಅಲ್ಲಿ ಒಂದು ಸಣ್ಣ ಗುಡಿಸಲು ಕಾಣಿಸಿತು. ಅದರ ಮಾಡು ನೆಲಕ್ಕೇ ಇಳಿದುಕೊಂಡಿತ್ತು. ನೋಡಲು ಈ ಹಳ್ಳಿಯ ಜಾಡಿನ ರೂಪಾಗಿ ನಿಂತಂತೆ ಕಾಣಿಸಿತು. ಅಂಗಳದಲ್ಲಿ ಮಡಗಿದ್ದ ಬಳ್ಳಿಗಳು, ಮರದ ಬೇರುಗಳನ್ನು ನೋಡಿ ಅದೊಂದು ‘ದಟ್ಟಿಗೆ’ಯೆಂದು (ಹೊಲೆಯರ ಗುಡಿಸಲು) ಊಹಿಸಿದೆನು. ದಟ್ಟಿಗೆಯ ಮುಂದೆ ತನಿತೆದ್ದು ನಿಂತ ಹೊಂಬಾಳೆಯ ಗಿಡವೊಂದು ಎಲ್ಲ ದಿಕ್ಕು ಗಳಿಗೂ ತನ್ನ ಕೈಯನ್ನು ಚಾಚಿ ನಿಂತಿತ್ತು.

ನಾನು ನಡೆಯುತ್ತಿರಲು ಒಂದು ಕೆರೆಹಾವು ಕಾಲಿನ ಪಕ್ಕಕ್ಕೇ ಹರಿದುಹೋಯಿತು.

ದೂರದಲ್ಲಿ ಮಸಕು ಮಸಕಾಗಿ ಕಾಣುತಿದ್ದ ಗುಡ್ಡ ಕಣ್ಣಿಂದ ಮಾಸುತ್ತ ಬಂತು. ಮೋಡಗಳು ಓಡುತ್ತಿದ್ದುವು. ಗಾಳಿ ಬೀಸಿತು. ಮಳೆಯ ಹನಿ ಒಂದೊಂದು ಹನಿಯತೊಡಗಿತು.

ಹಳ್ಳಿಯ ಒಳದಾರಿ ಬಿಟ್ಟು ಒಂದು ಓಣಿಯ ಪಕ್ಕಕ್ಕೆ ಬಂದು ಸೇರಿದೆ. ತುಸ ದೂರದಲ್ಲಿ ಒಂದು ಅಂಗಡಿ ಇತ್ತು. ಚಿಮಿಣಿಯ ನಸಕು ಬೆಳಕಿನಲ್ಲಿ ಐದಾರು ಜನರೂ ತೂಗಿದ ಒಂದು ನೇಂದ್ರಬಾಳೆಯ ಗೊನೆಯೂ ಗೋಚರಿಸಿತು.

ಅಂಗಡಿಯನ್ನು ಕಂಡಾಗ ಒಂದು ಗುಟುಕು ಟೀ ಕುಡಿಯೋಣ ಎಂದು ಆಸೆಯಾಯಿತು. ಹಳೆಯ ನಡವಳಿ: ಬೆಳಗಾಗ ಎದ್ದು ಹೊಲಗದ್ದೆಗಳಿಗೆ ಒಂದು ಸುತ್ತು ನಡೆದು ಈ ಹಳ್ಳಿಯ 'ರೆಸ್ಟಾರೆಂಟ'ನಲ್ಲಿ ಹತ್ತಾರು ಜನ ಕೂಡಿ ಆ ಈ ಸುದ್ದಿ ಹೇಳುತ್ತ ಒಂದೇ ಒಂದು ಗುಟುಕು ಟೀ ಕುಡಿವುದರಲ್ಲಿದ್ದ ರುಚಿ–ತೃಪ್ತಿ–ಸೊಗಸು ಎಷ್ಟೆಂದು ಹೇಳಲು ಬರುವುದಿಲ್ಲ. ಆದನ್ನು ಇನ್ನು ಮುಂಬಯಿಯ ತಾಜ್‌ಮಹಲ್ ಹೋಟಲಲ್ಲಿಯೂ ಪಡೆಯಲಾರಿರಿ. ಬಿದಿರಿನ ಅಂಡೆಯಿಂದ ಹೊರತೆಗೆದು ಹಸಿಬಾಳೆಯ ಎಲೆಯ ಮೇಲೆ ಮಡಗಿರುವ ಬೆಳಕಿಗೆ ಅಕ್ಕಿಯ 'ಪುಟ್ಟು' (pudding) ನಿಂದ ಹೊರಡುವ ಪರಿಮಳವನ್ನೂ ಒಗ್ಗರಣೆ ಹಾಕಿದ ಕಡಲೆ 'ಉಪ್ಪು ಕರಿ' ಯ ಸವಿಯನ್ನೂ ಎಣಿಸಿದರೆ ಬಾಯಲ್ಲಿ ನೀರೂರುವುದು. ಇವನ್ನು ನೋಡದೆ ಏಳು ವರ್ಷಗಳಾದುವು.

ಅಂಗಡಿಯ ಬಾಗಿಲಿಗೆ ಬರುವಷ್ಟರಲ್ಲಿ ಒಳಗಿಂದ ಯಾರೋ ನನ್ನ ಹೆಸರೆತ್ತಿ ಕೂಗಿದರು. 'ಯಾವಾಗ ಬಂದಿರಿ ? ಬನ್ನಿ, ಬನ್ನಿ ಒಂದು 'ಆಫ್' (half) ಟೀ ಕುಡಿಯೋಣ, ಬನ್ನಿ. . . . ಇನ್ನು ಹೆಚ್ಚುದಿನ ಇಲ್ಲೇ ಇದ್ದೀರಲ್ಲಾ, ಸ್ವಲ್ಪ ಮಾತಾಡಿ ಹೋಗಬಹುದು ಬನ್ನಿ . . . .' ಎಂದು ಹೇಳುತ್ತಲೂ ಒಂದು ಒಡಕಲು ನಗೆ ಹೊರಟಿತು.

ನಗೆ! ಡಬ್ಬಿಗೆ ಹೊಡೆದರೆ ಹೊರಡುವ ದನಿ ಅದರದು. ನಗೆಯಿಂದಲೇ ನನ್ನನ್ನು ಕೂಗಿದವರನ್ನು ಗುರುತಿಸಿದೆ. ಅದು ನಮ್ಮ ಹಳ್ಳಿಯವರೆಲ್ಲರಿಗೂ ಕೇಳಿ ಕೇಳಿ ಬಳಕೆ ಇರುವ ನಗೆ. 'ಯಾರು ? ಉಕ್ಕುಣಿ ನಾಯರೇನು ?' ಎಂದು ನಾನು ಅಂಗಡಿಯ ಮೆಟ್ಟಲೇರಿದೆ. ಉಕ್ಕುಣ್ಣಿ ನಾಯರ್ ಒಂದು ಹಳೆಯ ಬೆಂಚಿನಲ್ಲಿ ಕುಳಿತಿದ್ದರು. ನನ್ನನ್ನು ಬರಮಾಡಿಕೊಂಡು ಬೆಂಚಿನ ಮೇಲಿನ ದೂಳನ್ನು ಕೈಯಿಂದ ಜಾಡಿಸಿ ಕುಳ್ಳಿರಲು ತೋರಿದರು.

ನಾನು ಕುಳಿತುಕೊಂಡೆ.

ಅಂಗಡಿಯಲ್ಲಿ ಒಂದು ದೀಪ ಇಟ್ಟಿದ್ದರೂ ಕತ್ತಲೆ ತುಂಬಿತ್ತು. ಅಲ್ಲೆ ಹಾಕಿದ್ದ ಒಂದು ಒಲೆಯ ಮುಂದೆ ಮೂವರು ಕುಳಿತು ಚಳಿ ಕಳೆಯುತ್ತಿದ್ದರು. ಒಬ್ಬ ಅತಿಕಾಯ ನಾನು ಕುಳಿತ ಪಕ್ಕದಲ್ಲಿ ಬಗ್ಗಿ ನೆಲವನ್ನು ಮುಟ್ಟಿದ ಬೆಂಚೊಂದರಲ್ಲಿ ಕುಳಿತು ಕಾಲಿನ ಉಗುರು ತೆಗೆಯುತ್ತಿದ್ದ. ಉಕ್ಕುಣ್ಣಿನಾಯರ್ ನನ್ನನ್ನು ಕುಳ್ಳಿರಿಸಿ ನನಗೆದುರಾಗಿ ಬೇರೆ ಒಂದು ಸಣ್ಣ ಮಂಚದಲ್ಲಿ ಕುಳಿತರು. ಉಡುವುದಕ್ಕೆ ಬಾರದ ಒಂದು 'ತೋರ್ತು' ಉಟ್ಟಿದ್ದರು. ಮೈಯಲ್ಲಿ ಬೇರೆ ಬಟ್ಟೆ ಇರಲಿಲ್ಲ. ಎಡಕಿವಿಯ ಬಿಲದಲ್ಲಿ ಒಂದಾಣೆಯ ಒಂದು ಪಾವಲಿ ಮಡಗಿದ್ದರು. ಅವರನ್ನು ನೋಡುವಾಗ ಯಾರಿಗಾದರೂ ಹೇಸಿಗೆಯಾಗಬೇಕು. ಊದಿದ ಕೈಕಾಲುಗಳು, ಬಾತಂತಹ ದೇಹ. ಮೈಯಲ್ಲೆಲ್ಲ ಒಗರು ಒಗೆವ ಎಣ್ಣೆಯ ಲೇಪನ.

ಉಕ್ಕುಣ್ಣಿನಾಯರ್ ತಾನು ಕುಳಿತ ಮಂಚದ ಅಡಿಯಿಂದ ಒಂದು ತೆಂಗಿನ ಗೆರಟೆಯನ್ನು (ಚಿಪ್ಪು) ಈಚೆಗೆ ತೆಗೆದು ಎಡಗೈಯನ್ನು ಅದ್ದಿ ಕಾಲುಗಳಿಗೆ ಎಣ್ಣೆ ತಿಕ್ಕತೊಡಗಿದರು. ಅವರಿಗೆ ವಾತ ಅಂಟಿತ್ತು.

ಏಳು ವರುಷದ ಹಿಂದೆ ಇವರನ್ನು ನಾನು ಇದೇ ರೀತಿಯಲ್ಲಿ ಕಂಡಿದೇನೆ. ಒಂದು ಕೈಯಲ್ಲಿ ಎಣ್ಣೆಯ ಚಿಪ್ಪು, ಇನ್ನೊಂದು ಕೈಯಲ್ಲಿ ಒಂದು ಊರುಗೋಲು ಹಿಡಿದುಕೊಂಡು ಅವರು ಆ ಈ ಚಹದಂಗಡಿ ಚಾವಡಿಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಎಲ್ಲಿ ಉಕ್ಕುಣಿನಾಯರ್ ಕುಳಿತರೆ ಅಲ್ಲಿ ರೇಡಿಯೋದ ದನಿಯೇಳುತ್ತದೆ. ಅದರೊಂದಿಗೆ ಸಾಜವಾದ ಅವರ ಟೊಳ್ಳುನಗೆ ಹೊರಡುವುದು ತಪ್ಪಿದ್ದಲ್ಲ. ಸಣ್ಣವರು ದೊಡ್ಡವರು ಇವರನ್ನು ಯಾರು ಕಂಡರೂ, 'ಏನು ಕಾರ್ಣವರೇ (ಮಾವ), ಏನು ಸುದ್ದಿ ?' ಎಂದು ಕೇಳುತ್ತಾರೆ. ಇಡೀ ಊರಿಗೆ ಇವರೊಂದು ಬ್ರಾಡ್ ಕಾಸ್ಟಿಂಗ್ ಸ್ಟೇಷನ್ ಇದ್ದ ಹಾಗೆ. ಇವರು ಹೋದಲ್ಲಿ ಬಂದಲ್ಲಿ ಎಲ್ಲ ಜನ ಕೂಡುವರು ; ಅವರ ಗೊಗ್ಗರ ದನಿಕೇಳುವುದು.

ಎರಡನೆ ಮಹಾಯುದ್ಧ ಆಡಿಯಿಟ್ಟಿತು. ಸಿಡಿ ಮದ್ದು ಸಿಡಿಯಿತು. ಸುಡುವುದು ಸುಟ್ಟಿತು. ನೆತ್ತರಿನ ಓಕುಳಿ ಹರಿದು ನರಕದ ಬಾಗಿಲಿಗೆ

ಮುಟ್ಟಿತು. ಹಸಿವು, ನೋವು, ಸಾವು – ಬಡತನ, ಜಾಡ್ಯಗಳು ಬಾಳಿನ ಜೋಡಾಗಿ ಬಂತು. ತರುಣರು ಸೇನೆಯನ್ನು ಸೇರಿದರು. ಕಾಕಿ ತೊಟ್ಟುಕೊಂಡು ಕಡಲು ದಾಟಿದರು. ಕಾಲೆರಾದ ಕೊಳ್ಳಿ ಹಿಡಿದು ಬಂದ ಸಾವಿನ ಕೊಯ್ಲು ನಮ್ಮ ಊರ ಉದ್ದಗಲಕ್ಕೂ ನಡೆಯಿತು. ಆದರೆ ಸಾವಿನ ಯಾವ ಆಟವೂ ನಮ್ಮ ಕಾರ್ಣವರನ್ನು ತಟ್ಟಲಿಲ್ಲ. ಅವರು ಹಗಲಿನ ಕಾವಡಗಿದ ತರುವಾಯ ಎದ್ದು ಎಂದಿನಂತೆ ಹೊರಬರುತಿದ್ದರು. ಎಷ್ಟು ದೂರವಾದರೂ ತಮ್ಮ ಮೋಟುಕಾಲನ್ನು ಎಳೆದುಕೊಂಡು ಯಾವುದಾದರೂ ಒಂದು ಚಹದಂಗಡಿಗೆ ಹೋಗಿ ಕುಳಿತಿರುತ್ತಾರೆ. ಒಂದೆರಡು ಅಂಗಡಿಗಳಲ್ಲಿ ಅವರಿಗೆಂತಲೇ ಒಂದು ಒಡ್ಡವಣೆಯನ್ನು ಅಲ್ಲೆ ಮೂಲೆಗೆ ಸರಿಸಿರುತ್ತಾರೆ ಕಾರ್ಣವರು ಹೋಗಿ ಅದನ್ನು ದಿನವೂ ಚಂದಗಾಣಿಸುತ್ತಾರೆ ಅಲ್ಲಿ ತಮ್ಮ ದಿನದ ಪಾಟದಲ್ಲಿ ತೊಡಗುತ್ತಾರೆ. ಎಡಗೈಯನ್ನು ಎಣ್ಣೆಯಲ್ಲಿ ಅದ್ದಿ ಮೈಕಾಲುಗಳಿಗೆ ತಿಕ್ಕುತ್ತಿರುತ್ತಾರೆ ಈ ಕೆಲಸ ನಡೆದುಕೊಂಡಿರುವಂತೆಯೇ ರೇಡಿಯೋ ತಿರುವಿಟ್ಟ ಹಾಗೆ ಸಣ್ಣ ಪಲ್ಲಕ್ಕಿಯಿಂದ ಮೊದಲಾಗಿ 'ಪ್ಯಾರಚೂಟಿ' ನವರೆಗೆ, ಎತ್ತಿನಗಾಡಿಯಿಂದ 'ರೇಲವೇ' ಗಾಡಿಯವರೆಗೆ ಮಾತು ಮುಟ್ಟುತ್ತದೆ. ಹಾಗೆ ಕುಳಿತರೆ ಹೊತ್ತು ಕತ್ತಲೆಯಲ್ಲಿ ಅಡಗಿದರೂ ಗೊತ್ತಾಗುವುದಿಲ್ಲ. ಹೊತ್ತು ಹೋಗದ ಜನರಿಗೆ ಇವರನ್ನು ಕಂಡರೆ ಮತ್ತೆ ಹೊರಟುಹೋಗುವುದಕ್ಕೆ ಕಾಲೇಬರುವುದಿಲ್ಲ. ಏನಾದರೂ ರಾಯರಗಳೆ, ಏನಾದರೂ ಮಾತುಕತೆ–ಒಂದರ ಬೆನ್ನು ಹಿಡಿದು ಒಂದು ಇದ್ದೇ ಇರುವುದು. ಅಂಗಡಿಯವನು ಬೇಸರಾಗಿ, 'ಬಾಗಿಲು ಹಾಕುತ್ತೇನೆ. ಇವತ್ತಿಗೇ ಮುಗಿಸಿದರೆ ನಾಳೆಗೆ ಬೇಡವೇ ?' ಎಂದು ಕೂಗಿದರೂ ಇವರಿಗೆ ಎಚ್ಚರಾಗುವುದಿಲ್ಲ. ಇನ್ನೊಂದು ಹೊಸ ಸುದ್ದಿ ಕಾದಿದ್ದದ್ದೇ. ಎರಡು ಗಂಟೆಯ ದಾರಿ ಅದೇ ನಡೆದುಬಿಡುವುದು.

ಉಕ್ಕುಣ್ಣಿನಾಯರ್ ಎಣ್ಣೆ ಉಜ್ಜಿಕೊಳ್ಳುತ್ತಾ ನನ್ನನ್ನು ದಿಟ್ಟಿಸಿ ನೋಡಿದರು. ತಲೆಯಿಂದ ಕಾಲಿನ ವರೆಗೆ ನೋಡಿದರು : 'ನಿನ್ನನ್ನು ನೋಡದೆ ಬಹಳ ದಿನಗಳಾದುವು. ಈಗ ಜೀವ ಸ್ವಲ್ಪ ಇದ್ದ ಹಾಗೆ ತೋರುತ್ತಿ........ಪರವೂರಿನ ಅಕ್ಕಿಯ ಗುಣ ನೋಡು. ಮೈಗೆ ಹಿಡಿ

ಯುತ್ತದೆಂದು ಕಾಣುವುದು........ಇಲ್ಲಿ ನಾವು ಅಕ್ಕಿ ನೋಡದೆ ಯುಗಗಳಾದುವು... , ಅವರ ಸಾಜವಾದ ಟೊಳ್ಳುನಗೆ ಹೊರಟಿತು. ಅವರು ಮುಂದೆ ಕೇಳಿದರು: 'ನೀವು ಇರುವ ಊರಿನಲ್ಲಿ ಯುದ್ಧ ಉಂಟೇ? ಮತ್ತೇನು ಸುದ್ದಿ, ಹೇಳಪ್ಪ ಪರವೂರಿನಿಂದ ಬಂದರೆ ಅಲ್ಲಿ ಕಂಡದ್ದು ಕೇಳಿದ್ದು ಎಲ್ಲ ನಮಗೆ ಹೇಳದಿದ್ದರೆ ನೀವೆಲ್ಲ ಹೋದದ್ದೇನು ಬಂತು?. . .'ಅವರು ಒಲೆಯ ಕಡೆಗೆ ತಿರುಗಿದರು.

ಚಹದಂಗಡಿಯ ಅಪ್ಪುನಾಯರ್ ಅಂಗಡಿಯ ಲಾಟೀನು ಉರಿಸುವುದಕ್ಕೆಂದು ಕುಳಿತಿದ್ದ. ಅದು ಓಬಿರಾಯನದಾಗಿರಬೇಕು. ನೆನೆ ಬತ್ತಿಯನ್ನು ಎಳೆದು ಹಿಡಿದು ಉಜ್ಜಿ ಜಜ್ಜಿ ಸರಿಪಡಿಸುತ್ತಿದ್ದ

ಉಕ್ಕುಣ್ಣಿನಾಯರ್ 'ಒಂದು ಆಪ್ (half) ಚಾ ಮಾಡಿ. ಹೊಸಬರು ಬಂದಿದ್ದಾರೆ. ...ಒಳ್ಳೇದು ಮಾಡಿ!' ಎಂದು ಅಪ್ಪುನಾಯರಿಗೆ ಅಪ್ಪಣೆ ಕೊಟ್ಟರು.

ಅಪ್ಪುನಾಯರ್ ಎದ್ದ. ಚಿಮಿಣಿ ಎಣ್ಣೆಯಲ್ಲಿ ತೊಯ್ದ ಕೈಯನ್ನು ಉಟ್ಟ ತೋರ್ತಿನಲ್ಲಿ ಉಜ್ಜಿಕೊಂಡು ಅಂಗಡಿಯ ಒಂದು ಮೂಲೆಗೆ ಒಟ್ಟಿದ ಕಟ್ಟಿಗೆಯ ಒಂದು ಕೊಳ್ಳಿಯನ್ನು ಎತ್ತಿ ಒಲೆಯೊಳಕ್ಕೆ ನೂಕಿದ. ಒಲೆಯ ಸುತ್ತು ಕುಳಿತವರಲ್ಲಿ ಒಬ್ಬನಿಗೆ ನಿದ್ದೆ ಹತ್ತಿತ್ತು; ಇನ್ನೊಬ್ಬನಿಗೆ ತೂಕಡಿಕೆ ಬಂದಿತ್ತು, ಮತ್ತು ಮೂರನೆಯವನಿಗೆ ನಿದ್ದೆಯಾಗಲಿ ತೂಕಡಿಕೆಯಾಗಲಿ ಬಳಿಗೇ ಬಂದಿರಲಿಲ್ಲವಾದರೂ ಎಚ್ಚರು ಇರಲಿಲ್ಲ; ಅವನ ಮನವೆಲ್ಲಿಯೋ ಅಲೆಯುತ್ತಿದ್ದಿರಬೇಕು ಅಪ್ಪುನಾಯರ್ ಇವರನ್ನು ತಟ್ಟಿ ಎಬ್ಬಿಸಿದ. ಒಲೆಯಲ್ಲಿ ಕೆಲವೇ ಕೆಂಡದ ಕಿಡಿಗಳಿದ್ದುವು. ಹೊಸಕೊಳ್ಳಿಯಿಂದ ಅವನು ನಿದ್ದೆಯಲ್ಲಿದ್ದವರನ್ನು ಎಬ್ಬಿಸಿದಂತೆ ಒಮ್ಮೆ ಜಡಿದು ಬೂದಿ ಹಾರಿಸಿದ. ಮತ್ತೆ ಬರಿಯ ಬಾಯಿಯಿಂದ ಊದಿ ಕೊಳ್ಳಿಗೆ ಉರಿ ತಾಗಿಸಿದ. ಬೆಂಕಿ ಎದ್ದಿತು.

ಉಕ್ಕುಣ್ಣಿನಾಯರ್ ತಿರುಗಿ ಕೈಕಾಲುಗಳನ್ನು ತಿಕ್ಕತೊಡಗಿದರು. ನಾನು ಅವರ ಮೈ ಮೇಲೇ ಕಣ್ಣಿಟ್ಟಿದ್ದೆ. ಅವರದು ಹುಲಿಯ ಮೋರೆಯಂತೆ ಕಡುಪಾದ ಮೊಗ; ಮೊಗದಲ್ಲಿ ಉದ್ದುದ್ದನ ಗಡ್ಡ. ಎಲ್ಲಾದರೂ ಆರುತಿಂಗಳಿಗೆ ಒಮ್ಮೆ ಗಡ್ಡ ಬೋಳಿಸುವರೋ ಇಲ್ಲವೋ. ಕೂದಲು

ನರೆತಿದೆ. ಗಡ್ಡದ ಬಣ್ಣವೂ ಮಾಸಿದೆ. ಕರಗಿದ ಅವರ ಮೈಯ ಬಣ್ಣ ಹಳದಿಯ ನೆರಳನ್ನು ತಂದಿತ್ತು. ಇಡಿಯ ಮೈ ತೊಗಲಲ್ಲಿ ಮುದುಪಿನ ಬರೆಹ ಅಚ್ಚಾಗಿತ್ತು. ಬಾಯಲ್ಲಿ ಒಂದು ಹಲ್ಲಾದರೂ ಉಳಿದಿರಲಿಲ್ಲ. ಬದಲು ಕಠ್ರಗೆ ಇರುವ ಹಲ್ಲಿನ ಬೇರುಗಳು ಉಳಿದಿದ್ದವು. ಮೈಮೇಲೆ ಎಲ್ಲಾ ನರಗಳೆದ್ದು ರೇಲವೇ ಲೈನ್ ತೋರಿಸುವ ಭೂಮಿಯ ಪಟದಂತೆ ತೋರುತಿತ್ತು. ಇನ್ನು ಹೇಳಬೇಕಾದ ಯಾವ ಬದಲಾವಣೆಯೂ ಇರಲಿಲ್ಲ. ಆದರೆ ಅವರು ಜತೆಯಲ್ಲಿ ಇಟ್ಟುಕೊಂಡಿದ್ದ ಒಂದು ಲಾಟೀನು ನೋಡಿ ನನಗೆ ನಗು ಬಂತು. ಒಡೆದು ಹೋದ ಅದರ ಗಾಜಿನ ಸುತ್ತಲೂ ಕಾಗದದ ಪತ್ತೆ ಹೊಡೆದಿದ್ದರು. ಅದನ್ನು ಗಾಜು ಎನ್ನುವುದಕ್ಕೆ ಬದಲು ಇನ್ನು ಏನಾದರೂ ಹೆಸರು ಕೊಟ್ಟರಾಗುತಿತ್ತು. ಹೊರಗೆ ಕಾಗವದ ಒಂದು ಪೊಟ್ಟಣ ಇಟ್ಟಹಾಗೆ ತೋರುತಿತ್ತು. ನಾನು ನಗುವುದನ್ನು ಕಂಡು ಉಕ್ಕುಣ್ಣಿನಾಯರ್ "ಏ. ಆರ್. ಪಿ." ಎಂದು ಗಟ್ಟಿಯಾಗಿ ಹೇಳಿಕೊಂಡು, ಬಾಯಿತುಂಬಿಸಿಕೊಂಡಿದ್ದ ತಂಬುಲವನ್ನು ತನ್ನ ಮೈಮೇಲೆಲ್ಲಾ ಚೆಲ್ಲಿಕೊಂಡು ಎಂದಿನ ನಗು ನಕ್ಕರು.

ಉಕ್ಕುಣ್ಣಿನಾಯರ್ ಕಡು ಜಿಪುಣ ಎಂದು ನಮ್ಮ ಊರಿನ ಜನ ಅನ್ನುತ್ತಿದ್ದರು. ನಿಜವಾದ ಮಾತು ಅವರಿಗೆ ಬೇಕಾದ ಸೊತ್ತು ಇದೆ, ಸಾಗುವಳಿ ಮಾಡುವ ಹೊಲಗದ್ದೆಗಳಿವೆ ಅಲ್ಲದೆ ಅವರು ಒಂದು ಹಳೆ ಮನೆತನಕ್ಕೆ ಸೇರಿದವರು. ಕಾಸು ಎಂದರೆ ಅಸುವನ್ನೇ ನೀಗಿಯಾರು. ಮನೆಯಲ್ಲಿ ಎಲ್ಲಾದರೂ ಒಂದು ಒಳ್ಳೆಯ ಊಟ ತಿಂಡಿ ಮಾಡಿಸಿ ಹೊಟ್ಟೆತುಂಬ ಉಂಡಿದ್ದರೆ ಆಣೆ! ತಾನು ಉಣ್ಣಲಿಲ್ಲ, ತನ್ನ ಮನೆಯಲ್ಲಿ ಇರುವವರಿಗೆ ಬೇರೆ ಕೊಡಲಿಲ್ಲ. ಕಾಯಿ ಹಾಕಿ, ಒಗ್ಗರಣೆ ಸೇರಿಸಿದ ಮೇಲೋಗರವನ್ನು ಅವರ ಮನೆಯ ಹೆಂಗಸರಿಗೆ ಅಟ್ಟು ತಿಳಿಯದು. ಒಂದು ಹಪ್ಪಳ ಸುಟ್ಟರೆ ಮೂರು ಊಟಕ್ಕೆ ಬರಬೇಕು. ಹೀಗೆ ದುಡ್ಡಿಗೆ ದುಡ್ಡು ಕೂಡಿಸಿ ತುಂಬ ಹಣ ಗಳಿಸಿಟ್ಟಿದ್ದರು. ಅಡವಿನ ಮೇಲೆ ಮಾಡು ಮುಟ್ಟುವ ಬಡ್ಡಿಯೇರಿಸಿ ದುಡ್ಡುಕೊಡುತ್ತಿದ್ದರು. ನಮ್ಮ ಹಳ್ಳಿಗೆ ಹಸಿವು ಬರಗಾಲ ಬಡಿದಾಗ ಉಕ್ಕುಣ್ಣಿನಾಯರ ದೆಸೆ ಇನ್ನೂ ನೆಟ್ಟಗಾಯಿತು. ಊರಿನ ಚಿನ್ನ ಬೆಳ್ಳಿಯ ಒಡವೆಗಳೆಲ್ಲ ಇವರ ಪೆಟ್ಟಿಗೆ ಸೇರಿದವು. ಹಸಿ

ವಿನ ಕೋಟಲೆಗೆ ತುತ್ತಾದ ಬಡಜನರು ಇವರ ಮನೆಗಾವಲು ಮಾಡಿದರು– ಹೇಗೋ, ಇವರು ಒಟ್ಟು ಮಾಡಿಟ್ಟಿದ್ದ ಅಕ್ಕಿ ಬತ್ತವನ್ನು ಅಳೆದು ಕೊಟ್ಟು ಬೆಳ್ಳಿಯನ್ನು ಅಳೆದು ತೆಗೆದುಕೊಂಡರು. ಹಳ್ಳಿಯ ಒಕ್ಕಲಿಗರು ಮನೆಮಾರನ್ನೇ ಇವರಿಗೆ ಬರೆದುಕೊಟ್ಟು ಹಸಿವಿನ ಬೆಂಕಿಯನ್ನು ಒತ್ತಿಟ್ಟುಕೊಂಡರು. ಸಾವಿನ ಬಲೆಗೆ ಈ ಬಡವರು ತುತ್ತಾದರು. ಅವರು ಇಲ್ಲದೆ ಹಸಿದು ಸತ್ತರು. ಉಕ್ಕುಣ್ಣಿನಾಯರ್ ಇದ್ದೂ ಹಸಿದು ಉಳಿದರು. ಕುಬೇರರಾದರು. ಹರಕು ಚಿಂದಿಯಾಗಿ ಹೋದ ತೋರ್ತು ಉಟ್ಟಿರುವ ಈ ಜಾಡಿನ ಜೊಳ್ಳನ್ನು ಕಂಡರೆ ಯಾರಾದರೂ ಇಸ್ಸೀ ಎಂದು ದೂರ ಹೋದಾರೇ ಹೊರತು, ಇವರೊಬ್ಬ ಕುಬೇರರಿದ್ದಾರೆಂದು ಯಾರೂ ತಿಳಿಯಲಾರರು. ತಾವೇ ಕಾಸುಕೊಟ್ಟು ಕೊಂಡಿದಾರೆಂಬ ಕಾರಣದಿಂದ ಹತ್ತು ಬಾರಿ ಸೆಳೆದರೂ ಉಳಿದಿರುವ ಚುರುಟದ ಕೊನೆಯ ತುಂಡು ಅವರು ಹೊರಗೆ ಬಿಸುಟುದನ್ನು ನಾನು ಎಂದೂ ನೋಡಿದ ನೆನಪಿಲ್ಲ. ಅದು ಕಿವಿಯಲ್ಲೇ ದಾಸ್ತಾನು.

ಕಾಲುಗಳನ್ನು ತಿಕ್ಕಿಕೊಂಡು ಉಕ್ಕುಣ್ಣಿನಾಯರ್ ಹೇಳಿದರು : 'ನೀನು ಹೋದಮೇಲೆ ನೋಡು, ಈ ಊರೇ ಬದಲಾಗಿ ಹೋಯಿತು. ಒಂದು ಲೆಕ್ಕದಲ್ಲಿ ನೀನು ಇಲ್ಲಿ ಇಲ್ಲದಿದ್ದುದು ಒಳ್ಳೆದೇ ಆಯ್ತು'.

'ಸರಿ, ಏನೆಲ್ಲಾ ನಡೆಯಿತು........' ನಾನು ಕೇಳಿದೆ.

'ನೀನು ಓದಿರಬಹುದು. ಹಸಿವು, ಜಾಡುಗಳ ಕೊಳ್ಳೆಯಿಂದ ಜನ ಹಾಳಾಗಿ ಹೋಯಿತು........'

ಕಾರ್ಣವರು ಊರ ಕಾರ್ಣವರು ತಾನೆ. ಊರಿನ ಒಳ್ಳಿತು ಕೆಟ್ಟುದೆಲ್ಲ ಅವರ ಪರಾಂಬರಿಕೆಗೆ ಬರತಕ್ಕುದೇ ಅಲ್ಲವೇ? ಬರಗಾಲದಿಂದ ಬರಡಾಗಿ ಹೋದ ಈ ಹಳ್ಳಿಯ ಹಾಳು ಬದುಕಿನ ಪಾಡನ್ನು ಬಾಯಿ ತುಂಬ ಬಣ್ಣಿಸಿದರು. ಆಗ ಅವರ ಬೆಕ್ಕಿನ ಕಣ್ಣುಗಳಂತಿದ್ದ ಕಣ್ಣುಗಳು ಪಿಳಿಪಿಳಿ ಎನ್ನುತ್ತಿದ್ದುವು.

ನಮ್ಮ ಹಿತ್ತಿಲ ರಾಮನ್ನಾಯರ್, ಉಕ್ಕುಣ್ಣಿನಾಯರ್ ಜಾಡಿನ ಕತೆ ತೆಗೆದರು. 'ನಿನಗೆ ಗೊತ್ತಿರಬಹುದು, ಕೌರಿ ಮಾರಾಟ ಮಾಡುತ್ತಿದ್ದ. ಅಕ್ಕರೆ (ಆ+ಕರೆ) ಯಲ್ಲಿ ಇರುತ್ತಿದ್ದ. ಒಂದು ದಿನ ಅವನು

ಸಂತೆಯಿಂದ ಮರಳಿ ಬರುವಾಗ ನಮ್ಮ ಮನೆ ಆಚಿಗಿನ ಓಣಿಯಲ್ಲಿ ನೋಡಿದೆ. ಅವನನ್ನು–

"ಏನು ರಾಮನ್‌ನಾಯರ್ ಹೇಗೆ ತೆಂಗಿನಕಾಯಿ ಅಗ್ಗವಾಗಿದೆಯೇನು ?" ಎಂದು ನಗುತ್ತ ಕೇಳಿದೆ. ರಾಮನ್‌ನಾಯರ್ ಹಿಂದು ಮುಂದು ನೋಡದೆ, "ಒಳ್ಳೆಯ ಕಾಯಿಗೆ ತೊಂಭತ್ತೆರಡು–" ಎಂದು ನೆಟ್ಟಗೆ ನಡೆದೇ ಬಿಟ್ಟ. ಸೊಂಟದಲ್ಲಿ ದುಡ್ಡಿನ ಚೀಲ ಡುಬ್ಬ ಎದ್ದಂತೆ ಎದ್ದು ಕಾಣುತ್ತಿತ್ತು. ಮಾರನೆಯದಿನ ಬೆಳಗಾಗ ನಾನು ಹೊಲಕ್ಕೆ ಹೋದಾಗ ನಾಲ್ಕಾರು ಜನ ಕೂಡಿ ಒಂದು ಹೆಣ ಹೊತ್ತುಕೊಂಡು ಹೋಗುವುದನ್ನು ನೋಡಿದೆ. ವಿಚಾರಿಸಿದಾಗ ರಾಮನ್ನಾಯರ್ ಕಾಲರಾದಿಂದ ಮಡಿದನೆಂದು ಗೊತ್ತಾಯಿತು.... .ಎಲ್ಲ ಹೀಗೆ ನೋಡು".

ಉಕ್ಕುಣ್ಣಿನಾಯರ್ ಸಾಜವಾಗಿ ನಕ್ಕರು. ಅದು ಮುಗಿದು ಬೇರೆ ಕತೆ ತೆಗೆದರು. ಕೆಳಗಿನ ತೋಪಿನ ಮನೆಯ ಕರುಣಾಕರ ಕುರುಪ್ಪಿನ ಮನೆಯಲ್ಲಿ ಎರಡು ದಿನಗಳೊಳಗೆ ಒಂಬತ್ತು ಮಂದಿ ಮರಣ ಹೊಂದಿದರು. ಕುಟ್ಟಿ ಕೃಷ್ಣನಾಯರ ಎರಡನೆ ಹೆಂಡತಿ ತುಂಬ ಚೆಲುವೆಯಂತೆ ; ತುಂಬಿದ ಬಸುರಿ ಬೇರೆ. ಆಕೆಯೂ ಬಲಿಬಿದ್ದಳು ಈ ಜಾಡ್ಯದ ಸೇಡಿಗೆ. ಹೂಳಿಟ್ಟಲ್ಲಿಂದ ಆಕೆಯ ಹೆಣವನ್ನು ನರಿನಾಯಿಗಳು ಎಳೆದು ಹಾಕಿದುವಂತೆ. ಅದರ ಹಪ್ಪು ನಾರುವುದಕ್ಕೆದ್ದು ಆ ದಾರಿಯಾಗಿ ಹೋದರೆ ಏನಾದೀತೆಂದು ಕುಟ್ಟಿ ಕೃಷ್ಣನಾಯರಿಗೇ ಗೊತ್ತು. ಎರಡು ದಿನಗಳ ಮೇಲೆ ಅವರು ಅತ್ತ ಹೋದರು. ಹೋಗುವುದನ್ನು ನಾವೆಲ್ಲ ನೋಡಿದೇವೆ. ಬರುವುದನ್ನು ನೋಡಲಿಲ್ಲ. ಅವರು ಅಲ್ಲಿ ವಾಂತಿಯಿಂದ ಸತ್ತರು. . .ಆಮದು ಕುಟ್ಟಿಯ ಅಂಗಡಿಯ ಜಗಲಿಯಲ್ಲಿ ರಾತ್ರಿ ನಾಲ್ಕಾರು ಜನ ಮಲಗುತ್ತಿದ್ದರು. ಕೊನೆಕೊನೆಗೆ ರಾತ್ರಿ ಬೆಳಗಾಗುವುದರೊಳಗೆ ಮಲಗಿದವರೆಲ್ಲ ಗೂಡಿನಲ್ಲಿ ಇಲಿ ಬಿದ್ದ ಹಾಗೆ ಹೆಣವಾಗುತ್ತಿದ್ದುದು ನಮಗೆ ಹೊಸತೇನಲ್ಲ. ಈಚೆಗೆ ನಿನ್ನೆ ನೋಡಿದವರನ್ನು ಇಂದೂ ನೋಡಿಯೇವೆಂದು ಹೇಳಲು ಆಗುತ್ತಿರಲಿಲ್ಲ........

ಉಕ್ಕುಣ್ಣಿನಾಯರ ಬೊಳ್ಳುನಗೆ ಕಹಳೆಯಂತೆ ಮೊಳಗಿತು. ನನಗೂ ತುಸ ನಗುಬಂತು. 'ಗೂಡಿನಲ್ಲಿ ಇಲಿ ಬಿದ್ದಹಾಗೆ' ಎಂದು ಉಕ್ಕುಣ್ಣಿ

ನಾಯರ್ ಕೊಟ್ಟ ಉಪಮೆ ಚೆನ್ನಾಗಿದೆಯೆಂದು ನಗುವಿನೊಂದಿಗೆ ನಮ್ಮ ಕಾರ್ಣವರ ಕೆಲವು ದಿವ್ಯಶಕ್ತಿಗಳ ನೆನಪೂ ಆಯಿತು. ಅವರಿಗೆ ಊರಿನ ಜನ ಹೆದರಿಕೊಳ್ಳುತ್ತಿದ್ದರು. ಕಪ್ಪಿಡಿದ ಅವರ ನಾಲಗೆಯಿಂದ ಏನಾದರೂ ಹೊರಟಿತು ಎಂದರೆ ಅದು ಬೆಂಕಿ ಹಾಕಿದ ಹಾಗೆ. ತಾಯಂದಿರು ಮಕ್ಕಳನ್ನು, ಒಕ್ಕಲಿಗರು ತಮ್ಮ ಬೆಳೆಯನ್ನು, ದನಕರುಗಳನ್ನು ಇವರ ನೋಟದಿಂದ ದೂರವಿರುವಂತೆ ಜತನ ಮಾಡುತ್ತಿದ್ದರು. ಯಾವ ಒಳ್ಳೆಯ ಸಾಮಾನು ಕಂಡರೂ ಉಕ್ಕುಣ್ಣಿನಾಯರ್ ಅದಕ್ಕೆ ಕಣ್ಣಿಟ್ಟು ಕೊರತೆ ಹೇಳುತ್ತಿದ್ದರು.

ಒಬ್ಬ ಒಕ್ಕಲಿಗನ ತೋಟದ ತುಂಬ ತರಕಾರಿ ನಟ್ಟಿದ್ದ. ಬೆಳೆ ಹೊರವಾಗಿತ್ತು. ಇನ್ನು ಉಕ್ಕುಣ್ಣಿನಾಯರ್ ಎಲ್ಲಾದರೂ ಕಂಡರೆ ಏನೆಂದು ಬಿಡುವರೋ ಎಂದು ಹೆದರಿ, ಉಕ್ಕುಣ್ಣಿನಾಯರನ್ನು ಹೋಲುವ ಒಂದು 'ಬೆರ್ಚಪ್ಪ'ನನ್ನು ಮಾಡಿ ತೋಟದಲ್ಲಿ ಇರಿಸಿದ. ಅದರ ಒಂದು ಕೈಯಲ್ಲಿ ಒಂದು ದೊಣ್ಣೆ, ಇನ್ನೊಂದು ಕೈಯಲ್ಲಿ ಒಂದು ಗೆರಟೆ (ಚಿಪ್ಪು) ಕೊಟ್ಟ. ಅದರ ಹೊಟ್ಟೆಯಮೇಲೆ ಸುಣ್ಣದಲ್ಲಿ "ಸುಡುಗಣ್ಣ" ಎಂದು ಬರೆದ. ಇದು ನಗೆಗಾಗಿ.

ಉಕ್ಕುಣ್ಣಿನಾಯರ್ ಒಮ್ಮೆ ಒಂದು 'ಸ್ಟೀಮ್ ರೋಲರ'ನ್ನು ಚರಂಡಿಗಿಳಿಸಿದ ಕತೆ ಬಹು ಸ್ವಾರಸ್ಯವಾಗಿದೆ. ಫೈರ್‌ಮನ್ ಎದ್ದು ಎಂಜಿನಿಗೆ ಕಟ್ಟಿಗೆ ಇದ್ದಿಲು ಹಾಕಿ ಉಗಿ ಏರಿಸುತ್ತಿದ್ದ. ಅಂದು 'ಮೇನ್ ರೋಡಿ'ನ ಮುಕ್ಕಾಲು ಮೈಲಿಯ ದಾರಿ 'ರಿಪೇರಿ' ಮಾಡಬೇಕಾಗಿತ್ತು. ಉಕ್ಕುಣ್ಣಿನಾಯರ್ ತನ್ನ ಗರುಡಗಂಬವನ್ನು ಹಿಡಿದು ಶನಿ ಬಂದ ಹಾಗೆ ಅಲ್ಲಿಗೇ ಬಂದರು. ಎಂಜಿನು ಹೊಗೆ ಬಿಡುತ್ತಿರುವುದನ್ನು ಕಂಡು ಅವರಿಗೆ ನಗು ಬಂತು. 'ಚುಟ್ಟ ಎಳೆದುಕೊಂಡು ಎಲ್ಲಿಗೆ ಪಯಣ?' ಎಂದು ಎಂಜಿನನ್ನು ಕುರಿತು ಅಂದರು. ಎಂಜಿನು ಮುಂದೆ ಸಾಗಿತು. ಉಕ್ಕುಣ್ಣಿ ನಾಯರ್ ನಿಂತು ನೋಡುತ್ತಿದ್ದರು. ನಾಲ್ಕು ಮಾರು ಹೋಗಿರಲಿಲ್ಲ, 'ರೋಲರ್' ಅಡಿ ಮಗುಚಿ ಚರಂಡಿಗೆ ಉರುಳಿಹೋಯಿತು........ಇಂತಹ ಹಲವು ಕತೆಗಳಿವೆ. ಉಕ್ಕುಣ್ಣಿನಾಯರ ನಾಲಗೆಯ ನಡುವಿನಲ್ಲಿ ಕಪ್ಪಗಿನ ಮೂರು ಚುಕ್ಕೆಗಳಿವೆಯಂತೆ. ನಾನು ಅವನ್ನು ನೋಡಿಲ್ಲ. ಆದರೆ

ಅವರು ಕೊಡುವ ಒಂದೊಂದು ಹೋಲಿಕೆಯ ಮಾತೂ ಬಲು ಚೆನ್ನಾಗಿರುತ್ತದೆ. ಅವರ ಟೊಳ್ಳುನಗೆಯಂತೆಯೇ ಈ ಹೋಲಿಕೆಗಳೂ ಅವರಿಗೆ ತಿಳಿಯದಂತೆ ಹೊರಡುವುವು. ಅವುಗಳು ಬಳಿಕೆಯವು ನನಗೆ.

ಒಂದು ದಿನ ಕತ್ತಲೆಯಲ್ಲಿ ಹೊರಟಿದ್ದೆ. ದಾರಿಯಲ್ಲಿ ಉಕ್ಕುಣ್ಣಿನಾಯರು ಹಳೆಯ ಲಾಟೀನು ಮತ್ತು ಎಣ್ಣೆಯ ಚಿಪ್ಪು ಹಿಡಿದು ಎದುರಿಗೇ ಬರುತ್ತಿದ್ದರು ಒಬ್ಬರನ್ನೊಬ್ಬರು ಕೂಡಿದೆವು. ಅಷ್ಟರಲ್ಲಿ ಎಲ್ಲಿಂದಲೋ ಒಂದು ಬಡನಾಯಿ 'ಕೊಂಬು ಹಿಡಿದು' (ಕೋಽ ಎಂದು) ಕೂಗಿಕೊಂಡು ನಮ್ಮ ನಡುವೆ ಸುಳಿಯಿತು. ಉಕ್ಕುಣ್ಣಿನಾಯರನ್ನು ಕಂಡೊಡನೆ ಹಲ್ಲು ಚಿಲಿದು ತಿರುಗಿ ಕೊಂಬು ಹಿಡಿಯಿತು ಉಕ್ಕುಣ್ಣಿನಾಯರಿಗೆ ಸಿಟ್ಟೆದ್ದಿತು. ಅವರು ನಾಯ ಮೇಲೆ ಉರಿದು ಅಂದರು: 'ನೋಡು ದಾರಿಯಲ್ಲಿ ಹೆಚ್ಚುಗತ್ತಿ ನಿಂತಂತೆ ನಿಂತಿದೆ. ಸುಡುಗಾಡಿನದು' ನಾಯಿಯನ್ನು ನೂಕಿಕೊಂಡು ಅವರು ದಾರಿಯ ಒಂದು ಪಕ್ಕಕ್ಕೆ ಹಕ್ಕಲು ನೆಲದ ಮೇಲೆ ನಡೆದು ಹೋದರು ನಾನು ಮುಂದುವರಿದೆ

ಕೆಲವು ಮಾರು ದೂರ ನಡೆದಿದ್ದೆ. ಹಿಂದಿನಿಂದ ಒಂದು ಲಾರಿಯ ಹಾರ್ನ್ ಕೇಳಿಸಿತು. ಅದರೊಂದಿಗೆ ನಾಯಿಯ ಕೊಂಬೂ ಗಾಳಿಯನ್ನು ಸೀಳಿಕೊಂಡು ಬಂತು. ಲಾರಿ ಹಾರಿ ಹಾದುಹೋಯಿತು. ನಾನು ಹೊರಳಿ ನೋಡುವಾಗ ನಾಯಿ ಆಸುನೀಗುವ ಕೊನೆಯ ಉಸಿರು ಎಳೆಯುತ್ತಿತ್ತು. ಆಗ ಅದು ಕೊಟ್ಟ ಗೋಳಿನ ಕೊರಳು ಇಂದಿಗೂ ನನ್ನ ಕಿವಿಯಲ್ಲಿ ಮೊಳಗುತ್ತಿದೆ. ನಸುಗತ್ತಲೆಗೆ ಹಾಗೆ ಚಿಲಿದು ಕುಳಿತಿದ್ದ ನಾಯನ್ನು ಹೆಚ್ಚುಗತ್ತಿಗೆ ಹೋಲಿಸಿದ ಅವರ ನುಡಿವಲ್ಮೆಯನ್ನು ಮರೆಯಲಾಗುವುದಿಲ್ಲ

ಇದೇ ರೀತಿಯಲ್ಲಿ ಕುಡುಗಣ್ಣಿನ ಉಕ್ಕುಣ್ಣಿನಾಯರನ್ನು ಇನ್ನೊಬ್ಬ ಮಾಪಿಳ್ಳೆ ಗೆದ್ದ ಕತೆಯೊಂದುಂಟು. ಅವನ ಕಣ್ಣು ಸುಡುಗಾಡಿನದೇ. ಆಗ ತಾನೆ ಮಳೆ ಬಿದ್ದು ಹೊಲಗದ್ದೆಗಳ ತಡಿಗಳು ನಡೆವುದಕ್ಕಾಗುತ್ತಿರಲಿಲ್ಲ. ಉಕ್ಕುಣ್ಣಿನಾಯರ್ ಎಂದಿನಂತೆ ತಮ್ಮ ಕಂದೀಲು ಚಿಪ್ಪುಗಳನ್ನು ಹಿಡಿದುಕೊಂಡು ಗರುಡಗಂಬದ ದಾಸಯ್ಯನಂತೆ ಹೊರಟಿದ್ದರು.

ಕುಳಿರುಗಾಳಿ ತಟ್ಟದಂತೆ ಅಂದಿನದೋ ಎಂದಿನದೋ ಒಂದು ಹಳೆಯ ಕಾಕಿ ಕೋಟು ತೊಟ್ಟುಕೊಂಡಿದ್ದರು. ಮಾಪಿಳ್ಳೆ ಉಕ್ಕುಣ್ಣಿನಾಯರಿಗೆ ಎದುರಾಗಿ ಬರುತಿದ್ದ. ನಾಯರನ್ನು ಕಂಡು, "ಏನಿದು ತೆಂಗಿನ ಮರ ಗಳಿಗೆ ನಂಬರು ಕೊಡುವುದಕ್ಕೆ ಹೋಗಿದ್ದಿರಾ ?" ಎಂದು ಕೇಳಿಯೇ ಬಿಟ್ಟ. ಉಕ್ಕುಣ್ಣಿಯನಾಯರ್ ಒಮ್ಮೆ ಓರೆಗಣ್ಣಿನಿಂದ ಮಾಪಿಳ್ಳೆಯನ್ನು ನೋಡಿದವರೇ ತಮ್ಮ ದಾರಿ ಹಿಡಿದರು. ಎರಡು ಹೆಜ್ಜೆ ನಡೆವುದರೊಳಗೆ ಕಾಲು ಜಾರಿತು. ಬಸ್ಸೆಂದು ಅವರು ಹೊಲದ ಕೆಸರು ನೀರಿಗೆ ಹೊರಳಿ ಬಿದ್ದರು. ಉಕ್ಕುಣ್ಣಿನಾಯರ್ ತಮ್ಮ ಎಲ್ಲ ಆಸ್ತಿಯನ್ನೂ ಕೆಸರು ನೀರಲ್ಲಿ ಅದ್ದಿಕೊಂಡು ನಮ್ಮ ಮಾಮೂಲಿನ ಚಹದಂಗಡಿಗೆ ಬಂದರು. ಅಲ್ಲಿ ಅವರ ಈ ವೇಷವನ್ನು ಕಂಡು ನಮಗೆ ನಗು ಬಂದರೂ ನಗಲಾಗಲಿಲ್ಲ. ಆದರೆ ಅವರು ಮಾಪಿಳ್ಳೆಯನ್ನು ಹಾಳಾಗೆಂದು ಹೇಳಿದ್ದನ್ನು ಕೇಳಿ ನಗು ತಡೆಯಲಾಗಲಿಲ್ಲ. ಉಕ್ಕುಣ್ಣಿನಾಯರ 'ಕೋಲ' ವೇ ಬದಲಾಗಿ ಬಿಟ್ಟಿತ್ತು. ಮಾತು ಮಾತಿಗೆ ಟೊಳ್ಳುನಗೆಯನ್ನು ಹಾರಿಸುವ ಬದಲು ಬುರ್ ಬುರ್ ಎಂದು ಉಗುಳಿಕೊಂಡು ಅವರು ನಡೆದ ಕತೆ ಹೇಳಿದರು.

ನಿಜ. ಉಕ್ಕುಣ್ಣಿನಾಯರ್ ಇಲಿಗೂಡಿನ ಹೋಲಿಕೆ ಹೇಳಿದಾಗ ಇವೆಲ್ಲ ನೆನಪಿಗೆ ಬಂತು. ವಿಧಿಯ ಆಟ ಬಹಳ ಮೋಜಿನದು. ಕಾಲರಾ ದಿಂದ ಲೆಕ್ಕವಿಲ್ಲದಷ್ಟು ಜನ ಸತ್ತು ಹೋದರೂ ಮಿತ್ತುವಿಗೆ ಉಕ್ಕುಣ್ಣಿ ನಾಯರನ್ನು ಮೂಸಿನೋಡುವುದಕ್ಕೂ ಧೈರ್ಯ ಇರಲಿಲ್ಲ.

ಆಚೆ ಹಿತ್ತಿಲಲ್ಲಿ ಮರ ಕಡಿಯುತ್ತಿದ್ದರು. ಮರದ ತುದಿಗೇರಿ ಕೊಂಬೆಗಳನ್ನು ಕಡಿದೊಗೆಯುತ್ತಿದ್ದೊಬ್ಬನನ್ನು ನೋಡಿಕೊಂಡು ಅಲಸಿ ಗರು ಕೆಲವರು ನಿಂತಿದ್ದರು. ಕೆಳಗಿನಿಂದ ಇಬ್ಬರು ಮರಕ್ಕೆ ಹಾಕಿದ ಹಗ್ಗವನ್ನು ಹಿಡಿದೆಳೆಯುತ್ತಿದ್ದರು

ಇಂತಹ ಬೀಳುವ ನೋಟಗಳನ್ನು ನೋಡುವುದಕ್ಕೆ ಪ್ರಕೃತಿಗೆ ಮಾತ್ರವಲ್ಲ ಮನುಷ್ಯನಿಗೂ ಒಂದು ತರದ ಆನಂದವಿದೆ. ಮರವನ್ನು ಬೆಳಸುವುದಾಗಲಿ, ಮನೆ ಕಟ್ಟುವುದಾಗಲಿ ಒಂದು ಕಡೆ ನಡೆಯುತ್ತಿದ್ದರೆ ಅಲ್ಲಿ ಜನ ಹೆಚ್ಚುಹೆಚ್ಚಾಗಿ ನೆರೆವುದಿಲ್ಲ. ದೊಡ್ಡ ಮರ ಕಡಿವಲ್ಲಿ ಇಲ್ಲವೆ ಮನೆ ಬಿದ್ದಲ್ಲೆಲ್ಲ ಜನ ನೋಡುತ್ತ ನಿಲ್ಲುವರು.

ಉಕ್ಕುಣ್ಣಿನಾಯರ್ ಚಾದಂಗಡಿಯಲ್ಲಿ ಕುಳಿತಿದ್ದರೂ ಅವರ ಮನಸ್ಸೆಲ್ಲ ಮರ ಕಡಿವಲ್ಲಿ ನೆಟ್ಟಿತ್ತು. ಅಂಗಡಿ ತಟ್ಟಿಯ (ಮಳಲಿಂದ ಕಟ್ಟಿದ ಗೋಡೆ) ಎಡೆಯಿಂದ ಇಣುಕಿ ಆಗಾಗ ಅತ್ತ ನೋಡಿಕೊಳ್ಳುತ್ತಿದ್ದರು. ಏ, ಅಂಬೂ ತುಸ ಆಚೆಗೆ ನಿಂತು ಎಳೆಯೋ.......ಕೋತಿಯ ಹಾಗೆ ಜಗುತ್ತಿಯೇನು ? ಕೋಮು ಹಿಂದೆ ನಿಲ್ಲು. .....ಹುಡುಗರು ಎಲ್ಲ ಅಲ್ಲಿಂದ ದೂರ ಹೋಗತೀರೋ ಇಲ್ಲವೋ ?........' ಎಂದು ಕುಳಿತಲ್ಲಿಂದಲೇ ಕಾರ್ಣವರು ಅಪ್ಪಣೆ ಕೊಡುತ್ತಿದ್ದರು. ಇವರಿಗೆ ಯಾರೂ ಕಿವಿ ಕೊಡುತ್ತಿರಲಿಲ್ಲ. ಉಕ್ಕುಣ್ಣಿನಾಯರಿಗೆ ಅದು ಗೊತ್ತು ಆದರೂ ಅವರ 'ಕಾರ್ಣವರ' ಕೆಲಸ ಅವರು ಮಾಡಿಕೊಳ್ಳುತ್ತಿದ್ದರು.

'ಒಳ್ಳೇ ಹಲಸು ಬಿಡುತ್ತಿತ್ತು. ಸುಮ್ಮನೆ ಯಾಕೆ ಮರ ಕಡಿಯುತ್ತಾರೆಯೋ !' ನಾನು ನಡುವೆ ಬಾಯಿ ಹಾಕಿದೆ.

ಉಕ್ಕುಣ್ಣಿನಾಯರಿಗೆ ಮಾತನಾಡುವುದಕ್ಕೊಂದು ವಸ್ತು ಕೊಟ್ಟ ಹಾಗೆ ಆಯಿತು. ಅವರು ತಮ್ಮ ಕರ್ರಗಿನ ಹಲ್ಲಿನ ಬೇರುಗಳನ್ನು ತೋರಿಸುವ ಮುಗುಳುನಗೆ ನಕ್ಕರು ಒಮ್ಮೆ ಸುತ್ತಲು ನೋಡಿಕೊಂಡು ನಾಯರು ತುಸ ಸರಿದು ಸಮನಾಗಿ ಕುಳಿತರು.

'ಯುದ್ಧ ಸಮಯ ಬೆಲೆ ಬಂದೀತೆಂದು ಇರಬೇಕು' ಎಂದು ನಾನು ಸಂದೇಹ ಪಟ್ಟು ಹೇಳಿದ. ಉಕ್ಕುಣ್ಣಿನಾಯರ್ ಬೆನ್ನು ನೆಟ್ಟಗೆ ಮಾಡಿ ಕುಳಿತರು. 'ಅದರ ಹಿಂದೆ ಬೇರೆ ಕತೆಯಿದೆ–'

ಉಕ್ಕುಣ್ಣಿನಾಯರ್ ಹೆಗಲಮೇಲೆ ಕುಳಿತಿದ್ದ ನುಸಿಯೊಂದನ್ನು ಕೈಯಿಂದ ಹೊಡೆದು 'ಚತ್ತ್‌ಪೋ !' (ಸತ್ತು ಹೋಗು) ಎಂದು ಉಸಿರು ಬಿಟ್ಟರು. ಮತ್ತೆ ಹೆಗಲಮೇಲೆ ಕೈಯಾಡಿಸಿ ಕುಳಿತುಕೊಂಡರು.

'ಏನು ಕತೆ ?' ಎಂದು ನಾನು ಆತುರದಿಂದ ಕೇಳಿದೆ. ಉಕ್ಕುಣ್ಣಿನಾಯರು ಸುಮ್ಮನಿದ್ದರು. ಮೈಕೈಗಳನ್ನು ತಿಕ್ಕಿಕೊಳ್ಳುತ್ತ ಬಹಳ ಹೊತ್ತಿನ ಮೌನವೊಡೆದು ಕೇಳಿದರು: 'ಕೃಷ್ಣನಾಯರನ್ನು ನೋಡಿದ್ದೆಯೇನು ?'

'ಯಾವ ಕೃಷ್ಣನಾಯರ್ ?' ನಾನು ಕೇಳಿದೆ.

'ಕಣಕ್‌ಪಿಳ್ಳೆ *ಕೃಷ್ಣನಾಯರ ಗೊತ್ತೇ ಇಲ್ಲವೇ? ನೋಡು, ಕಾಲು ಮೋಟು ಇದ್ದವ? ಮೇಲಕ್ಕಾಡು ಕೃಷ್ಣನ್‌ನಾಯರ್.'

'ಓ, ತಿಳಿಯಿತು.' ನಾನೆಂದೆ.

'ಕಣಕ್ಕ್ ಪಿಳ್ಳೆ ಮತ್ತು ಅವನ ಇಬ್ಬರು ಸೋದರಿಯರೂ ಅಲ್ಲಿ ಇದ್ದರು.' ಎಂದು ನಾಯರು ಆಚೆ ಹಿತ್ತಿಲಿಗೆ ಬೆಟ್ಟು ತೋರಿಸಿದರು.

'ಆ ಮಾಳಿಗೆ ಮನೆಯಲ್ಲಿ–'

'ಹಾಗಾದರೆ ನಿನಗೆ ಈಚೆಗೆ ನಡೆದ ಕತೆ ಗೊತ್ತಿಲ್ಲ. ಅವರು ಮನೆ ಮಾರು ಮಾರಿ ಬಹಳ ಕಾಲವಾಯಿತು. ಕಣಕ್‌ಪಿಳ್ಳೆ ಹೆಂಡ ಕುಡಿದು ಹೊರಲಾರದ ಹೊರೆ ಹೇರಿದ. ಅವನು ಕಾಲರಾದ ಬಲಿಗೆ ಬಿದ್ದು ಹೋದ. ಒಂದು ವಾರದೊಳಗೆ ದೊಡ್ಡವಳು ತೀರಿಕೊಂಡಳು. ಅಮ್ಮು ಉಳಿದುಕೊಂಡಳು. ಮನೆಯಲ್ಲಿ ಒಬ್ಬಳೇ ಇದ್ದಳು. ಹೆಸರಿಗೊಬ್ಬ ಮುದುಕಿ ಒಟ್ಟಿಗಿದ್ದಳು. ಉಣ್ಣುವುದಕ್ಕೆ ಬಿಡಿಕಾಸೂ ಇರಲಿಲ್ಲ. ಸಾಲ ಯಾರೂ ಕೊಡಲಿಲ್ಲ..... .'

ಒಲೆಯ ಎದುರಿಗೆ ಕುಳಿತ ಅತಿಕಾಯ ನಡುವೆ ಬಾಯಿ ಹಾಕಿದ:

'ಹೇಗೆ ಹುಟ್ಟೀತು ಸಾಲ? ಅವರಲ್ಲಿದ್ದ ಸೊತ್ತನ್ನೆಲ್ಲ ಇವರು ಮೋಸದಿಂದ ಬರೆಸಿಕೊಂಡಮೇಲೆ, ಮತ್ತೆ ಯಾರು ಕೊಡಬೇಕು ಸಾಲ?'

ಇದನ್ನು ಕೇಳಿ ನಾಯರ್ ಯಾವ ಅರ್ಥವೂ ಹೊರಡದ ತನ್ನ ಟೊಳ್ಳು ನಗೆ ಮೊಳಗಿದರು. ಅವನು ಅಲ್ಲಿಗೆ ಮುಗಿಸಲಿಲ್ಲ 'ಪಾಪ, ಅವರು ಇವರನ್ನು ನಂಬಿ ಹಾಳಾದರೂ ಸಾವಿನ ಹಾಸಿಗೆಯಲ್ಲಿ ಅವರು ಮಲಗಿಕೊಂಡಿದ್ದಾಗ ಒಂದು ಹಿಡಿ ಅಕ್ಕಿ ಕೊಡಿರೆಂದು ದಮ್ಮಯ್ಯ ಹಾಕಿ ಬೇಡಿದರೂ ಈ ಪುಣ್ಯಾತ್ಮನಿಗೆ ದಯೆ ಹುಟ್ಟಲಿಲ್ಲ. .....'

'ಕೊಡುವುದು ಇದ್ದರೆ ತಾನೇ? ನಮಗೇ ಉಣ್ಣಲು ಅಕ್ಕಿ ಇಲ್ಲದಿರುವಾಗ, ಈ ಮಕ್ಕಳಿಗೆಲ್ಲ ಅಕ್ಕಿ ದಾನ ಮಾಡುತ್ತೇನೆ ಅವರವರದು ಅವರವರಿಗೆ ಗೊತ್ತು........ನಿನಗೇ ಕೊಡಬಹುದಿತ್ತಲ್ಲ ಪುಣ್ಯ ಬರುತಿತ್ತು!........'

---

* ಕಣಕ್‌ಪಿಳ್ಳೆ–ಜಮೀನುದಾರರ ಮನೆಯಲ್ಲಿ ಲೆಕ್ಕಪತ್ರಗಳನ್ನು ಇಟ್ಟುಕೊಳ್ಳುವ ಶಾನುಭೋಗ.

ಉಕ್ಕುಣ್ಣಿನಾಯರ್ ಕಾಲಿಗೆ ಎಣ್ಣೆ ತಿಕ್ಕುವುದನ್ನು ಸಾಕು ಮಾಡಿ ಕಾಲನ್ನು ಒಮ್ಮೆ ಈಡಾಡಿ ಎದ್ದು ಮೈಮುರಿದುಕೊಂಡರು.

'ಕೂತುಕೊಳ್ಳಿ. ಮತ್ತೇನಾಯಿತು ಹೇಳಿ–' ಎಂದೆ ನಾನು.

ಅವರು ಕುಳಿತುಕೊಂಡು ಹೇಳಿದರು : 'ಆಗುವುದೇನು ? ಅವಳು ಕೆಲವು ಹೊಸಪಾಟಗಳನ್ನು ಇಟ್ಟುಕೊಂಡಳು. ....'

ಅಂಗಡಿಯವನು ಚಾ ಮಾಡುತ್ತಿದ್ದ. ಉಕ್ಕುಣ್ಣಿನಾಯರು ಮುಂದು ವರಿದರು. 'ಪಟ್ಟಣದಿಂದ ಹೆಣ್ಣಿನ 'ಒಲವಿ'ಗಾಗಿ ಭರುವ ತರುಣರೂ ರಜೆ ಪಡೆದು ಬರುವ ವಡೆಯ ಜನರೂ ಬಂದು ಹೋಗುವುದನ್ನು ನಾನು ಕಣ್ಣಾರೆ ಕಂಡಿದೇನೆ.'

'ಅವಳಿಗೆ ಹಸಿವು ಹುಟ್ಟಿತು ಬದುಕಬೇಕೆಂಬ ಆಸೆ ಇತ್ತು. ಹೇಗಾದರೂ ಬದುಕುವುದೆಂದು ಮಾಡಿದಳು. ಅವಳದೇನು ತಪ್ಪು?'

ಆತಿಕಾಯ ಕಾಲಿನ ಉಗುರು ಕೊಯ್ದು ಒಟ್ಟಿದುದನ್ನು ಕೈಯಲ್ಲಿ ಹೆಕ್ಕಿ ಎದ್ದು ನಿಂತ.

'ಹೊಟ್ಟೆ ಹೊಟ್ಟೆ ಎಂದು ಹೊಟ್ಟೆ ಮಾಡಿಸಿಕೊಂಡಳು.' ಉಕ್ಕುಣ್ಣಿ ನಾಯರ್ ಕಟಕಟ ಎಂದು ನಕ್ಕರು. ಮೊಣಕಾಲನ್ನು ತಿಕ್ಕಿಕೊಳ್ಳುತ್ತಾ ಮತ್ತೆ ಹೇಳಿದರು. 'ಕಡೆಗೆ ಒಂದು ದಿನ ಆ ಮರಕ್ಕೆ ನೇಣುಹಾಕಿ ಸತ್ತಳು . .ಅವಳಿಂದಾಗಿ ಈ ದಾರಿ ಈಗ ಬಂದ್ ಆಯಿತು.' ಅವರು ಮತ್ತೆ ನಕ್ಕಾಗ ಸತ್ತುಹೋದ ಅಮ್ಮುಣ್ಣಿಯ ಮರುಳು ಇವರ ಗಂಟಲು ಹಿಸುಕಿ ನಗಿಸುವಂತೆ ಕೇಳಿಸಿತು.

'ಒಂದು ದಿನ ಅಮ್ಮುಣ್ಣಿಯ ಪಿಶಾಚಿ ಬಂದು ನಮ್ಮ ಕಾರ್ಣವ ರನ್ನು ದಿಕ್ಕಾಪಾಲಾಗಿ ಓಡಿಸಿಬಿಟ್ಟಿತ್ತು. ಅದೇ ನಾನು ನೋಡಿದ್ದು ಇವರಿಗೂ ಓಟ ಹಿಡಿಯಲು ಬರುತ್ತೇಂತ.' ಅಪ್ಪುನಾಯರು ನಗುತ್ತ ಹೇಳಿದ. ಅವನು ಚಾ ಮಾಡಿ ತಂದುಕೊಟ್ಟ. ಉಕ್ಕುಣ್ಣಿನಾಯರಿಗೆ ಒಂದು ಕಪ್ಪೆಯ ನಗೆ ಬಂತು.

'ಈಗ ಆ ಮನೆಗೆ ಯಾರೂ ಒಕ್ಕಲು ಬರುವುದಿಲ್ಲ. ಆದಕ್ಕೆಂತಲೇ ಆ ಹಿತ್ತಿಲ 'ಮೊದಲಾಳಿ' (ಅಸಲು ಕೊಟ್ಟು ಪಡಕೊಂಡವರು) ಈ ಮರ

ವನ್ನು ಕಡಿದುಹಾಕಬೇಕೆಂದು ಮಾಡಿದಾರೆ. ಇದು ಅದರ ಕತೆ ಯಾಯಿತು.' ಉಕ್ಕುಣ್ಣಿನಾಯರ್ ಕತೆ ಮುಗಿಸಿದರು.

ನಾನು ಚಾದ ಗುಟುಕು ಹೀರುತ್ತಿದ್ದೆ. ಹಳೆಯ ನೆನಹು ಒಂದೊಂದಾಗಿ ಬರತೊಡಗಿತು. ಅಮ್ಮು ಇನ್ನೂ ಸಣ್ಣ ಹುಡುಗಿಯಾಗಿದ್ದಾಗ ನನಗೆ ಗೊತ್ತು. ಏಕಾದಶಿಯದಿನ ಬೆಳಗ್ಗೆ ನದಿಯಲ್ಲಿ ಮಿಂದು, ತಲೆ ಮುಡಿಯನ್ನು ನೇವರಿಸಿ ಗಂಟುಹಾಕಿಕೊಂಡು ಹೋಗುವುದನ್ನು ನೋಡಿದೇನೆ. ಜವ್ವನದ ಮುನ್ನುಡಿಯೆಂಬ ಹಾಗೆ ಗುಡಿಯೆತ್ತಿ ತೋರುವಂತೆ ತೆಳ್ಳಗಿನ ಬ್ಲೌಸ್ ಸಿಕ್ಕಿಸಿಕೊಂಡು ಎದೆಯೆತ್ತಿ ನಡೆಯುತಿದ್ದಳು. ಹಣೆಯಲ್ಲಿ ಗಂದದ ಬೊಟ್ಟು. ನಸು ಲಜ್ಜೆಬೆರೆತ ಆಕೆ ಹಾಲಿನ ಕುಪ್ಪಿಯೊಂದನ್ನು ಕಂಕುಳಲ್ಲಿ ಇರಿಸಿಕೊಂಡು ಚಹದಂಗಡಿಗೆ ಬರುತ್ತಿದ್ದಳು. ಆ ನಿಲುವಿನ ಚಿತ್ರ ನನ್ನ ಕಣ್‌ಕಟ್ಟಿತು. ಯೌವನ ಆಕೆಯ ಹುಡುಗಿತನವನ್ನು ಗೆದ್ದು ಬಂದುದೇ ತಡ, ಆ ಯೌವನವನ್ನು ಗೆಲ್ಲಲು ಜನರು ಕಾದಿದ್ದರು. ಬಡತನ ಸರಿದಾರಿಯನ್ನು ತಪ್ಪಿಸಿ ಎಲ್ಲಿಗೋ ಕಾಡಿಗೆ ಒಯ್ದಿತು. ಮತ್ತೆ ಈ ಮರವಲ್ಲದೆ ಆಕೆಗೆ ನಾಡಿರಲಿಲ್ಲ. ಅಲ್ಲಿ ಆಕೆಯ ಕತೆ ಮುಗಿಯಿತು.

'ಕರ್ ಕರ್–' ಎಂದು ಮರದ ಕಿರಿಚಲು ಕೇಳಿಸಿತು. ಕೊಡಲಿಯ ಹೊಡೆತಕ್ಕೆ ಸೀಳಿ ಹಾರುವ ಮರದ ಚಿಕ್ಕೆಗಳು (ಹೋಳು) ಅಂಗಡಿಯ ತಟ್ಟೆಯ ಮೇಲೆ ಬೀಳುತ್ತಿದ್ದುವು.

ಒಲೆಯ ಬಳಿಯಿದ್ದ ಅತಿಕಾಯ ಬಾಯಿ ತೆರೆದ: 'ಕಾರ್ಣವರೇ, ನಿಮಗೆ ಈ ಮರದ ವ್ಯಾಪಾರದಲ್ಲಿ ಎಷ್ಟು ಲಾಭ ಸಿಕ್ಕಿತು? ಸತ್ಯ ಹೇಳಿ! ......'

ಉಕ್ಕುಣ್ಣಿನಾಯರು ಮಾರುತ್ತರ ಕೊಡಲಿಲ್ಲ. ಬದಲು ತಮ್ಮ ಟೊಳ್ಳುತನವನ್ನು ತೋರುವ ಟೊಳ್ಳು ನಗೆಯಾಡಿದರು. ಅಷ್ಟೆ. ಆದರೆ ಅಲ್ಲಿ ಇದ್ದವರು ತಮ್ಮತಮ್ಮೊಳಗೆ ಮಾತನಾಡಿಕೊಳ್ಳುತ್ತಿದ್ದರು. ಯಾರೋ ಒಬ್ಬ ಮಾಪಿಳ್ಳೆ 'ತನಗೊಂದು ಹಲಸಿನ ಮರದ ಕೊರಡು ಬೇಕೆಂದು ಕೇಳಿದ್ದನಂತೆ. ಉಕ್ಕುಣ್ಣಿನಾಯರು ಆ ಹಿತ್ತಿಲ 'ಮೊದಲಾಳಿ' ಯನ್ನು ಕಂಡು ಈ ಮರ ಇದ್ದರೆ ಮನೆಗೇ ಹಾಳು, ಯಾರೂ ಒಕ್ಕಲು ಬರ

ಲಾರರು, ಅದರಲ್ಲಿ ಪಿಶಾಚಿಗಳಿವೆ ಎಂದು ಹೆದರಿಸಿ, ಈ ಮರವನ್ನು ಕಡಿದು ಹಾಕುವಂತೆ ಎಚ್ಚರಿಸಿದರು. ಮೂವತ್ತು ರೂಪ್ಯಾ ಕೊಡುವುದಾಗಿ ನಾಯಕರು ಹೇಳಿದರು. ಮೊದಲಾಳಿ ಒಪ್ಪಿದರು. ಮಾಪಿಳ್ಳೆಯಿಂದ ಎಂಬತ್ತು ರೂಪ್ಯಾ ಇಸುಕೊಂಡು ಆ ಮರವನ್ನು ಕಡಿದುಕೊಳ್ಳಬಹುದೆಂದು ಹೇಳಿದರು. ಕುಳಿತಲ್ಲಿಗೆ ಇವರು ಅಮ್ಮು ಪ್ರೇತವಾಗಿದ್ದಾಳೆ ಎಂದು ೫೦ ರೂಪ್ಯಾ ಕಟ್ಟಿಕೊಂಡರು.

ಇದನ್ನು ಕೇಳಿ ಉಕ್ಕುಣ್ಣಿನಾಯರು ತಿರುಗಿ ನಕ್ಕರು. ಅತಿಕಾಯ ರೇಗಿ ಹೇಳಿದ: 'ದೇವರು ಇದ್ದರೆ ನೋಡಿ, ಅದೇ ಅಮ್ಮುವಿನ ಪಿಶಾಚಿ ಬಂದು ಒಮ್ಮೆಯಾದರೂ ನಿಮ್ಮ ಕತ್ತು ಹಿಸುಕದೆ ಇರಲಾರದು ಕಾರ್ಣವರೆ!' ಉಕ್ಕುಣ್ಣಿನಾಯರಿಗೆ ಇಂತಹ ಮಾತುಗಳಿಂದ ಮನ ನೋಯುವುದೆಂಬುದೇ ಇಲ್ಲ. ನಮ್ಮೂರಿನ ಬಡಜನರು ಇವರನ್ನು ಹೀಗೆ ಹಳಿಯದೆ ಇಲ್ಲ. ಇವರು ಕೇಳದೆ ಇಲ್ಲ. ಅತಿಕಾಯ ಹೇಳಿದ ಮಾತನ್ನು ನುಂಗಿಕೊಂಡು ಊರಿಗೆ ಬಂದ ಜಾಡಿನ ಕತೆಗೆ ತೊಡಗಿದರು.

'ಅಡಿಯ (ಹೊಲೆಯ) ಮುದ್ದ, ಅವನ ಎರಡು ಮಕ್ಕಳು ಮತ್ತು ಅವನ ಮುದಿ ತಾಯಿ ಹೀಗೆ ನಾಲ್ವರನ್ನೂ ಒಂದೇ ಚಾಪೆಯಲ್ಲಿ ಸುತ್ತಿ ನೆಲದಲ್ಲಿ ಹುಗಿವಾಗ–ಅಯ್ಯೋ ಅದನ್ನು ನೆನಸುವಾಗ ಕರುಳು ಕತ್ತರಿಸಿ ಬರುತ್ತದೆ. ಅವರಿಗೆ ಅಳುವವರು ಯಾರೂ ಇರಲಿಲ್ಲ......ಕತ್ತಲಾಗಲು ಜನ ಹೊರಬರುತ್ತಲೇ ಇರಲಿಲ್ಲ. ಹಗಲಲ್ಲೆ ನರಿಗಳು ಹಾದಿ ಬೀದಿಗಳಲ್ಲಿ 'ಸರ್ಕೀಟು' ಹೊಡೆಯುತ್ತಿದ್ದವು. ಮನುಷ್ಯರೆಲ್ಲ ಸಾಯುವ ದಿನ ಬಂತೆಂದು ಅವು ಎಣಿಸಿರಬೇಕು. ಒಂದು ದಿನ ನಾನು ಸಂಜೆಗೆ ಮನೆಯ ಕಡೆಗೆ ಹೊರಟಿದ್ದೆ. ಹೊಲದ ತಡಿಯಿಂದ ಹೋಗುತ್ತಿದ್ದಾಗ ಒಂದು ನಾಯಿ ಹಾದು ಹೋಗುತ್ತಿತ್ತು ಬಳಿಗೆ ಬಂದಾಗಲೇ ಅದು ನಾಯಿಯಲ್ಲ, ನರಿಯೆಂದು ತಿಳಿಯಿತು........'

ಕಾರ್ಣವರು ನಗೆ ಮೊಳಗಿದರು. ಚಿಪ್ಪಿನಿಂದ ಎಣ್ಣೆತೆಗೆದು ಕಾಲಿಗೆ ಹಚ್ಚಿಕೊಂಡರು. ಮತ್ತೆ ಮುಂದುವರಿದರು:

'ಕೊಳೆತ ಹೆಣಗಳ ಮಾಂಸ ತಿಂದು ಹೊಟ್ಟೆ ತುಂಬಿಸಿಕೊಂಡು ನರಿರಾಯರಿಗೆ ನಡೆಯಲು ಆಗುತ್ತಿರಲಿಲ್ಲ. ನನ್ನನ್ನು ಕಂಡಾಗ ಅದಕ್ಕೆ

ಏನಾದರೂ ಅಂಜಿಕೆ ಹುಟ್ಟಿತೇನು ? ಆದರೆ ದಾರಿಯಿಂದ ಒಂದಿಷ್ಟು ಅಡ್ಡಾಗಿ ತುಸ ದೂರ ನಿಂತು ನನ್ನನ್ನೇ ನೋಡಿತು. ನನಗನಿಸಿತು ಆಗ. ಇದೇನು ನನ್ನ ಕಿವಿಯಲ್ಲಿ ತಾಗಿಸಿದ್ದ ಚುರುಟು ಕೇಳುತ್ತದೋ, ಎಂದು ರಾಯರಿಗೆ ಒಂದು ದಾರಿ ಕಾಣಿಸಬೇಕೆಂದು ತೋರಿತು. ಕೈಯಲ್ಲಿ ನನ್ನ ಲಾಟೀನಲ್ಲದೆ ಬೇರೇನೂ ಇರಲಿಲ್ಲ. ಎಲ್ಲಾದರೂ ಅದು ಒಡೆದು ಹೋದೀತೆಂದು ಅಂಜಿದೆ. 'ಈ ಊರಲ್ಲಿ ಇನ್ನು ಮುಂದೆ ನಮ್ಮ ಆಳಿಕೆ' ಎಂದು ಹೇಳುವಂತೆ ತನ್ನ ಚೆಂಡು ಬಾಲ ಎತ್ತಿಕೊಂಡು ಓಡಿ ಹೋಯಿತು

ಉಕ್ಕುಣ್ಣಿನಾಯರ್ ಕಾಲು ತಿಕ್ಕುವುದನ್ನು ಬಿಟ್ಟು ಎರಡೂ ಕೈಗಳನ್ನೊಮ್ಮೆ ಝಾಡಿಸಿ ಎದ್ದರು.

ಮರ ಕಡಿವ ಸದ್ದು ಕೇಳಿಸುತ್ತಿತ್ತು. ಕೊಂಬೆಗಳನ್ನೆಲ್ಲಾ ಕಡಿದು ಉರುಳಿಸಿದ್ದರು. ಅದರ ಕಾಂಡ ಮಾತ್ರ ಉಳಿದಿತ್ತು. ಬುಡಕ್ಕೂ ಕೊಡಲಿ ಹಾಕಿದರು.

ಕತ್ತಲಿಡಿದ ಆಗಸದ ಮುಂದೆ ತಾನೇ ತಾನಾಗಿ ನೆಟ್ಟಗೆ ನಿಂತಿದ್ದ ಆ ಮರದ ನಿಲುವನ್ನು ಕಂಡರೆ ಯಾರಿಗೂ ಒಮ್ಮೆ ಜುಮ್ಮೆನ್ನಬೇಕು.

ಉಕ್ಕುಣ್ಣಿನಾಯರು ಕಿವಿಯಿಂದ ಚುರುಟದ ತುಂಡನ್ನು ತೆಗೆದು ಒಲೆಯ ಬಳಿಗೆ ಹೋಗಿ ಅದನ್ನು ಉರಿಸಿಕೊಂಡರು. ತಿರುಗಿ ಬಂದು ಆಚೆ ಹಿತ್ತಿಲ ಕಡೆಗೆ ಬಗ್ಗಿ ನೋಡಿದರು ಮರವನ್ನು ಕಂಡು ಅವರಿಗೆ ತಡೆಯಲಾಗಲಿಲ್ಲ. ಮಾತು ಹಾರಿಯೇ ಬಿಟ್ಟಿತು : 'ಇದೇನು ? ಸಾವಿನ ದೋಟಿ ಇಟ್ಟಹಾಗೆ ನಿಂತಿದೆ–' ಎಂದು ತಮ್ಮ ಸುಡುಗಣ್ಣು ನೋಟ ಎಸೆದರು. ತಾವು ಹೇಳಿದ ಮಾತು ಒಪ್ಪುವುದೆಂದು ಅವರಿಗೇ ಒಪ್ಪಿಗೆಯಾಗಿರಬೇಕು. ಎಂತಲೇ ಒಂದು ಹಾಳಾದ ಮುಗುಳು ನಗೆ ಸೂಸಿದರು.

ಮಳೆ ತುಸ ತೋರವಾಗಿ ಹರಿಯ ತೊಡಗಿತು. ಮರ ಕಡಿಯುವವರು ಚಹದಂಗಡಿಯ ಮಾಡಿನಡಿಗೆ ಬಂದು ಸೇರಿದರು. ತೊಯ್ದ ಬಟ್ಟೆಗಳನ್ನು ಹಿಂಡಿಕೊಳ್ಳುತ್ತಾ ಕೆಲವರು ಒಲೆಯ ಮುಂದೆ ಮಣೆ ಹಾಕಿದರು.

ನಾನು ಚಾ ಕುಡಿದು ಮುಗಿಸಿದೆ. ಅಪ್ಪುನಾಯರ್ ಲಾಟೀನ್

ಹೊತ್ತಿಸಿಟ್ಟ ಇನ್ನೊಂದು ಗಳಿಗೆಯಲ್ಲಿ ಮಳೆ ನಿಂತಿತು, ಗಾಳಿ ಬೀಸತೊಡಗಿತು. ಜನ ಬೇರೆ ಬೇರೆ ಸುದ್ದಿಗಳನ್ನೆತ್ತಿ ಮಾತನಾಡ ಲಾರಂಭಿಸಿದರು.

ಉಕ್ಕುಣ್ಣಿನಾಯರ್ 'ನಾನು ಆಚೆಗೆ ಹೋಗುತ್ತೇನೆ–' ಎಂದು ಕಿವಿ ಯಲ್ಲಿಟ್ಟಿದ್ದ ಒಂದಾಣೆಯ ತುಂಡು ತೆಗೆದು ಅಂಗಡಿಯವನ ಕೈಯಲ್ಲಿ ಟ್ಟರು. ಅವನು ಆರು ಕಾಸು ಕಳೆದು ಕೊಟ್ಟ. ಅದನ್ನು ಇಸುಕೊಂಡು ಕಾರ್ಣವರು ಮಾಡಿನಲ್ಲಿ ತೂಗು ಹಾಕಿದ್ದ ತಮ್ಮ 'ಟೊಪ್ಪಿಕೊಡೆ' ಯನ್ನು ತಲೆಗಿರಿಸಿ ಹೊರಗಿಳಿದು ನಿಂತರು. ಅಲ್ಲಿಂದ ನನ್ನನ್ನು ನೋಡಿ ಹೇಳಿ ದರು : 'ಮರಳಿ ಹೋಗುವುದಕ್ಕೆ ಮೊದಲು ಇನ್ನೊಮ್ಮೆ ಇಲ್ಲಿ ಕಾಣಬೇಕು. ಕೆಲವು ಸಂಗತಿಗಳನ್ನು ಹೇಳುವುದಿದೆ–' ಎಂದು ಅವರು. ಅಂಗಳ ದಾಟುವ ಹೊತ್ತಿಗೇ ಬಲವಾಗಿ ಗಾಳಿಬೀಸಿತು. ಅವರು ಹಿಂದು ಮುಂದು ನೋಡದೆ ಮುಂದೆ ಸಾಗಿದರು. ದೂರದಿಂದ ಅವರು ಓಣಿಯನ್ನು ದಾಟಿ ಹೋಗುವುದು ಕಾಣಿಸುತ್ತಿತ್ತು.

ತಟ್ಟನೆ ಒಂದು ಕೂಗು. 'ಕಾರ್ಣವರೆ, ಕಾರ್ಣವರೆ! ಆಚೆ ಹೋಗಿ. . ..' ನಾವು ಅಂಗಳಕ್ಕೆ ಇಳಿದು ಬರುವುದೂ 'ಟರ ಟರ ಟರ್ರ್ ರ್ ರ್' ಎಂಬ ಸದ್ದೂ ಕೇಳಿಸಿತು. ಇನ್ನೊಂದು ಗಳಿಗೆಯಲ್ಲಿ ಮರ ಬಿದ್ದುದು ಕೇಳಿಸಿತು. ಗಾಳಿಯ ಬಿರುಸು ಎದ್ದಿತ್ತು. ನಾವು ಓಡಿದೆವು.

ಮರಕ್ಕೆ ಕಟ್ಟಿದ್ದ ಹಗ್ಗ ತುಂಡಾಗಿ ಮರ ಎದುರಿಗೇ ಹಾರಿ ಬಿದ್ದಿತ್ತು. ಗಾಳಿಯ ಗೋಳಿನೆಡೆಯಿಂದ ಜನರು ಕೂಗಿ ಹೇಳಿದುದು ಕಾರ್ಣವರಿಗೆ ಕೇಳಿಸಲಿಲ್ಲ. ಕಾರ್ಣವರು ಮರದಡಿಯಲ್ಲಿ ಬಿದ್ದು ಕಾಣೆ ಯಾಗಿದ್ದರು.

ನಮ್ಮಿಂದ ಈ ನೋಟವನ್ನು ನೋಡಲಾಗಲಿಲ್ಲ. ಕಾರ್ಣವರು ತೀರ ಸತ್ತಿರಲಿಲ್ಲ. ಈ ಸಿಲುಕಿನಲ್ಲಿಯೂ ಅವರು ನಗುವುದಕ್ಕಿದ್ದರು ಎಂದು ಅವರ ಎರಡೂ ಸುಡುಗಣ್ಣುಗಳು ಮಾತ್ರ ಎದ್ದು ಹೇಳಿದವು. ಇನ್ನೊಂದು ಗಳಿಗೆಯಲ್ಲಿ ಅವೂ ಮುಚ್ಚಿಕೊಂಡುವು.

ಉಕ್ಕುಣ್ಣಿನಾಯರು ಸಾವಿನ ದೋಟಿಯಲ್ಲಿ ಸಿಕ್ಕುಬಿದ್ದರು.

# ಹಿಂದೀ ಸಾಹಿತ್ಯ

ಹಿಂದೀ ಸಾಹಿತ್ಯದ ಆರಂಭಕಾಲವನ್ನು ಚರ್ಚಿಸುತ್ತಾ ೧೨ನೆಯ ಶತಮಾನದ ಹಿಂದಕ್ಕೆ ಅದನ್ನು ತೆಗೆದುಕೊಂಡು ಹೋಗುವುದಕ್ಕೆ ಸಾಕಷ್ಟು ಐತಿಹಾಸಿಕ ಪ್ರಮಾಣಗಳಿಲ್ಲವೆಂದು ರೆವರೆಂಡ್ ಎಫ್. ಇ. ಕೀಯವರು ಅಭಿಪ್ರಾಯಪಡುತ್ತಾರೆ ಪೃಥ್ವಿರಾಜನ ಆಸ್ಥಾನದಲ್ಲಿದ್ದ (೧೨ನೆಯ ಶತಮಾನ) ಚಾಂದ್ ಬಾರದಾಯ್ ಹಿಂದೀ ಸಾಹಿತ್ಯದ ಮೊದಲನೆಯ ಕವಿಯೆಂದು ಪರಿಗಣಿಸಲ್ಪಟ್ಟಿದ್ದಾನೆ. ಒಂದು ಲಕ್ಷ ಪದ್ಯಗಳುಳ್ಳ 'ಪೃಥ್ವಿರಾಜ ರಾಸೊ' ಕಾವ್ಯವನ್ನು ಬರೆದು ಇವನು ತನ್ನ ಪೋಷಕನ ಹಿರಿಮೆಯನ್ನು ವರ್ಣಿಸಿದ್ದಾನೆ. ಚಾಂದನ ವಂಶಜನಾದ ಸಾರಂಗಧರ ೧೪ನೆಯ ಶತಮಾನದಲ್ಲಿ ತನ್ನ ಪೋಷಕನಾದ ರಣತಂಬೋರಿನ ಹಮ್ಮೀರದೊರೆಯಮೇಲೆ 'ಹಮ್ಮೀರ ಕಾವ್ಯ' 'ಹಮ್ಮೀರ ರಾಸ' ಎಂಬೆರಡು ಕಾವ್ಯಗಳನ್ನೂ, 'ಸಾರಂಗಧರ ಪದ್ಧತಿ' ಯೆಂಬ ಸಂಸ್ಕೃತಕಾವ್ಯ ಸಂಗ್ರಹವನ್ನು ರಚಿಸಿದ್ದಾನೆ. ಇದೇ ಕಾಲಕ್ಕೆ ಸೇರಿದ ಭೂಪತಿ, ನಲ್ಲಾಸಿಂಗ್, ಮುಲ್ಲಾ ದಾವೂದ್, ಮತ್ತು ಅಮೀರ ಖುಸ್ರೋ ಕೆಲವು ಗೀತೆಗಳನ್ನು ಬರೆದಿದ್ದಾರೆ.

ಹಿಂದೀ ಸಾಹಿತ್ಯಕ್ಕಿದ್ದ ಪರಾಧೀನತೆಯನ್ನು ನಿವಾರಿಸಿ ಅದನ್ನು ಜನತೆಯ ಶಿಕ್ಷಣಸಾಧನವನ್ನಾಗಿ ಮಾಡಿದ ಕೀರ್ತಿ ರಮಾನಂದನಿಗೆ (೧೪೦೦–೧೪೭೦) ಸಲ್ಲಬೇಕು. ಸಿಖ್ಖರ ಧರ್ಮಗ್ರಂಥವಾದ 'ಆದಿಗ್ರಂಥ'ದ ಸಂಗ್ರಹ ಕಾರ್ಯ ನಡೆದಿತ್ತು. ಅದನ್ನು ೧೬೦೪ರಲ್ಲಿ ಗುರು ಅರ್ಜುನಸಿಂಹ ಪರಿಷ್ಕರಿಸಿ ಒಂದು ರೂಪಕ್ಕೆ ತಂದ. ರಮಾನಂದನ ಶಿಷ್ಯರಾದ ಪಿಪ್ಪ, ಗಗರೌಂಘರದ ದೊರೆ, ಧನಾ, ಜಾಟ್‌ಮತಸ್ಥ; ಸೇನ, ನಾಯಿಂದ,–ಇವರ ಕೆಲವು ಕೃತಿಗಳು ಆದಿ ಗ್ರಂಥದಲ್ಲಿ ಸೇರಿಸಲ್ಪಟ್ಟವು. ರಮಾನಂದನ ಶಿಷ್ಯನಾದ ರಾಯ್‌ದಾಸ, ಚಾಮರಜಾತೀಯ ಮತ್ತು ಕಬೀರ, ಮುಸಲ್ಮಾನ ನೇಕಾರ ಇವರ ಅನೇಕ ಗೀತೆಗಳು ಆದಿಗ್ರಂಥದಲ್ಲಿ ಸೇರಿದವು. ರಮಾನಂದನ ಶಿಷ್ಯಕೋಟಿಯಲ್ಲಿ ರವಿಯಂತೆ ರಾರಾಜಿಸುವವನು ಕಬೀರ್. (೧೪೪೦–೧೫೧೮) ಇವನ ಧೀಃಶಕ್ತಿ, ವಿಚಾರಲಹರಿ, ಸತ್ಯಾನ್ವೇಷಣೆ ಇವನನ್ನು

ಭಾರತೀಯ ಕ್ರಾಂತಿಕವಿಗಳ ಅಗ್ರಜನನ್ನಾಗಿ ಮಾಡಿವೆ. ಹಿಂದೂ–ಮುಸ್ಲಿಮ ಎರಡು ಸಂಸ್ಕೃತಿಗಳ ಸಾರಸರ್ವಸ್ವವನ್ನು ಹೀರಿಕೊಂಡು ಅವರ ಮೈತ್ರಿಯನ್ನು ಕಬೀರ ತನ್ನ ಕೃತಿಗಳಲ್ಲಿ ಮೂಡಿಸಿದ್ದಾನೆ. ಕಾಶಿಯಲ್ಲಿರುವ ಕಬೀರ ಪಂಥಿಗಳ ಮಠದಲ್ಲಿ ಇವನ ಇಪ್ಪತ್ತು ಗ್ರಂಥಗಳ ಸಂಗ್ರಹವಾದ ‘ ಖಾಸ ಗ್ರಂಥ ’ವನ್ನು ಕಾಪಾಡಿಕೊಂಡು ಬಂದಿದ್ದಾರೆ. ಕಬೀರನಿಂದ ಸ್ಫೂರ್ತಿಪಡೆದವರಲ್ಲಿ ಗುರು ನಾನಕನೂ (೧೪೬೯–೧೫೩೮) ಒಬ್ಬ. ‘ಜಪಾಜಿ’ ಎಂಬ ಸ್ತೋತ್ರಗ್ರಂಥವನ್ನೂ, ಹಲವಾರು ಗೀತೆಗಳನ್ನೂ ನಾನಕ ಬರೆದಿದ್ದಾನೆ.

ರಮಾನಂದ ಮತ್ತು ಆವನ ಶಿಷ್ಯರು ರಾಮಭಕ್ತರು. ಬಂಗಾಳದ ಜಯದೇವ, ವಿದ್ಯಾಪತಿ, ಉಮಾಪತಿ ನರಸೀಮೇಥಾ ಇವರು ಕೃಷ್ಣ ಭಕ್ತರು. ಇವರ ಪ್ರಭಾವ ಹಿಂದೀ ಸಾಹಿತ್ಯದ ಮೇಲೂ ಆಯಿತು. ಗುಜರಾತಿನ ನರಸೀಮೇಥಾ ಹಿಂದಿಯಲ್ಲಿಯೂ ಕೆಲವು ಗೀತೆಗಳನ್ನು ಬರೆದಿದ್ದಾನೆಂದು ಪ್ರತೀತಿ. ಆದರೆ ವೈಷ್ಣವಧರ್ಮ ಹೆಚ್ಚುಪ್ರಸಾರಗೊಂಡುದು ಮೀರಾಬಾಯಿಯ (೧೪೭೦) ಪ್ರಭಾವದಿಂದ. ಮಹಾಭಕ್ತೆಯಾದ ಈ ತಾಯಿ, ಅಕ್ಕಮಹಾದೇವಿಯಂತೆ ತನ್ನ ಜೀವನವನ್ನು ಶ್ರೀಕೃಷ್ಣನ ಸಾಕ್ಷಾತ್ಕಾರಕ್ಕೆ ಮೀಸಲು ಮಾಡಿದಳು. ಈಕೆ ಪ್ರಾದೇಶಿಕ ಹಿಂದಿಯಾದ ಬ್ರಜಭಾಷೆಯಲ್ಲಿ ತನ್ನ ಅಮರ ಗೀತೆಗಳನ್ನು ಹಾಡಿದ್ದಾಳೆ. ಸಾಧಕಾವಸ್ಥೆಯ ಕೋಟಲೆಗಳು, ಪರಿಶುದ್ಧಾತ್ಮನ ರಸಾವೇಶ ಅವುಗಳಲ್ಲಿ ತುಂಬಿತುಳುಕುತ್ತಿವೆ. ಹಿಂದೀ ಸಾಹಿತ್ಯಶ್ರೀಯ ಹಣೆಗೆ ಮೀರಾ ಕುಂಕುಮದ ಬೊಟ್ಟಿಟ್ಟಳು ಮೀರಾಬಾಯಿಯ ಸಮಕಾಲೀನನಾದ ವಲ್ಲಭಾಚಾರ್ಯ, ಹಿಂದಿಯಲ್ಲಿ ಕೃತಿಗಳನ್ನು ರಚಿಸದಿದ್ದರೂ ವೈಷ್ಣವಧರ್ಮಕ್ಕೆ ಅವನು ಮಾಡಿದ ಅನುಪಮ ಸೇವೆಯಿಂದ ತರುವಾಯದ ವೈಷ್ಣವ ಕವಿಗಳ ಪರಮಾಚಾರ್ಯನಾದ. ಇವನ ಮಗನಾದ ವಿಠ್ಠಲನಾಥ (೧೫೧೫–೧೫೮೫) ರಾಧಾಕೃಷ್ಣರ ಪ್ರಣಯ ವಿಲಾಸದಮೇಲೆ ‘ಮಂಡನ’ವೆಂಬ ಗದ್ಯಕಾವ್ಯವನ್ನು ಬರೆದು ಹಿಂದೀ ಗದ್ಯಸಾಹಿತ್ಯದ ಪ್ರವರ್ತಕನಾದ. ೧೫೪೦ ರಲ್ಲಿದ್ದ ಮಲ್ಲಿಕ್ ಮಹಮದ್ ಜಯಾಸಿ‘ಪದುಮಾವತಿ’ಎಂಬ ಕಾವ್ಯವನ್ನು ಬರೆದ. ಮಹಮದೀಯನಾದರೂ ಇವನು ಹಿಂದೂಧರ್ಮದ ಬಗ್ಗೆ ತೋರಿಸಿರುವ ಆದರ ಕನ್ನಡದ ಶಿಶುನಾಳ ಷರೀಫಸಾಹೇಬರ ಕೃತಿಗಳನ್ನು ನೆನಪಿಗೆ ತರುತ್ತದೆ. ಇದೇ

ಕಾಲದಲ್ಲಿಯೇ ನರೋತ್ತಮದಾಸ 'ಸುಧಾಮಚರಿತ್ರೆ', 'ಧೃವಚರಿತ್ರೆ'ಗಳನ್ನೂ ಕೃಪಾರಾಮ 'ಹಿತ ತರಂಗಿಣಿ'ಯೆಂಬ ಕವಿರಾಜಮಾರ್ಗವನ್ನೂ ಬರೆದರು.

ಸಮ್ರಾಟ ಅಕ್ಬರನ ಕಾಲದಲ್ಲಿ (೧೫೫೬–೧೬೦೫) ಹಿಂದೀ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ದೊರೆಯಿತು. ಇವನ ಆಸ್ಥಾನಿಕರಲ್ಲಿ ತೋದರಮಲ್ಲನು ಭಾಗವತ ಪುರಾಣವನ್ನು ಪಾರಸೀ ಭಾಷೆಗೆ ಅನುವಾದ ಮಾಡಿದ್ದಲ್ಲದೆ ಹಿಂದಿಯಲ್ಲಿ ಹಲವು ಗೀತೆಗಳನ್ನು ರಚಿಸಿದ. 'ಕವಿರಾಯ'ನೆಂದು ಚಕ್ರವರ್ತಿಯಿಂದ ಮನ್ನಣೆಗೊಂಡ ರಾಜಾ ಬೀರಬಲ ಹಾಸ್ಯರಸಭರಿತವಾದ ಚುಟಕಗಳನ್ನು ಬರೆದ. ರಾಜಾ ಮನೋಹರದಾಸ, ರಾಜಾ ಮಾನಸಿಂಹರೂ ಕವಿಗಳಾಗಿದ್ದರು. ಅಕ್ಬರನ ಮಂತ್ರಿಗಳಲ್ಲೊಬ್ಬನಾದ ಅಬ್ದುಲ್ ರಹೀಮ್ ಖಾನ್ ಖಾನ ಗಂಗಕವಿಯ ಪೋಷಕನಾಗಿದ್ದುದಲ್ಲದೆ ಒಂದು ನೀತಿ ಗ್ರಂಥವನ್ನೂ, 'ರಹೀಮ್ ಸತ್ ಸಾಯಿ' ಕಾವ್ಯವನ್ನೂ ಬರೆದಿದ್ದಾನೆ. ಗಾಯನಾಚಾರ್ಯ ತಾನಸೇನ ಸಾವಿರಾರು ಹಾಡುಗಬ್ಬಗಳನ್ನು ಬರೆದು ಉತ್ತರಾದಿ ಸಂಗೀತ ಪದ್ಧತಿಗೆ ಬುನಾದಿಯನ್ನು ಹಾಕಿದ.

ಹಿಂದಿಯಲ್ಲಿ ಲಕ್ಷಣಗ್ರಂಥಗಳನ್ನು ಬರೆದು ಮುಂದಿನ ಕವಿಗಳಿಗೆ ಮಾರ್ಗದರ್ಶಕನಾದವನು ಕೇಶವದಾಸ ಸಂಢ್ಯಾ ಮಿಶ್ರ (೧೫೫೫–೧೬೧೭). 'ವಿಜ್ಞಾನ ಗೀತೆ' 'ಕವಿ ಪ್ರಿಯ,' 'ರಸಿಕ ಪ್ರಿಯ,' 'ರಾಮಾಲಂಕಾರ ಮಂಜರಿ,' 'ರಾಮ ಚಂದ್ರಿಕೆ' ಮೊದಲಾದ ಅಲಂಕಾರ ಗ್ರಂಥಗಳನ್ನು ಬರೆದಿದ್ದಾನೆ. ಇವನ ಸೋದರ ಬಲಭದ್ರ ಸಂಢ್ಯಾಮಿಶ್ರ ಭಾಗವತಪುರಾಣದ ವ್ಯಾಖ್ಯೆಯನ್ನು ಬರೆದದ್ದಲ್ಲದೆ 'ನಖ ಶಿಖ' ಎಂಬ ಗ್ರಂಥವನ್ನು ಬರೆದು ತನ್ನ ನಾಯಕ ನಾಯಕಿಯರನ್ನು ನಖಶಿಖಾದ್ಯಂತವಾಗಿ ವರ್ಣಿಸಿದ್ದಾನೆ.

ಅಕ್ಬರನಾನಂತರ ಬಂದ ಮೊಘಲ ಸಮ್ರಾಟರೂ ಹಿಂದೀ ಸಾಹಿತ್ಯದ ಪೋಷಕರಾಗಿದ್ದರು. ಷಹಜಹಾನನ ಕಾಲದಲ್ಲಿ ಸುಂದರಕವಿ 'ಸುಂದರ ಶೃಂಗಾರ' 'ಸಿಂಹಾಸನ ಭಟ್ಟೀರ' ಗ್ರಂಥಗಳನ್ನು ಬರೆದ. ದಾರಾಷಿಕೋ ಅನೇಕ ಹಿಂದೀ ಕವಿಗಳನ್ನು ಪ್ರೋತ್ಸಾಹಿಸಿದ. ಅವರಂಗಜೇಬನ ಆಳಿಕೆಯಲ್ಲಿಯೂ ಕವಿರಾಯ ಪ್ರಶಸ್ತಿ ಹಿಂದೂ ಮುಸಲ್ಮಾನ ಕವಿಗಳಿಗೆ ಕೊಡಲ್ಪಡುತ್ತಿತ್ತು. ಸೇನಾಪತಿ (೧೫೮೯–೧೬೪೯) 'ಕವಿತಾ ರತ್ನಕರ,' 'ಕಾವ್ಯ ಕಲ್ಪದ್ರುಮ' ಎಂಬ ಎರಡು ಲಕ್ಷಣ ಗ್ರಂಥಗಳನ್ನು ಬರೆದಿದ್ದಾನೆ.

ಷಹ-ಜಹಾನ್ ಮತ್ತು ಅವರಂಗಜೇಬನ ಕಾಲಗಳಲ್ಲಿದ್ದ ತ್ರಿಪಾಠಿ ಸೋದರರು ಅನೇಕ ಕಾವ್ಯಗಳನ್ನೂ ಲಕ್ಷಣಗ್ರಂಥಗಳನ್ನೂ ಬರೆದಿದ್ದಾರೆ.

ಹಿಂದೀ ಸಾಹಿತ್ಯದಲ್ಲಿ ತುಳಸೀದಾಸ (೧೫೩೨–೧೬೨೩) ಒಂದು ವಿಶೇಷ ಸ್ಥಾನವನ್ನಲಂಕರಿಸಿದ್ದಾನೆ. ಇವನ 'ರಾಮಚರಿತ ಮಾನಸ' ವಾಲ್ಮೀಕಿ ರಾಮಾಯಣದ ಆಧಾರದಿಂದ ಬರೆದ ಒಂದು ಉಜ್ವಲ ಸ್ವತಂತ್ರ ಕಾವ್ಯ. ರಾಮಭಕ್ತಿ ಜನತೆಯಲ್ಲಿ ತುಳಸೀದಾಸನಿಂದ ಪ್ರಸಾರಗೊಂಡಂತೆ ಕೃಷ್ಣಪ್ರೇಮ ಸೂರದಾಸನಿಂದ (೧೪೭೮–೧೫೮೩) ಪ್ರಸಾರವಾಯಿತು. ಇವನ ಗೀತೆಗಳೆಲ್ಲವನ್ನೂ 'ಸೂರಸಾಗರ', 'ಸೂರಾವಳಿ', 'ಸಾಹಿತ್ಯಲಹರಿ' ಎಂಬ ಶೀರ್ಷಿಕೆಗಳ ಕೆಳಗೆ ಸಂಗ್ರಹಿಸಿದ್ದಾರ. 'ನಳದಮಯಂತಿ' ಕಾವ್ಯವನ್ನೂ ಸೂರದಾಸ ಬರೆದಿದ್ದಾನೆ. 'ಹಿಂದೀ ಸಾಹಿತ್ಯಾಕಾಶದಲ್ಲಿ ಸೂರದಾಸ ಸೂರ್ಯ, ತುಳಸೀದಾಸ ಚಂದ್ರ, ಉಳಿದ ಕವಿಗಳೆಲ್ಲಾ ನಕ್ಷತ್ರಗಳು' ಎಂಬ ನಾಣ್ಣುಡಿಯೊಂದು ಪ್ರಸಾರದಲ್ಲಿದೆ.

ಇವುಗಳಲ್ಲದೆ ಕಾಲಕಾಲಕ್ಕೆ ವೀರಕಥೆಗಳನ್ನು ನಿರೂಪಿಸುವ ಬಾರ್ದಿ–ಸಾಹಿತ್ಯವೂ, ಜನಪದ ಗೀತೆಗಳೂ, ಕಬೀರ್, ದಾದು, ನಾನಕ ಪಂಥದ ಗೀತೆಗಳೂ ಹುಟ್ಟಿದವು. ಕೆಲವು ಮುಸಲ್ಮಾನ (ಸೂಫಿ) ಕವಿಗಳು ಕೃಷ್ಣನ ಪರವಾಗಿಯೂ ರಾಮನ ಪರವಾಗಿಯೂ ಉತ್ಕೃಷ್ಟ ಗೀತೆಗಳನ್ನು ಬರೆದಿದ್ದಾರೆ.

೧೯ನೆಯ ಶತಮಾನದಾರಂಭದಲ್ಲಿ ಆಂಗ್ಲ ಸಂಸ್ಕೃತಿಯ ಪ್ರಭಾವದಿಂದ ಹಿಂದಿಯಲ್ಲಿಯೂ ಹೊಸ ಸಾಹಿತ್ಯವಾರಂಭವಾಯಿತು.

---

## ಹಿಂದೀ ಕಥಾಸಾಹಿತ್ಯ

ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಚಿಕ್ಕ ಕತೆಗಳು ಚೆನ್ನಾಗಿ ಬೆಳೆದಿವೆ, ಹೆಚ್ಚಾಗಿಯೂ ಬೆಳೆದಿವೆ. ಅವು ಚಿತ್ರಿಸುವ ಜೀವನ ವಿಸ್ತಾರವೂ ಹೆಚ್ಚಾಗಿ ಬೆಳೆದಿದೆ. ಬಗೆಬಗೆಯ ರೂಪಗಳನ್ನು ಧರಿಸಿದೆ.

ಸಣ್ಣ ಕತೆಗಳ ಪ್ರಾರಂಭ ಹಿಂದೀ ಭಾಷೆಯಲ್ಲಿ ಸನ್ ೧೯೦೦ ರಿಂದ ಆಗತೊಡಗಿತು. 'ಸರಸ್ವತಿ'ಯೆಂಬ ಉತ್ತಮ ಸಾಹಿತ್ಯ ಪತ್ರಿಕೆಯ ಮೊದಲನೆಯ ಅಂಕಿನಲ್ಲೇ ಮೊಟ್ಟಮೊದಲನೆಯ ಹಿಂದೀ ಕತೆ 'ಇಂದುಮತಿ' ಬೆಳಕು ಕಂಡಿತು. ಅದನ್ನು ಬರೆದವರು ಪಂಡಿತ ಕಿಶೋರಿಲಾಲ ಗೋಸ್ವಾಮಿ.

ಇವರ ಬಳಿಕ ಬಂಗಾಲಿಯಿಂದ ಅನುವಾದ ಮಾಡಿಯೊ ಬಂಗಾಲಿಯ ಕತೆಗಳ ಆಧಾರದಿಂದಲೊ ಬರೆದ ಅನೇಕ ಕತೆಗಳು ಪ್ರಕಟವಾದವು. ಅವುಗಳಲ್ಲಿ ಹೆಚ್ಚು ಮನ್ನಣೆಗೆ ಪಾತ್ರವಾದುದು 'ವಂಗಮಹಿಳೆ'ಯೆಂಬ ಕಾವ್ಯನಾಮದ ಲೇಖಿಕೆಯ 'ದುಲಾಯೀವಾಲೀ' ಎಂಬ ಶ್ರೇಷ್ಠ ಕತೆ.

ಈ ಕತೆಗಳು ಜನರನ್ನು ತಮ್ಮ ಕಡೆಗೆ ಆಕರ್ಷಿಸತೊಡಗಿದವು. ಹಿಂದೀ ಸಾಹಿತ್ಯದ ಉಜ್ವಲ ನಕ್ಷತ್ರವಾಗಿದ್ದ ಜಯಶಂಕರ ಪ್ರಸಾದರು ಕತೆಗಳನ್ನು ಬರೆಯತೊಡಗಿದರು. ಇವರ ನಂತರ ವಿಶ್ವಂಭರನಾಥ ಶರ್ಮಾ, ಜ್ವಾಲಾದತ್ತ ಶರ್ಮಾ, ಚತುರಸೇನಶಾಸ್ತ್ರೀ ಮೊದಲಾದವರು ಚಿಕ್ಕ ಕತೆಯ ಸಾಹಿತ್ಯವನ್ನು ತಮ್ಮ ಕೃತಿಗಳಿಂದ ಬೆಳಗತೊಡಗಿದರು. ಹಾಸ್ಯರಸ ಕಥಾ ಸಾಹಿತ್ಯವನ್ನು ನಿರ್ಮಾಣ ಮಾಡಿದವರಲ್ಲಿ ಜಿ. ಪಿ ಶ್ರೀವಾಸ್ತವರು ಪ್ರಮುಖರು. ಇವರ ನಂತರ ಪ್ರೇಮದ ಸ್ವರ್ಗೀಯ ಸ್ವರೂಪದ ಒಂದು ರಮ್ಯದೃಶ್ಯವನ್ನು ತೋರಿಸುವ 'ಉಸನೆ ಕಹಾಥಾ' ಎಂಬ ಕತೆಯನ್ನು (೧೯೧೫ರಲ್ಲಿ) ಬರೆದವರು ಶ್ರೀ ಚಂದ್ರಧರ ಶರ್ಮಾ ಗುಲೇರಿ ಅವರು. ಇವರ ನಂತರ ೧೯೧೬ ರಿಂದ ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಕ್ರಾಂತಿಯನ್ನು ಪ್ರೇಮಚಂದರ ಕತೆಗಳು ತಂದವು ಅನೇಕ ಕತೆಗಾರರು ಬೆಳೆದು ಬಂದರು. ಅವರಲ್ಲಿ ಶ್ರೇಷ್ಠರಾದವರು ಪಂಡಿತ ಸುದರ್ಶನ, ಜೈನೇಂದ್ರಕುಮಾರ, ವಿನೋದ ಶಂಕರ ವ್ಯಾಸ, ಬೇಚನಶರ್ಮಾ ಪಾಂಡೆ 'ಉಗ್ರ', ಪರಿಪೂರ್ಣಾನಂದ, ಶ್ರೀನಾಥಸಿಂಹ, ದ್ವಿಜ ಮೊದಲಾದವರು. ಒಂದು ತತ್ವವನ್ನು ನಮ್ಮ ಎದುರಿನಲ್ಲಿಡುವಂಥ ಕತೆಗಳನ್ನು ಬರೆಯುವ ಲಾಕ್ಷಣಿಕ ಕತೆಗಾರರು ಉಗ್ರರು. ಉಗ್ರರು ಸಮಾಜದ ಪಾಪಾಚಾರಗಳನ್ನು ಮುಚ್ಚುಮರೆಯಿಲ್ಲದೆ ಇಡುತ್ತಾರೆ. ಸ್ವಾತಂತ್ರ್ಯಪ್ರೇಮ, ಸ್ವದೇಶ ಪ್ರೀತಿ, ರಾಜನೀತಿಯ ಕತೆಗಳನ್ನು ಬರೆಯುವುದರಲ್ಲೂ ಇವರು ಅದ್ವಿತೀಯರು. ಗೂಢತತ್ವ, ರಮಣೀಯ ಕಲ್ಪನೆಯನ್ನು ಒಂದುಗೂಡಿಸಿ ಬರೆಯುವ ಕತೆಗಾರರಲ್ಲಿ ಜಯಶಂಕರ ಪ್ರಸಾದರು ಅಗ್ರಗಣ್ಯರು. ಹಾಸ್ಯರಸಪ್ರಧಾನವಾದ ಕತೆ ಬರೆಯುವುದರಲ್ಲಿ ಜಿ. ಪಿ. ಶ್ರೀವಾಸ್ತವ, ಪರಿಪೂರ್ಣಾನಂದರು ಶ್ರೇಷ್ಠರು. ಹಾಸ್ಯರಸ ಪ್ರಧಾನವಾದ ಕತೆಗಳ ವಿಕಾಸ ಇನ್ನೂ ಸಾಕಷ್ಟು ಆಗಿಲ್ಲ.

# ಪ್ರೇಮಚಂದ

ಪ್ರೇಮಚಂದರ ಜನ್ಮ ೧೮೮೦ರಲ್ಲಿ ಆಯಿತು. ಇವರ ನಿಜವಾದ ಹೆಸರು 'ಧನಪತರಾಯ'. ಮೊದಲು ಕೆಲವು ದಿನ ಅಧ್ಯಾಪಕರಾಗಿದ್ದರು. ಇವರ ಸಾಹಿತ್ಯ ಜೀವನ ೧೯೦೧ ರಿಂದ ಪ್ರಾರಂಭವಾಯಿತು. ಮೊದಲು ಉರ್ದೂ ಭಾಷೆಯಲ್ಲಿ ಬರೆದರು. ೧೯೧೪ರಿಂದ ಹಿಂದೀಯಲ್ಲಿ ಬರೆಯಲಾರಂಭಿಸಿದರು ಅಲ್ಪಾವಧಿಯಲ್ಲೇ ಹಿಂದೀ ಸಾಹಿತ್ಯದಲ್ಲಿ ಅದ್ವಿತೀಯ ಸ್ಥಾನ ಸಿಕ್ಕಿತು. ಇವರ ಸೇವಾಸದನ, ರಂಗಭೂಮಿ, ಮುಂತಾದ ಕಾದಂಬರಿಗಳು ಶ್ರೇಷ್ಠ ತರಗತಿಯವು. 'ಸೇವಾಸದನ' ವಾಕ್ಚಿತ್ರ ಪಟವೂ ಆಗಿದೆ. ಪ್ರೇಮಪಂಚಮಿ, ಪ್ರೇಮ ಪಚ್ಚೀಸಿ ಮುಂತಾದ ಅನೇಕ ಕಥಾಸಂಗ್ರಹಗಳೂ ಹೊರಬಿದ್ದಿವೆ. ಭಾರತದ ಭಿನ್ನ ಭಿನ್ನ ಭಾಷೆಗಳ ಸಾಹಿತ್ಯವನ್ನು ಹಿಂದೀಯಲ್ಲಿ ತರುವ ಸ್ತುತ್ಯವಾದ ಕಾರ್ಯಕ್ಕೆ ಕೈಹಾಕಿದ ಮಹನೀಯರಲ್ಲಿ ಇವರೂ ಒಬ್ಬರು. ''ಹಂಸ' ಎಂಬ ಪತ್ರಿಕೆ ಇವರಿಂದ ಇದಕ್ಕಾಗಿ ಹೊರಡಿಸಲ್ಪಟ್ಟಿತು. ಇನ್ನೂ ಇದು ಭಾರತೀಯ ಸಾಹಿತ್ಯದ ಪ್ರಧಾನಪತ್ರಿಕೆಯಾಗಿದೆ. ಎರಡು ವರ್ಷಗಳ ಹಿಂದೆ ಅತ್ಯಂತ ಶ್ರೇಷ್ಠ ತರಗತಿಯ 'ಗೋದಾನ' ಎಂಬ ಕಾದಂಬರಿಯನ್ನು ನಮಗೆ ಕೊಟ್ಟು ಸ್ವರ್ಗಸ್ಥರಾದರು.

---

# ದೊಡ್ಡವರ ಮನೆಯ ಹೆಣ್ಣು

ಅನುವಾದಕ : **ಗುರುನಾಥ ಜೋಷಿ**

ವೇಣೀಮಾಧವಸಿಂಹ ಗೌರೀಪುರದ ಜಮೀನುದಾರರು. ಅವರ ಮುತ್ತಜ್ಜ ಒಂದಾನೊಂದು ಕಾಲಕ್ಕೆ ಧನಧಾನ್ಯವಂತರಾಗಿ ತುಂಬ ಶ್ರೀಮಂತರಾಗಿದ್ದರು. ಅವರ ಕೀರ್ತಿಸ್ತಂಭಗಳಾಗಿ ಉಳಿದಿರುವ ಕೆರೆ-ಭಾವಿ, ಮಂದಿರ-ಮಠಗಳನ್ನು ಪುನಃ ಸರಿಪಡಿಸುವುದೂ ಈಗಿನವರಿಗೆ ದುಸ್ತರವಾಗಿದೆ. ಅವರ ಮನೆಯ ಎದುರಿನಲ್ಲಿ ಆನೆಯನ್ನು ಕಟ್ಟುತ್ತಿದ್ದರೆಂದು ಹೇಳುತ್ತಾರೆ. ಈಗ ಆ ಆನೆಯ ಬದಲು ಒಂದು ಸೊರಗಿ ಬಡಕಾದ ಎಮ್ಮೆ ಕಟ್ಟಿರುತ್ತದೆ. ಪಾಪ, ಬಡಪ್ರಾಣಿ ಹಾಲು ಕರೆಯುತ್ತದೋ ಏನೊ ! ಒಬ್ಬನು ಸದಾ ಒಂದು ಚಂಬು, ಕೈಯಲ್ಲಿ ಒಂದು ಕೋಲು ಹಿಡಿದುಕೊಂಡು ಅದರ ಬಳಿಯಲ್ಲಿ ನಿಂತಿರುತ್ತಾನೆ.

ವೇಣೀಮಾಧವಸಿಂಹರು ತಮ್ಮ ಆಸ್ತಿಯಲ್ಲಿ ಅರ್ಧಕ್ಕಿಂತ ಹೆಚ್ಚು ವಕೀಲರಿಗೆ ಕಾಣಿಕೆಯಾಗಿ ಕೊಟ್ಟುಬಿಟ್ಟಿದ್ದರು. ಈಗ ಅವರ ವಾರ್ಷಿಕ ಉತ್ಪನ್ನ ಒಂದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿರಲಿಲ್ಲ. ಠಾಕುರ ಸಾಹೇಬರಿಗೆ ಇಬ್ಬರು ಮಕ್ಕಳಿದ್ದರು. ದೊಡ್ಡವನ ಹೆಸರು ಶ್ರೀಕಂಠಸಿಂಹ. ಬಹಳ ದಿನ ಶ್ರಮಪಟ್ಟು ಬಿ.ಎ. ಡಿಗ್ರಿಯನ್ನು ಸಂಪಾದಿಸಿದ್ದ. ಈಗ ಒಂದು ಕಚೇರಿಯಲ್ಲಿ ಕೆಲಸಮಾಡುತ್ತಿದ್ದಾನೆ. ಚಿಕ್ಕ ಮಗನ ಹೆಸರು ಲಾಲಬಿಹಾರೀಸಿಂಹ. ಅವನು ಜೋಡೆಲಬಿನ ಹೃಷ್ಟಪುಷ್ಟ ಯುವಕನಾಗಿದ್ದ. ಹರವಾದ ಎದೆ, ತುಂಬಿದ ಮುಖ. ದಿನವೂ ಬೆಳಗ್ಗೆ ಎರಡು ಸೇರು ಎಮ್ಮೆಯ ಹಾಲನ್ನು ತಾನೇ ಕುಡಿದುಬಿಡುತ್ತಿದ್ದ. ಶ್ರೀಕಂಠಸಿಂಹನ ಸ್ಥಿತಿ ಇದಕ್ಕೆ ವಿಪರೀತವಾಗಿದ್ದಿತು. ಈ ನೇತ್ರಪ್ರಿಯಗುಣಗಳನ್ನೆಲ್ಲ ತನ್ನ ಎರಡು ಅಕ್ಷರಗಳ ಡಿಗ್ರಿಯನ್ನು ಸಂಪಾದಿಸಲು ಧಾರೆಯೆರೆದಿದ್ದ. ಈ ಎರಡು ಅಕ್ಷರಗಳು ಅವನನ್ನು ಕಾಂತಿಹೀನನನ್ನಾಗಿಯೂ ಶಕ್ತಿಹೀನನನ್ನಾಗಿಯೂ

ಮಾಡಿದ್ದವು. ಆದುದರಿಂದಲೇ ವೈದ್ಯಗ್ರಂಥಗಳಮೇಲೆ ಅವನ ಪ್ರೀತಿ ಹೆಚ್ಚಾಗಿದ್ದಿತು. ಆಯುರ್ವೇದದ ಔಷಧಗಳಲ್ಲಿ ಅವನ ವಿಶ್ವಾಸ ಹೆಚ್ಚು. ದಿನವೂ ಮುಂಜಾನೆ ಅವನ ಕೋಣೆಯಿಂದ ಔಷಧ ಅರೆಯುವ ಕರ್ಣ ಮಧುರ ಶಬ್ದ ಕೇಳಿ ಬರುತ್ತಿದ್ದಿತು. ಲಾಹೋರ್ ಮತ್ತು ಕಲಕತ್ತೆಯ ಮುಖ್ಯ ಮುಖ್ಯ ವೈದ್ಯರೊಡನೆ ಪತ್ರವ್ಯವಹಾರ ನಡದೇ ಇರುತ್ತಿದ್ದಿತು.

ಶ್ರೀಕಂಠ ಈ ಇಂಗ್ಲಿಷು ಡಿಗ್ರಿಯನ್ನು ಪಡೆದುಕೊಂಡಿದ್ದರೂ ಯುರೋಪಿಯನ್ ಸಾಮಾಜಿಕ ನಡತೆ ನಡಾವಳಿಗಳನ್ನು ಪ್ರೀತಿಸುತ್ತಿರಲಿಲ್ಲ. ಅವುಗಳನ್ನು ತಿರಸ್ಕರಿಸುತ್ತಿದ್ದ, ಕಟುವಾಗಿ ಟೀಕಿಸುತ್ತಿದ್ದ. ಆದುದ ರಿಂದ ಊರಲ್ಲಿ ಆತನಿಗೆ ಹೆಚ್ಚು ಸನ್ಮಾನವಿತ್ತು. ಅವನು ಸ್ವತಃ ದಸರೆಯ ಹಬ್ಬದಲ್ಲಿ ಜರಗುವ ರಾಮಲೀಲೆಯಲ್ಲಿ ಉತ್ಸಾಹದಿಂದ ಭಾಗ ತೆಗೆದುಕೊಳ್ಳು ತ್ತಿದ್ದನಷ್ಟೇ ಅಲ್ಲದೆ ಯಾವುದಾದರೂ ಒಂದು ಪಾತ್ರವನ್ನು ವಹಿಸಿಕೊಂಡು ಅಭಿನಯಿಸುತ್ತಿದ್ದ. ಗೌರೀಪುರದ ರಾಮಲೀಲೆಯ ಮುಖ್ಯ ಜನ್ಮದಾತನೂ ಇವನೇ. ಪ್ರಾಚೀನ ಹಿಂದೂ ಸಂಸ್ಕೃತಿಯ ಗುಣಗಾನ ಮಾಡುವುದು ಅವನ ಧಾರ್ಮಿಕ ಕರ್ತವ್ಯಗಳಲ್ಲಿ ಒಂದಾಗಿತ್ತು. ಅವಿಭಕ್ತ ಕುಟುಂಬ ಪದ್ಧತಿಯ ಉಪಾಸಕನೂ ಆಗಿದ್ದ. ಈ ದಿನಗಳಲ್ಲಿ ಕುಟುಂಬದಲ್ಲಿ ಹೆಂಗಸರೂ ಗಂಡಸರೂ ಕೂಡಿಕೊಂಡಿರುವ ರೂಢಿಯನ್ನು ಕುರಿತು ಜನ ಗಳಲ್ಲಿ ಇರುವ ಅಶುಚಿ ದೇಶಕ್ಕೂ ಜಾತಿಗೂ ಹಾನಿಕರವೆಂದು ಅವನು ತಿಳಿದಿದ್ದ. ಈ ಕಾರಣದಿಂದ ಊರಿನ ಹೆಂಗಸರು ಅವನ ನಿಂದಕ ರಾಗಿದ್ದರು. ಕೆಲಕೆಲವರು ಹೆಂಗಸರು ಅವನು ತಮ್ಮ ಶತ್ರುವೆಂದು ತಿಳಿ ಯುತ್ತಿದ್ದರು. ಅವನ ಹೆಂಡತಿಯೇ ಈ ವಿಷಯದಲ್ಲಿ ಅವನನ್ನು ವಿರೋಧಿ ಸುತ್ತಿದ್ದಳು. ತನ್ನ ಅತ್ತೆ ಮಾವಂದಿರು, ಮೈದುನ ಭಾವಂದಿರು, ಅತ್ತಿಗೆ ನಾದಿನಿಯರನ್ನು ಅವಳು ತಿರಸ್ಕರಿಸುತ್ತಿದ್ದಳೆಂದಲ್ಲ, ಪರಿವಾರದ ಕೂಡ ಇರು ವದು ಆಗದೆ ಹೋದರೆ ಎಲ್ಲಾದರೂ ಮನಸ್ತಾಪವಾಗಿ ಕಲಹವುಂಟಾಗಿ ಜೀವನವನ್ನು ನಷ್ಟಮಾಡಿಕೊಳ್ಳುವುದಕ್ಕಿಂತ ಬೇರೆಬೇರೆಯಾಗಿರುವುದೇ ಒಳ್ಳಿತೆಂದು ಆಕೆಯ ಅಭಿಪ್ರಾಯವಾಗಿದ್ದಿತು.

ಆನಂದಿ ಒಂದು ಉಚ್ಚ ಕುಟುಂಬದ ಹೆಣ್ಣು. ಆಕೆಯ ತಂದೆ ಒಂದು ಸಂಸ್ಥಾನದ ಅಮಲ್ದಾರರಾಗಿದ್ದರು. ವಿಶಾಲವಾದ ಮನೆ, ಒಂದು

ಆನೆ, ಮೂರು ನಾಯಿಗಳು, ಗಿಡಗ, ಆಳು ಮಕ್ಕಳು, ದಾಸದಾಸಿಯರು ಇತ್ಯಾದಿ. ಪ್ರತಿಷ್ಠಿತ ಅಮಲ್ದಾರರಿಗೆ ಇರಬೇಕಾದ ಭೋಗ್ಯಪದಾರ್ಥಗಳೆಲ್ಲವೂ ಇದ್ದವು. ಅವರ ಹೆಸರು ಭೂಪಸಿಂಹ. ಬಹಳ ಉದಾರಿ, ಪ್ರತಿಭಾಶಾಲಿ ಪುರುಷ. ದುರ್ಭಾಗ್ಯದಿಂದ ಅವರಿಗೆ ಪುತ್ರಸಂತಾನವೊಂದಿರಲಿಲ್ಲ. ಏಳು ಹೆಣ್ಣುಮಕ್ಕಳು ಆದವು. ದೈವಯೋಗದಿಂದ ಎಲ್ಲರೂ ಬದುಕಿದ್ದರು. ಮೊದಲಿನ ಹುರುಪಿನಲ್ಲಿ ಮೂವರು ಹೆಣ್ಣುಮಕ್ಕಳ ವಿವಾಹವನ್ನು ವಿಜೃಂಭಣೆಯಿಂದ ಮಾಡಿದರು. ಹದಿನೈದು ಇಪ್ಪತ್ತು ಸಾವಿರ ರೂಪಾಯಿಗಳ ಸಾಲವಾಯಿತು. ಆದಾಗ ಕಣ್ಣು ತರೆದವು, ಕೈ ಬಿಗಿ ಹಿಡಿದರು. ಆನಂದಿ ನಾಲ್ಕನೆಯ ಮಗಳು. ಆಕೆ ತನ್ನ ಎಲ್ಲ ಸಹೋದರಿಯರಿಗಿಂತ ಹೆಚ್ಚು ರೂಪವತಿ, ಗುಣವತಿ. ಆದುದರಿಂದಲೇ ಠಾಕುರ ಭೂಪಸಿಂಹರಿಗೆ ಆಕೆಯ ಮೇಲೆ ಬಹಳ ಪ್ರೀತಿ. ಅಂದವಾದ ಮಕ್ಕಳನ್ನು ತಂದೆತಾಯಿಂದಿರು ಹೆಚ್ಚು ಪ್ರೀತಿಸುವುದು ಸ್ವಾಭಾವಿಕವೋ ಏನೋ! ಠಾಕುರ ಸಾಹೇಬರಿಗೆ ಈಕೆಯನ್ನು ಯಾರಿಗೆ, ಎಂಥವರಿಗೆ ಕೊಟ್ಟು ಮದುವೆ ಮಾಡಬೇಕು ಎಂಬ ಧರ್ಮ ಸಂಕಟ. ಅವರಿಗೆ ತಮ್ಮ ಸಾಲ ಬೆಳೆಯಬೇಕೆಂಬ ಇಚ್ಛೆಯೂ ಇರಲಿಲ್ಲ, ತಾನು ಕನಿಷ್ಠನೆಂದೂ ಭಾಗ್ಯಹೀನನೆಂದೂ ತಿಳಿದುಕೊಳ್ಳುವ ಇಷ್ಟವೂ ಇರ ಇರಲಿಲ್ಲ. ಒಂದು ದಿನ ಶ್ರೀಕಂಠನು ಅವರ ಬಳಿಗೆ ಯಾವುದೋ ಚಂದಾ ಬೇಡಲು ಬಂದ. ನಾಗರೀಪ್ರಚಾರದ ಚಂದಾ ಇರಬಹುದು. ಭೂಪ ಸಿಂಹರು ಅವನ ಸ್ವಭಾವವನ್ನು ನೋಡಿ ಮನ ಸೋತರು. ವಿಜೃಂಭಣೆಯಿಂದ ಆನಂದಿಯೊಡನೆ ಶ್ರೀಕಂಠಸಿಂಹನ ವಿವಾಹವಾಗಿಹೋಯಿತು.

ಆನಂದಿ ತನ್ನ ಹೊಸ ಮನೆಗೆ ಬಂದಳು. ಇಲ್ಲಿಯ ರೀತಿ ನೀತಿಗಳು ಆಕೆಗೆ ತವರುಮನೆಗಿಂತ ಭಿನ್ನವಾಗಿ ಕಂಡವು. ಚಿಕ್ಕಂದಿನಿಂದ ಓರಣವಾಗಿ ನೀಟಾಗಿ ಇರುವುದು ಆಕೆಗೆ ಅಭ್ಯಾಸ. ಇಲ್ಲಿ ಅದರ ಹೆಸರೇ ಇರಲಿಲ್ಲ. ಆನೆ ಕುದುರೆಗಳಂತೂ ಇರಲಿ, ಸುಂದರ ವಾಹನವೂ ಇರಲಿಲ್ಲ. ಬರುವಾಗ ರೇಷ್ಮೆಯ ಸ್ಲಿಪ್ಪರನ್ನು ತಂದಿದ್ದಳು, ಆದರೆ ಇಲ್ಲಿ ಉಪವನವೆಲ್ಲಿದೆ! ಮನೆಯಲ್ಲಿ ಕಿಟಕಿಗಳಿಲ್ಲ, ಗೋಡೆಗಳಮೇಲೆ ಚಿತ್ರಗಳಿಲ್ಲ. ಹಾಸುಗಲ್ಲಿನ ನೆಲವೂ ಇರಲಿಲ್ಲ. ತೀರ ಸಾದಾ ಹಳ್ಳಿಯ ಗೃಹಸ್ಥನ ಮನೆ ಆದರೂ ಸ್ವಲ್ಪ ದಿನಗಳಲ್ಲೇ ಆನಂದಿ ಇಲ್ಲಿಯ ವಾತಾವರಣಕ್ಕೆ ಅನುಗುಣವಾಗಿ ತನ್ನಲ್ಲಿ

ಮಾರ್ಪಾಟನ್ನು ಮಾಡಿಕೊಂಡಳು. ವಿಲಾಸದ ಸಾಮಾನನ್ನು ಎಂದಾದರೂ ನೋಡಿದ್ದಳೋ ಇಲ್ಲವೋ ಎನ್ನುವಷ್ಟು ತನ್ನ ಉಡಿಗೆ ತೊಡಿಗೆಗಳಲ್ಲಿ, ಇರುವ ರೀತಿಯಲ್ಲಿ ಬದಲಾವಣೆ ಮಾಡಿಕೊಂಡುಬಿಟ್ಟಳು.

೨

ಒಂದು ದಿನ ಮಧ್ಯಾಹ್ನ ಲಾಲಬಿಹಾರಿಸಿಂಹ ಎರಡು ಹಕ್ಕಿಗಳನ್ನು ಹಿಡಿದುಕೊಂಡು ಬಂದು ಅತ್ತಿಗೆಗೆ ಹೇಳಿದ: 'ಬೇಗ ಬೇಯಿಸಿಕೊಡಿ ಇವನ್ನು. ನನಗೆ ತುಂಬಾ ಹಸಿವಾಗಿದೆ.' ಆನಂದಿ ಅಡುಗೆಮಾಡಿ ಇವನ ದಾರಿ ನೋಡುತ್ತಿದ್ದಳು. ಈಗ ಈ ಹೊಸ ಅಡುಗೆ ಮಾಡಲು ಕುಳಿತಳು. ತುಪ್ಪದ ಪಾತ್ರೆಯನ್ನು ನೋಡಿದಳು. ಪಾವುಸೇರಿಗಿಂತ ಹೆಚ್ಚು ತುಪ್ಪವಿರಲಿಲ್ಲ. ದೊಡ್ಡವರ ಮನೆಯ ಹೆಣ್ಣು, ಕಾಟುಕಸರು ಮಾಡುವುದೇನು ಗೊತ್ತು. ಆಕೆ ಎಲ್ಲ ತುಪ್ಪವನ್ನು ಮಾಂಸಕ್ಕೆ ಹಾಕಿದಳು. ಲಾಲಬಿಹಾರಿ ಊಟಕ್ಕೆ ಕುಳಿತ. ಆದರೆ ತೊವ್ವೆಗೆ ತುಪ್ಪವಿರಲಿಲ್ಲ. ''ಬೇಳೆಯಲ್ಲಿ ತುಪ್ಪವನ್ನೇಕೆ ಹಾಕಲಿಲ್ಲ ?'' ಎಂದು ಅತ್ತಿಗೆಯನ್ನು ಕೇಳಿದ.

"ಇದ್ದ ತುಪ್ಪವನ್ನೆಲ್ಲ ಮಾಂಸಕ್ಕೆ ಹಾಕಿದೆ" ಎಂದಳು ಆನಂದಿ.

"ಮೊನ್ನೆ ಮೊನ್ನೆ ತುಪ್ಪ ತಂದೆ. ಇಷ್ಟು ಬೇಗ ಖರ್ಚಾಗಿಹೋಯಿತೆ ?" ಎಂದ ಲಾಲಬಿಹಾರಿ !

"ಒಂದು ಪಾವುಸೇರು ತುಪ್ಪ ಮಾತ್ರ ಇವೊತ್ತು ಇತ್ತು. ಎಲ್ಲವನ್ನೂ ಮಾಂಸಕ್ಕೆ ಹಾಕಿದೆ."

ಒಣಗಿದ ಕಟ್ಟಿಗೆ ಬೇಗ ಉರಿಯುವಂತೆ ಹಸಿವಿನಿಂದ ಹುಚ್ಚಾದ ಮನುಷ್ಯ ಚಿಕ್ಕ ಚಿಕ್ಕ ಮಾತಿಗೂ ಕೋಪಗೊಳ್ಳುತ್ತಾನೆ. ಲಾಲಬಿಹಾರಿಗೆ ಅತ್ತಿಗೆಯ ಈ ಧಿಟ್ಟತನ ಸರಿಬರಲಿಲ್ಲ. ಸಿಡುಕಿನಿಂದ 'ತವರುಮನೆಯಲ್ಲಿ ತುಪ್ಪದ ನದಿ ಹರಿಯುತ್ತಿರಬಹುದು ಅಲ್ಲವೆ ?' ಎಂದ.

ಹೆಂಗಸರು ಬೈಗಳನ್ನು ಸಹಿಸಿಕೊಳ್ಳುವರು, ಏಟುಗಳನ್ನು ಸಹಿಸಿಕೊಳ್ಳುವರು. ಆದರೆ ತವರುಮನೆಯ ನಿಂದೆಯನ್ನು ಸಹಿಸುವುದು ಅವರಿಂದ ಆಗುವುದಿಲ್ಲ. ಆನಂದಿ ಮುಖತಿರುಗಿಸಿ ಎಂದಳು. 'ನಮ್ಮ

ಮನೆಯಲ್ಲಿ ೯ ಲಕ್ಷದ ಆನೆ ಸತ್ತಿತು. ಅಲ್ಲಿ ಇಷ್ಟು ತುಪ್ಪ ಆಳು ಮಕ್ಕಳೇ ತಿಂದು ಹೋಗುತ್ತಾರೆ.'

ಲಾಲಬಿಹಾರಿ ಕಿಡಿಕಿಡಿಯಾದ; ತಟ್ಟೆಯನ್ನು ಎತ್ತಿ ಅಪ್ಪಳಿಸಿ ನುಡಿದ: 'ನಾಲಗೆ ಹಿಡಿದು ಹೊರಗೆಳೆಯಬೇಕೆನ್ನಿಸುತ್ತದೆ.'

ಆನಂದಿಗೂ ಕೋಪ ಬಂದಿತು. ಮುಖ ಕೆಂಪಾಯಿತು. 'ಅವರು ಇದ್ದಿದ್ದರೆ ಇದಕ್ಕೆ ಉತ್ತರ ಕೊಡುತ್ತಿದ್ದರು.' ಎಂದು ಅಂದಳು.

ಓದು ಬರೆಹ ಬಾರದ ಅಸಭ್ಯ ಲಾಲಬಿಹಾರಿಗೆ ಸಹನ ಶಕ್ತಿ ಎಷ್ಟೂ ಇಲ್ಲದಂತಾಯಿತು. ಅವನ ಹೆಂಡತಿ ಸಾಧಾರಣ ಜಮೀನುದಾರನ ಮಗಳು. ಮನಸ್ಸು ಬಂದಾಗ ಸಿಟ್ಟಿನ ಸೇಡನ್ನು ಈಕೆಯಮೇಲೆ ಕೈಮಾಡಿ ತೀರಿಸಿಕೊಳ್ಳುತ್ತಿದ್ದ. ಆವನು ಆವಿಗೆಯನ್ನು ಎತ್ತಿದವನೇ ಬಲವಾಗಿ ಆನಂದಿಯ ಕಡೆಗೆ ಬೀಸಿದ. 'ಯಾರ ಸಹಾಯದಿಂದ ಇಷ್ಟು ಸೊಕ್ಕಿರುವೆಯೋ ಆವರನ್ನೂ ಒಂದು ಕೈ ನೋಡುವೆ, ನಿನ್ನನ್ನೂ ಒಂದು ಕೈ ನೋಡುವೆ.'

ಆನಂದಿ ಕೈಯಿಂದ ಆವಿಗೆಯನ್ನು ತಡೆದಳು. ತಲೆ ಉಳಿಯಿತು. ಆದರೆ ಬೆರಳುಗಳಿಗೆ ಮಾತ್ರ ಬಲವಾದ ಪೆಟ್ಟು ಬಿತ್ತು. ಹವೆಯಿಂದ ಅಲ್ಲಾಡುವ ಎಲೆಗಳಂತೆ · ಕ್ರೋಧದಿಂದ ಕಂಪಿಸುತ್ತ ಆನಂದಿ ತನ್ನ ಕೋಣೆಗೆ ಬಂದು ನಿಂತಳು. ಹೆಂಗುಸಿನ ಬಲ ಮತ್ತು ಸಾಹಸ, ಮಾನ ಮತ್ತು ಮರ್ಯಾದೆ ಗಂಡನವರೆಗೆ ಇರುತ್ತವೆ. ಆಕೆಗೆ ತನ್ನ ಗಂಡನ ಬಲ ಪೌರುಷದ ಹೆಮ್ಮೆಯಿರುತ್ತದೆ. ಆನಂದಿ ಕೈ ಹಿಸುಕುತ್ತ ನಿಂತಳು.

ಶ್ರೀಕಂಠಸಿಂಹ ಶನಿವಾರಕ್ಕೊಮ್ಮೆ ಮನೆಗೆ ಬರುತ್ತಿದ್ದ. ಗುರುವಾರ ಈ ಸಂಗತಿ ನಡೆದಿದ್ದಿತು. ಎರಡು ದಿನ ಆನಂದಿ ಕೋಪಭವನದಲ್ಲಿದ್ದಳು. ಏನೂ ತಿನ್ನಲಿಲ್ಲ; ಏನೂ ಕುಡಿಯಲಿಲ್ಲ. ಅವನ ಹಾದಿಯನ್ನು ನೋಡುತ್ತಿದ್ದಳು. ಕೊನೆಗೆ ನಿಯಮಾನುಸಾರ ಶನಿವಾರ ಸಾಯಂಕಾಲಕ್ಕೆ ಶ್ರೀಕಂಠಸಿಂಹ ಮನೆಗೆ ಬಂದ. ಹೊರಗೆ ಪಡಸಾಲೆಯಲ್ಲಿ ಕುಳಿತು ಆ ಈ ಮಾತುಗಳನ್ನಾಡಿದ. ವರ್ತಮಾನಪತ್ರದ ಸುದ್ದಿಗಳನ್ನು ಹೇಳಿದ. ಕೋರ್ಟು ಕಚೇರಿಯ ಮಾತುಗಳೂ ಮುಗಿದುವು. ಈ ಎಲ್ಲ ವಾರ್ತಾಲಾಪ ರಾತ್ರಿ ಹತ್ತು ಗಂಟೆಯವರೆಗೆ ಸಾಗಿತು. ಊರಿನ ಮಹನೀಯರಿಗೆ ಈ ಮಾತುಗಳನ್ನು ಕೇಳುವುದರಲ್ಲಿ ಅತ್ಯಂತ ಸಂತೋಷ. ಊಟದ ಪರಿವೆ

ಕೂಡ ಇರುತ್ತಿರಲಿಲ್ಲ. ಶ್ರೀಕಂಠಸಿಂಹನಿಗೆ ಇವರಿಂದ ಬಿಡುಗಡೆ ಹೊಂದು ವುದು ಕಠಿನವಾಗುತ್ತಿತ್ತು. ಈ ಎರಡು ಮೂರು ಗಂಟೆಯನ್ನು ಆನಂದಿ ಅತ್ಯಂತ ಕಷ್ಟದಿಂದ ಕಳೆದಳು. ಊಟದ ಹೊತ್ತಾಯಿತು. ಪಂಚಾಯಿತರು ಮನೆಗೆ ಹೊರಟರು. ಎಲ್ಲರೂ ಹೋದಮೇಲೆ ಲಾಲಬಿಹಾರಿಯೆಂದ 'ಅಣ್ಣಾ, ಅತ್ತಿಗೆಯವರಿಗೆ ಸ್ವಲ್ಪ ನಾಲಿಗೆ ಬಿಗಿಹಿಡಿದು ಮಾತನಾಡಲಿಕ್ಕೆ ಹೇಳಿರಿ. ಇಲ್ಲದೆ ಹೋದರೆ ಅನರ್ಥವಾದೀತು.'

ವೇಣೀಮಾಧವಸಿಂಹರು ಮಗನಪರವಾಗಿ ಸಾಕ್ಷಿಯಿತ್ತರು: 'ಹೌದು. ಗಂಡಸರ ಬಾಯಿಗೆ ಹತ್ತುವುದು ಗೃಹಸ್ಥರ ಮನೆಯ ಹೆಣ್ಣುಮಕ್ಕಳಿಗೆ ಒಳ್ಳೆತಲ್ಲ. ಅವರು ದೊಡ್ಡವರ ಮನೆಯ ಮಗಳಾಗಿದ್ದರೆ ನಾವೇನು ನೀಚ ಕುಲದವರಲ್ಲ' ಎಂದು ಮಾತು ಬೆಳೆಯಿಸಿದ ಲಾಲಬಿಹಾರಿ.

ಶ್ರೀಕಂಠಸಿಂಹ ಚಿಂತಿತ ಸ್ವರದಲ್ಲಿ ಕೇಳಿದನು 'ಆದದ್ದಾದರೂ' ಏನು!' ಲಾಲಬಿಹಾರಿಯೆಂದ 'ಏನೂ ಇಲ್ಲ. ಸುಮ್ಮನೆ ತನ್ನಷ್ಟಕ್ಕೆ ತಾನೇ ಕೋಪ ಗೊಂಡಳು. ತನ್ನ ತವರುಮನೆಯ ಎದುರಿಗೆ ನಾವು ಕಸ ಎಂದು ತಿಳಿಯುತ್ತಾಳೆ.'

ಶ್ರೀಕಂಠ ಊಟಮಾಡಿ ಆನಂದಿಯ ಬಳಿಗೆ ಹೋದ. ಆನಂ ದಿಯೂ ಬಿಗಿದುಕೊಂಡು ಕುಳಿತಿದ್ದಳು. ಇವನೂ ಸ್ವಲ್ಪ ಕಠೋರವಾಗಿಯೇ ಇದ್ದ. ಆನಂದಿ ಕೇಳಿದಳು: 'ಚಿತ್ತವು ಪ್ರಸನ್ನವಾಗಿರುವುದಲ್ಲವೆ?'

"ಬಹಳ ಪ್ರಸನ್ನವಾಗಿದೆ. ನೀನು ಈಗ ಮನೆಯಲ್ಲಿ ಏನು ಉಪದ್ರವ ನಡೆಯಿಸಿ ಬಿಟ್ಟಿರುವೆ?"

ಆನಂದಿಯ ಹುಬ್ಬುಗಳು ಗಂಟಿಕ್ಕಿದುವು. ಮೈಯಲ್ಲಿ ಬೆಂಕಿ ಹಚ್ಚಿದಂ ತಾಯಿತು. 'ಯಾರು ನಿಮ್ಮನ್ನು ಇಷ್ಟು ರೇಗಿಗೆಬ್ಬಿಸಿರುವರೋ ಅವರು ಸಿಕ್ಕರೆ ಅವರ ನಾಲಿಗೆಯನ್ನು ಸುಟ್ಟು ಬಿಡುವೆ' ಎಂದಳು.

"ಇಷ್ಟೇಕೆ ಕೋಪ? ಏನಾಯಿತು ಹೇಳು."

"ಏನು ಹೇಳಲಿ? ನನ್ನ ಭಾಗ್ಯ–ದುರ್ಭಾಗ್ಯ. ಒಬ್ಬ ಅಸಭ್ಯ ಹಳ್ಳಿಯ ಹುಡುಗ, ದಾಸನ ಕೆಲಸವನ್ನು ಮಾಡುವ ಯೋಗ್ಯತೆಯಿಲ್ಲದವ. ನನ್ನನ್ನು ಆವಿಗೆಯಿಂದ ಹೊಡೆದೂ ಹೀಗೆ ಉದ್ಧಟನಾಗಿ ನಿಂತಿದ್ದಾನೆ."

"ಎಲ್ಲ ಸ್ಪಷ್ಟವಾಗಿ ಹೇಳಿದರೆ ಏನಾಗಿದೆ ಎಂದು ಗೊತ್ತಾದೀತು. ನನ ಗೇನೂ ಗೊತ್ತಿಲ್ಲ."

"ನಿಮ್ಮ ಪ್ರೀತಿಯ ತಮ್ಮ ವೊನ್ನೆ ನನಗೆ ಮಾಂಸವನ್ನು ಬೇಯಿಸಿ ಹಾಕಲು ಹೇಳಿದ. ಪಾತ್ರೆಯಲ್ಲಿ ತುಪ್ಪ ಪಾವು ಸೇರಿಗಿಂತಲೂ ಹೆಚ್ಚಿರಲಿಲ್ಲ. ಅದೆಲ್ಲವನ್ನೂ ನಾನು ಮಾಂಸಕ್ಕೆ ಹಾಕಿದೆ. ಊಟಕ್ಕೆ ಕುಳಿತಮೇಲೆ ಬೇಳೆ ಯನ್ನಕ್ಕೆ ತುಪ್ಪ ಏಕೆಹಾಕಲಿಲ್ಲ? ಎಂದು ಕೇಳಿದ. ಸರಿ ಇದೇ ಮಾತು ಷುರುಮಾಡಿ ನನ್ನ ತವರು ಮನೆಯನ್ನು ಹೀಯಾಳಿಸತೊಡಗಿದ. ನನಗೆ ತಾಳಿಕೊಳ್ಳುವುದಾಗಲಿಲ್ಲ. 'ನಾನೆಂದೆ, ಅಲ್ಲಿ ದಾಸದಾಸಿಯರು ಎಷ್ಟು ತುಪ್ಪ ತಿನ್ನುತ್ತಾರೋ ಯಾರಿಗೂ ಗೊತ್ತಾಗುವುದಿಲ್ಲ.' ಸರಿ, ಇಷ್ಟೇ ಮಾತಿಗೆ ಸಿಟ್ಟಾಗಿ ಆವಿಗೆಯನ್ನು ನನ್ನಮೇಲೆಸೆದ. ಕೈಯಿಂದ ಅದನ್ನು ತಡೆಯದೆ ಹೋಗಿದ್ದರೆ ತಲೆ ಒಡೆದು ಹೋಗುತ್ತಿದ್ದಿತು. ನಾನು ನಿಜ ಹೇಳಿದೆನೋ ಸುಳ್ಳುಹೇಳಿದೆನೋ ಅವನನ್ನೇ ಕೇಳಿ."

ಶ್ರೀಕಂಠನ ಕಣ್ಣುಗಳು ಕೆಂಪಾದವು. ಇಲ್ಲಿಯವರೆಗೆ ಇದು ಬೆಳೆ ಯಿತೆ! ಈ ಹುಡುಗನಿಗೆ ಇಷ್ಟು ಸಾಹಸವೆ?

ಆನಂದಿ ಸ್ತ್ರೀ ಸ್ವಭಾವಕ್ಕನುಸಾರವಾಗಿ ಅಳಲಾರಂಭಿಸಿದಳು. ಏಕೆಂದರೆ ಅವರ ಕಂಬನಿಗಳು ರೆಪ್ಪೆಯ ಮೇಲೆಯೇ ಇರುತ್ತವೆ. ಶ್ರೀಕಂಠ ಸಿಂಹ ಬಹಳ ಧೈರ್ಯವಂತ, ಶಾಂತ ಸ್ವಭಾವದವ; ಅವನಿಗೆ ಕೋಪ ಬರುವುದು ಬಹಳ ಕಡಮೆ, ಆದರೆ ಸ್ತ್ರೀಯರ ಕಂಬನಿಗಳು ಪುರುಷರ ಕ್ರೋಧಾಗ್ನಿಯಲ್ಲಿ ತುಪ್ಪದ ಕೆಲಸವನ್ನು ಮಾಡುತ್ತವೆ. ಇಡಿಯ ರಾತ್ರಿ ನಿದ್ರೆ ಬರಲಿಲ್ಲ. ಉದ್ವೇಗದಿಂದ ರೆಪ್ಪೆಗೆ ರೆಪ್ಪೆ ಸೇರಲಿಲ್ಲ. ಬೆಳಗ್ಗೆ ತಂದೆ ಯವರ ಬಳಿಗೆ ಹೋಗಿ, 'ಅಪ್ಪ, ಇನ್ನು ಈ ಮನೆಯಲ್ಲಿರುವುದು ನನ್ನಿಂದಾಗದು' ಎಂದ.

ಈ ರೀತಿ ಮಾತನಾಡುವವರನ್ನು ಶ್ರೀಕಂಠ ಕಟುವಾಗಿ ಟೀಕಿಸಿದ್ದ. ಆದರೆ ದುರ್ಭಾಗ್ಯದಿಂದ ಈ ದಿನ ಅವನೇ ಈ ಬಗೆಯಾಗಿ ಮಾತನಾಡ ಬೇಕಾಯಿತು! ಎರಡನೆಯವರಿಗೆ ಉಪದೇಶಮಾಡುವುದು ಎಷ್ಟು ಸಹಜ! ಸುಲಭ! ವೇಣೀಮಾಧವಸಿಂಹರು ಗಾಬರಿಯಾಗಿ ಕೇಳಿದರು: 'ಏಕೆ?'

"ಏಕೆಂದರೆ ನನಗೆ ನನ್ನ ಮಾನ, ಪ್ರತಿಷ್ಠೆಯ ವಿಚಾರವಿದೆ. ತಮ್ಮ ಮನೆಯಲ್ಲಿ ಈಗ ಅನ್ಯಾಯ ಮತ್ತು ಹಟದ ರಾಜ್ಯ ನಡೆದಿದೆ. ಯಾರು ಹಿರಿಯರ ಆದರ ಸತ್ಕಾರ ಮಾಡಬೇಕೋ ಅವರು ತಲೆಗೇರುತ್ತಾರೆ. ನಾನು

ಅನ್ಯರ ಸೇವಕ, ಮನೆಯಲ್ಲಿರುವುದಿಲ್ಲ. ಇತ್ತ ಮನೆಯಲ್ಲಿ ಹೆಂಗಸರ ಮೇಲೆ ಆವಿಗೆ ಜೋಡುಗಳು ಬೀಳುತ್ತವೆ. ಬಿರುನುಡಿಗಳನ್ನು ಆಡಿದರೆ ಅವನ್ನು ಸಹಿಸಬಹುದು ನನ್ನಮೇಲೆ ಜೋಡು ಒದಿಕೆ ಬಿದ್ದರೆ ನನ್ನಿಂದ ಸಹಿಸುವುದಾಗದು.''

ವೇಣೀಮಾಧವಸಿಂಹರಿಗೆ ಉತ್ತರ ತೋಚದಾಯಿತು. ಶ್ರೀಕಂಠ ಯಾವಾಗಲೂ ಅವರನ್ನು ಆದರಿಸುತ್ತಿದ್ದ. ಅವನು ಈ ರೀತಿ ಕೋಪಾವಿಷ್ಟನಾದುದನ್ನು ನೋಡಿ ಮುದುಕ ವೇಣೀಮಾಧವಸಿಂಹರು ಅವಾಕ್ಕಾದರು. ಕೇವಲ ಇಷ್ಟೇ ಎಂದರು : "ಮಗೂ, ನೀನು ಬುದ್ಧಿವಂತನಾಗಿದ್ದು ಹೀಗೆ ಮಾತನಾಡಬೇಕೆ? ಸ್ತ್ರೀಯರು ಇದೇ ಬಗೆಯಾಗಿ ಮನೆಯನ್ನು ಹಾಳುಮಾಡುತ್ತಾರೆ. ಅವರನ್ನು ತಲೆಗೇರಿಸುವುದು ಒಳ್ಳೆಯದಲ್ಲ."

"ನನಗೆ ಇಷ್ಟು ತಿಳಿಯುತ್ತದೆ ತಮ್ಮ ಆಶೀರ್ವಾದದಿಂದ ನಾನಿಷ್ಟು ಮೂರ್ಖನಾಗಿ ಉಳಿದಿರುವುದಿಲ್ಲ. ನಾನು ಬುದ್ಧಿ ಹೇಳುವುದರಿಂದ ಎಷ್ಟು ಮನೆಗಳು ಈವೂರಲ್ಲಿ ನಾಶವಾಗದೆ ಇರುವವೆಂಬುದು ತಮಗೆ ಗೊತ್ತೇ ಇದೆ. ಯಾವ ಹೆಂಡತಿಯ ಮಾನ ಪ್ರತಿಷ್ಠೆಯನ್ನು ಕಾಪಾಡುವೆನೆಂದು ಪರಮಾತ್ಮನ ಎದುರಿಗೆ ಸಾಕ್ಷಿಯಿತ್ತಿರುವೆನೋ ಆಕೆಯಮೇಲೆ ಘೋರ ಅನ್ಯಾಯ, ಪಶುಸಮ ವ್ಯವಹಾರ ನಡೆಯುವುದನ್ನು ನಾನು ಸಹಿಸಲಾರೆ. ಲಾಲಬಿಹಾರಿಗೆ ಕೊಂಚ ದಂಡನೆ ಮಾಡದೆ ಇರುವುದು ಕಡಮೆ ಅನ್ಯಾಯವೆ.''

ವೇಣೀಮಾಧವಸಿಂಹರೂ ಸ್ವಲ್ಪ ಬಿಸಿಯಾದರು. ಇಂಥ ಮಾತುಗಳನ್ನು ಕೇಳದವರಾದರು. ಅವರೆಂದರು : 'ಲಾಲಬಿಹಾರಿ ನಿನ್ನ ತಮ್ಮ. ಅವನಿಂದ ತಪ್ಪುಗಳಾದರ ಅವನ ಕಿವಿಯನ್ನು ಹಿಂಡು. ಆದರ . . '

"ಲಾಲಬಿಹಾರಿಯನ್ನು ನಾನಿನ್ನು ನನ್ನ ತಮ್ಮನೆಂದು ತಿಳಿಯಲಾರೆ."

"ಹೆಂಡತಿಯ ಮಾತು ಕೇಳಿ? ಆಕೆಯ ಬೆನ್ನು ತಟ್ಟಿ?"

"ಅಲ್ಲ ಅವನ ಕ್ರೂರತ್ವ, ಅವಿವೇಕವನ್ನು ನೋಡಿ."

ಇಬ್ಬರೂ ಸ್ವಲ್ಪಹೊತ್ತು ಸುಮ್ಮನಿದ್ದರು. ವೇಣೀಮಾಧವಸಿಂಹರ ಮಗನ ಸಿಟ್ಟನ್ನು ಇಳಿಸಬೇಕೆನ್ನುತ್ತಿದ್ದರು. ಆದರೆ ಅವರು ಲಾಲಬಿಹಾರಿ ತಪ್ಪುಮಾಡಿರುವನೆಂಬುದನ್ನು ಒಪ್ಪಿಕೊಳ್ಳಲು ಸಿದ್ಧವಾಗಿರಲಿಲ್ಲ ಇಷ್ಟ

ರಲ್ಲಿ ಊರಿನ ಅನೇಕ ಜನರು ತಂಬಾಕು ಸೇವನೆಯ ನೆಪದಿಂದ ಅವರ ಮನೆಗೆ ಬಂದು ಕುಳಿತರು. ಶ್ರೀಕಂಠ ಹೆಂಡತಿಯ ಬೆನ್ನುತಟ್ಟಿ ತಂದೆಯ ಕೂಡ ಜಗಳವಾಡಲು ಸಿದ್ಧನಾಗಿರುವನೆಂಬ ಸುದ್ದಿಯನ್ನು ಕೇಳಿ ಅನೇಕ ಹೆಂಗಸರು ಸಮಾಧಾನಪಟ್ಟರು. ಎರಡೂ ಪಕ್ಷದವರ ಮಧುರವಾಣಿಗಳನ್ನು ಕೇಳಲು ಅವರ ಅಂತಃಕರಣಗಳು ಹಾತೊರೆಯತೊಡಗಿದವು. ಈ ಮನೆಯ ನೀತಿ ನಡವಳಿಕೆಯನ್ನು ನೋಡಿ ಸಹಿಸಲಾರದ ಕೆಲವರು ಕುಟಿಲರು ಈ ಊರಲ್ಲಿದ್ದರು. ಅವರು ಅನ್ನುತ್ತಿದ್ದರು : 'ಶ್ರೀಕಂಠ ತಂದೆಯವರು ಹೇಳಿದಂತೆ ಕೇಳುತ್ತಾನೆ. ಹೇಡಿಯಾಗಿದ್ದಾನೆ. ಓದಿ ಓದಿ ಪುಸ್ತಕದ ಹುಳುವಾಗಿದ್ದಾನೆ. ವೇಣೀಮಾಧವಸಿಂಹರು ಅವನ ಸಲಹೆ ತೆಗೆದುಕೊಳ್ಳದೆ ಯಾವ ಕೆಲಸವನ್ನೂ ಮಾಡುವುದಿಲ್ಲ. ಇದು ಅವರ ಮೂರ್ಖತನವಾಗಿದೆ' ಈ ಮಹನೀಯರ ಶುಭಕಾಮನೆಗಳು ಈ ದಿನ ಪೂರ್ಣವಾಗುವ ಶಕುನಗಳು ತಲೆದೋರಿದುವು. ಕೆಲವರು ತಂಬಾಕು ಸೇವನೆಯ ನೆಪದಿಂದ, ಕೆಲವರು ತೆರಿಗೆಯ ರಸೀದಿಯನ್ನು ತೋರಿಸುವ ನೆಪದಿಂದ ಮನೆಗೆ ಬಂದು ಕುಳಿತುಕೊಂಡರು. ವೇಣೀಮಾಧವಸಿಂಹರು ಹಳೆಯಕಾಲದ ಪಕ್ಕಾ ಮನುಷ್ಯರು. ಅವರಿಗೆ ಜನರು ಬಂದು ಕುಳಿತುಕೊಳ್ಳುವುದರ ಭಾವ ತಿಳಿಯಿತು. ಏನು ಬೇಕಾದುದು ಆಗಲಿ, ಈ ನೀಚರಿಗೆ ನಮ್ಮ ಮನೆಯನ್ನು ನೋಡಿ ಚಪ್ಪಾಳೆಯಿಕ್ಕಲಿಕ್ಕೆ ಅವಕಾಶವನ್ನು ಕಲ್ಪಿಸಿಕೊಡುವದಿಲ್ಲೆಂದು ನಿಶ್ಚಯಮಾಡಿದರು. ಕೂಡಲೆ ಅವರು ಮೃದುಸ್ವರದಲ್ಲಿ ನುಡಿದರು : 'ಮಗೂ ನಾನು ನಿನಗೆ ಹೊರತಾಗಿಲ್ಲ. ಮನಸ್ಸಿಗೆ ಬಂದಂತೆಮಾಡು ಹುಡುಗನಿಂದ ಅಪರಾಧವಾಗಿದೆ.'

ಅಲ್ಹಾಬಾದದ ಅನುಭವವಿಲ್ಲದ ಪದವೀಧರನಿಗೆ ಈ ನೀತಿ ತಿಳಿಯಲಿಲ್ಲ. ವಾಗ್ಸ್ಪರ್ಧಿನಿ ಸಭೆ (Debating Society) ಗಳಲ್ಲಿ ತನ್ನ ಮಾತನ್ನು ಹಟದಿಂದ ಸಾಧಿಸುವ ಅಭ್ಯಾಸವುಂಟಾಗಿತ್ತು ಶ್ರೀಕಂಠಸಿಂಹನಿಗೆ. ಈ ನೀತಿಯ ಮಾತು ಅವನಿಗೇನು ಗೊತ್ತು ? ತಂದೆ ಯಾವ ಉದ್ದಿಶ್ಯದಿಂದ ಮಾತಿನ ಓಘವನ್ನು ಬದಲಿಸದನೆಂಬುದು ಅವನಿಗೆ ತಿಳಿಯಲಿಲ್ಲ. ಅವನೆಂದ : 'ನಾನು ಲಾಲಬಿಹಾರಿಯ ಕೂಡ ಈ ಮನೆಯಲ್ಲಿ ಇರಲಾರೆ.'

"ಮಗೂ, ಬುದ್ಧಿವಂತರು ಮೂರ್ಖರ ಮಾತಿನ ಕಡೆಗೆ ಗಮನವನ್ನು

ಕೊಡುವುದಿಲ್ಲ. ಅವನು ತಿಳಿವಳಿಕೆಯಿಲ್ಲದ ಹುಡುಗ. ಅವನಿಂದ ಏನು ತಪ್ಪಾಗಿರುವುದೊ ನೀನು ಹಿರಿಯನಾಗಿ ಕ್ಷಮಿಸಿಬಿಡು.''

"ಅವನ ಈ ದುಷ್ಟ ವ್ಯವಹಾರವನ್ನು ನಾನೆಂದಿಗೂ ಸಹಿಸಲಾರೆ. ಅವನು ಮನೆಯಲ್ಲಿರಬೇಕು, ಇಲ್ಲವೇ ನಾನು ಇರಬೇಕು. ಇಬ್ಬರೂ ಕೂಡಿ ಇರುವಂತ ಇಲ್ಲ. ತಮಗೆ ಅವನು ಬಹಳ ಪ್ರೀತಿಯವನಾಗಿದ್ದರೆ ಅವನನ್ನು ಮನೆಯಲ್ಲಿ ಇಟ್ಟುಕೊಳ್ಳಿರಿ ಮತ್ತು ನನಗೆ ಹೋಗಲಪ್ಪಣೆಕೊಡಿರಿ. ನಾನೇ ನನ್ನ ಭಾರವನ್ನು ಹೊತ್ತುಕೊಳ್ಳುವೆನು. ನನ್ನನ್ನು ಇಟ್ಟುಕೊಳ್ಳಬಯಸಿದರೆ ಅವನಿಗೆ ಎಲ್ಲಿಗೆ ಬೇಕೋ ಅಲ್ಲಿಗೆ ಹೋಗಲು ಹೇಳಿರಿ. ಇದು ನನ್ನ ಕೊನೆಯ ನಿರ್ಣಯ."

ಲಾಲಬಿಹಾರೀಸಿಂಹ ಬಾಗಿಲು ಬಳಿಯಲ್ಲಿ ನಿಂತು ಅಣ್ಣನ ಮಾತುಗಳನ್ನು ಸುಮ್ಮನೆ ನಿಂತು ಕೇಳುತ್ತಿದ್ದ. ಅವನು ಅಣ್ಣನನ್ನು ಬಹಳ ಆದರದಿಂದ ಕಾಣುತ್ತಿದ್ದ. ಶ್ರೀಕಂಠನ ಕೂಡ ಮಂಚದಮೇಲೆ ಕುಳಿತು ಎಲೆ ಅಡಿಕೆ ತಿನ್ನುವ, ತಂಬಾಕು ಸೇದುವ ಸಾಹಸವುಂಟಾಗಿರಲಿಲ್ಲ. ತಂದೆಯವರಷ್ಟೇ ಮಾನವನ್ನು ಅಣ್ಣನಿಗೆ ಕೊಡುತ್ತಿದ್ದ. ಶ್ರೀಕಂಠನೂ ತಮ್ಮನನ್ನು ಹೃತ್ಪೂರ್ವಕ ಪ್ರೀತಿಸುತ್ತಿದ್ದ. ತಮ್ಮನನ್ನು ಎಂದೂ ಬಯ್ದಿರಲಿಲ್ಲ. ಅಲ್ಹಾಬಾದದಿಂದ ಬರುವಾಗ ಒಂದಿಲ್ಲೊಂದು ವಸ್ತುವನ್ನು ಅವನಿಗೆ ತಂದುಕೊಡುತ್ತಿದ್ದ. ಹೋದವರ್ಷ ನಾಗಪಂಚಮಿಯ ದಿನ ತಮ್ಮ ಕುಸ್ತಿಯಲ್ಲಿ ತನಗಿಂತಲೂ ದೊಡ್ಡವನನ್ನು-ಒಗೆದುದರಿಂದ ಕಣದಲ್ಲಿಯೇ ಅವನನ್ನು ಅಪ್ಪಿಕೊಂಡು ಐದು ರೂಪಾಯಿ ಫೇಡೆ ಹಂಚಿದ್ದ. ಇಂಥ ಅಣ್ಣನ ಬಾಯಿಂದ ಎದೆಸೀಳುವಂಥ ಮಾತುಗಳನ್ನು ಕೇಳಿ ಲಾಲಬಿಹಾರಿಗೆ ಅತ್ಯಂತ ಕೆಡುಕೆನಿಸಿತು. ಅವನು ಬಿಕ್ಕಿಬಿಕ್ಕಿ ಅಳಲಾರಂಭಿಸಿದ. ತನ್ನ ನಡತೆಯ ಬಗ್ಗೆ ಅವನಿಗೆ ಹೇಳದಷ್ಟು ಪಶ್ಚಾತ್ತಾಪವಾಗುತ್ತಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಅಣ್ಣನು ಬರುವ ಒಂದು ದಿನ ಮೊದಲಿನಿಂದಲೇ ಅಣ್ಣನು ಏನನ್ನುವನೊ ಎಂದು ಅವನ ಎದೆ ನಡುಗುತ್ತಿದ್ದಿತು. ಅವನ ಎದುರಿಗೆ ಹೇಗೆ ಹೋಗಲಿ? ಹೇಗೆ ಮಾತಾಡಲಿ? ಎಂಬುದನ್ನೇ ಅವನು ಯೋಚಿಸುತ್ತಿದ್ದ. ಅಣ್ಣನು ತನ್ನನ್ನು ಕರೆಯಿಸಿ ಬುದ್ಧಿವಾದ ಹೇಳುವನೆಂದು ಅವನು ತಿಳಿದಿದ್ದ. ಆದರೆ ಅವನ ಯೋಚನೆಗೆ ವಿಪರೀತವಾಗಿ ಸಂಗತಿ ನಡೆಯಿತು. ಅಣ್ಣನು ನಿರ್ದಯತೆಯ ಮೂರ್ತಿ

ಯಾದ. ತಾನು ಮೂರ್ಖ ನಿಜ, ಆದರೆ ತನ್ನ ಹೃದಯ ಹೇಳುತ್ತಿತ್ತು 'ಅಣ್ಣ ತನಗೆ ಅನ್ಯಾಯ ಮಾಡುತ್ತಿರುವನು' ಎಂದು. ಶ್ರೀಕಂಠ ಏಕಾಂ ದಲ್ಲಿ ತನ್ನನ್ನು ಕರೆದು ಬಿರುಸು ಮಾತುಗಳನ್ನು ಆಡಿದ್ದರೆ, ಕೆನ್ನೆಯ ಮೇಲೆ ಒಂದೆರಡು ಏಟುಗಳನ್ನು ಕೊಟ್ಟಿದ್ದರೂ ಅವನಿಗೆ ಇಷ್ಟು ದುಃಖವ ಗುತ್ತಿರಲಿಲ್ಲ ನಾನು ಇನ್ನು ತಮ್ಮನ ಮುಖವನ್ನು ನೋಡುವುದಿಲ್ಲವೆಂ ಅಣ್ಣನ ಮಾತನ್ನು ಲಾಲಬಿಹಾರಿಗೆ ಸಹಿಸುವುದಾಗಲಿಲ್ಲ. ಅಳುತ್ತ ಮ ಯೊಳಗೆ ಬಂದ. ಕೋಣೆಗೆ ಹೋಗಿ ಬಟ್ಟೆಯನ್ನು ತೊಟ್ಟ. ತಾನು ಅಳ ತ್ತಿರುವೆನೆಂಬುದು ಯಾರಿಗೂ ಗೊತ್ತಾಗಬಾರದೆಂದು ಕಣ್ಣುಗಳನ್ನು ಒರೆಯಿ ಕೊಂಡ. ಆನಂದಿಯ ಕೋಣೆಯ ಬಳಿಗೆ ಹೋದ. ಹೋಗಿ ಅತ್ತಿಗೆಗೆ ಹೇಳಿದ 'ಅತ್ತಿಗೇ, ಅಣ್ಣ ಇನ್ನು ಈ ಮನೆಯಲ್ಲಿ ನನ್ನ ಕೂಡ ಇರುವದಿಲ್ಲೆಂದ ನಿಶ್ಚಯಮಾಡಿದ್ದಾನೆ. ಅವನು ಇನ್ನು ನನ್ನ ಮುಖವನ್ನು ನೋಡ ಬಯಸ ವುದಿಲ್ಲವಂತೆ. ಆದ್ದರಿಂದ ನಾನು ಹೊರಟುಹೋಗುತ್ತೇನೆ; ಇನ್ನೆಂದಿಗೂ ನಾನು ನನ್ನ ಮುಖವನ್ನು ಅವನಿಗೆ ತೋರಿಸುವುದಿಲ್ಲ. ನನ್ನಿಂದ ಇದ ವರೆಗೆ ಆಗಿರುವ ಅಪರಾಧವನ್ನು ಕ್ಷಮಿಸು.'

ಈಮಾತುಗಳನ್ನಾಡುವಾಗ ಲಾಲಬಿಹಾರಿಯ ಕಂಠ ಬಿಗಿದು ಬಂದಿತು

೩

ಲಾಲಬಿಹಾರಿಸಿಂಹ ತಲೆಬಾಗಿಸಿಕೊಂಡು ಆನಂದಿಯ ಕೋಣೆಯ ಬಾಗಿಲು ಬಳಿಯಲ್ಲಿ ನಿಂತಿದ್ದಾಗ ಹೊರಗಿನಿಂದ ಶ್ರೀಕಂಠಸಿಂಹ ಕೆಂಪ ಮುಖ ಮಾಡಿಕೊಂಡು ಬಂದ. ತಮ್ಮ ನಿಂತಿದ್ದುದನ್ನು ನೋಡಿದ ತಿರಸ್ಕಾರದಿಂದ ಮುಖವನ್ನು ತಿರುಗಿಸಿಕೊಂಡು ಅವನ ನೆರಳನ್ನೂ ನೋ ಬಯಸುವುದಿಲ್ಲವೇನೋ ಎಂಬಂತೆ ಮುನ್ನಡೆದ.

ಆನಂದಿ ಲಾಲಬಿಹಾರಿಯನ್ನು ಕುರಿತುದನ್ನೇನೋ ಹೇಳಿ ಳಾಗಲಿ ಈಗ ಆಕೆಗೆ ಪಶ್ಚಾತ್ತಾಪವಾಗುತ್ತಿದ್ದಿತು. ಆಕೆ ಸ್ವಭಾವವಾ ದಯಾಮಯಿ. ಈ ಸಂಗತಿ ಇಷ್ಟು ಬೆಳದೀತೆಂದು ಆಕೆಗೆ ಹೊಳೆದೇ ಇ ಲಿಲ್ಲ. ಇವರು ಇಷ್ಟು ಕೋಪಿಸಿಕೊಳ್ಳುವರೇಕೆ ಎಂದು ಮನದಲ್ಲಿಯೆ ನೊಂದುಕೊಳ್ಳುತ್ತಿದ್ದಳು. ತನಗೆ ಅಲ್ಲಾಬಾದಕ್ಕೆ ಹೊರಡಲು ಎಲ್ಲಿ ಹೇಳ

ವರೋ ಎಂಬ ಭಯವೂ ಇದ್ದಿತು. ಇಷ್ಟರಲ್ಲಿ ಬಾಗಿಲು ಬಳಿಯಲ್ಲಿ ಲಾಲ ಬಿಹಾರಿ ನಿಂತು ತನ್ನ ಅಪರಾಧವನ್ನು ಕ್ಷಮಿಸಲು ಹೇಳಿದುದನ್ನೂ ಹೋಗು ವೆನೆಂದು ಹೇಳಿದುದನ್ನೂ ಕೇಳಿ ಅವಳಲ್ಲಿದ್ದ ಅಲ್ಪ ಸ್ವಲ್ಪ ಕ್ರೋಧವೂ ಕರಗಿ ನೀರು ನೀರಾಗಿ ಹೋಯಿತು. ಅವಳು ಅಳತೊಡಗಿದಳು. ಮನದ ಮಾಲಿನ್ಯವನ್ನು ತೊಳೆಯಲು ಕಣ್ಣೀರಿನಂಥ ಉಪಯುಕ್ತ ವಸ್ತು ಬೇರೊಂದಿಲ್ಲ.

ಶ್ರೀಕಂಠನನ್ನು ನೋಡಿ ಆನಂದಿ ಎಂದಳು, 'ಬಿಹಾರಿ ಹೊರಗೆ ನಿಂತುಕೊಂಡು ಬಹಳ ಅಳುತ್ತಿದ್ದಾನೆ.'

"ನಾನೇನು ಮಾಡಲಿ ?"

"ಒಳಗೆ ಕರೆಯಿರಿ. ನನ್ನ ನಾಲಿಗೆಗೆ ಬೆಂಕಿ ಹಚ್ಚಲಿ! ನಾನೆಲ್ಲಿಂದ ಜಗಳ ಎಬ್ಬಿಸಿದೆನೊ!"

"ನಾನು ಕರೆಯುವುದಿಲ್ಲ."

"ತರುವಾಯ ಪಶ್ಚಾತ್ತಾಪ ಪಟ್ಟೀರಿ. ಅವನಿಗೆ ಬಹಳ ಕೆಡುಕೆನಿಸಿದೆ. ಎಲ್ಲಿಗಾದರೂ ಹೋಗಿಬಿಟ್ಟಾನು!"

ಶ್ರೀಕಂಠ ಏಳಲಿಲ್ಲ. ಇಷ್ಟರಲ್ಲಿ ಲಾಲಬಿಹಾರಿ ಪುನಃ ಎಂದ. 'ಅತ್ತಿಗೆ, ಅಣ್ಣನಿಗೆ ನನ್ನ ಶಿರಸಾವಂದನೆಗಳನ್ನು ತಿಳಿಸು. ಅವರು ನನ್ನ ಮುಖ ನೋಡಬಯಸುವುದಿಲ್ಲ. ಆದ್ದರಿಂದ ನಾನೂ ನನ್ನ ಮುಖವನ್ನು ಅವರಿಗೆ ತೋರಿಸುವುದಿಲ್ಲ.'

ಲಾಲಬಿಹಾರಿ ಇಷ್ಟು ಹೇಳಿ ಹಿಂತಿರುಗಿ ಭರದಿಂದ ಹೆಜ್ಜೆಹಾಕುತ್ತ ಹೊರಬಾಗಿಲಕಡೆಗೆ ನಡೆದ. ಕೊನೆಗೆ ಆನಂದಿ ಕೋಣೆಯಿಂದ ಹೊರಬಿದ್ದು ಓಡಿಹೋಗಿ ಅವನ ಕೈಯನ್ನು ಹಿಡಿದಳು. ಲಾಲಬಿಹಾರಿ ತಿರುಗಿ ನೋಡಿದ. ಕಣ್ಣುಗಳಲ್ಲಿ ನೀರು ಉಕ್ಕೇರಿ ಬಂದಿದ್ದವು. 'ನನ್ನನ್ನು ಬಿಡು ಅತ್ತಿಗೆ!' ಎಂದ.

"ಎಲ್ಲಿಗೆ ಹೋಗುತ್ತೀ ?"

"ನನ್ನ ಮುಖ ಯಾರಿಗೂ ಕಾಣಿಸಬಾರದಂಥ ಸ್ಥಳಕ್ಕೆ."

"ನಾನು ಹೋಗಗೊಡುವುದಿಲ್ಲ."

"ನಾನು ನಿಮ್ಮ ಕೂಡ ಇರಲು ಯೋಗ್ಯನಲ್ಲ."

"ನಿನಗೆ ನನ್ನಾಣೆ, ಇಲ್ಲಿಂದ ಒಂದು ಹೆಜ್ಜೆಯನ್ನಾದರೂ ಮುಂದಿಟ್ಟರೆ, ನೋಡು."

"ಎಲ್ಲಿಯವರೆಗೆ ಅಣ್ಣನ ಮನಸ್ಸಿಗೆ ನನ್ನ ವಿಷಯದಲ್ಲಿ ಸಮಾಧಾನ ವಿಲ್ಲವೊ ಅಲ್ಲಿಯವರೆಗೆ ನಾನು ಈ ಮನೆಯಲ್ಲಿ ಇರಲಾರೆ, ಅತ್ತಿಗೆ."

"ಈಶ್ವರ ಸಾಕ್ಷಿಯಾಗಿ ನನ್ನ ಮನದಲ್ಲಿ ನಿನ್ನ ಬಗ್ಗೆ ಕಲುಷವೇನೂ ಇಲ್ಲೆಂದು ಹೇಳುತ್ತೇನೆ."

ಈಗ ಶ್ರೀಕಂಠನ ಹೃದಯ ಕರಗಿತು ಅವನು ಹೊರಗೆ ಬಂದು ಲಾಲಬಿಹಾರಿಯನ್ನು ಗಟ್ಟಿಯಾಗಿ ಅಪ್ಪಿಕೊಂಡ. ಇಬ್ಬರೂ ಸಹೋದರರು ಬಿಕ್ಕಿಬಿಕ್ಕಿ ಅತ್ತರು. ಲಾಲಬಿಹಾರಿ ಬಿಕ್ಕುತ್ತ : 'ಅಣ್ಣ ನನ್ನಮುಖವನ್ನೆಂದೂ ನೋಡುವದಿಲ್ಲೆಂದು ಇನ್ನು ಹೇಳಬೇಡ. ಇದನ್ನೊಂದು ಬಿಟ್ಟು ಯಾವ ಶಿಕ್ಷೆಯನ್ನಾದರೂ ಕೊಡು. ಅದನ್ನು ಆನಂದದಿಂದ ಅನುಭವಿಸುವೆ' ಎಂದ.

ಶ್ರೀಕಂಠ ಗದ್ಗದ ಸ್ವರದಿಂದ : 'ಲಲ್ಲೂ ! ಈ ಮಾತೆಲ್ಲವನ್ನೂ ಮರೆತು ಬಿಡು ದೇವರದಯೆಯಿಂದ ಇಂಥ ಪ್ರಸಂಗ ಇನ್ನೆಂದೂ ಬರಲಿಕ್ಕಿಲ್ಲ' ಎಂದು ನುಡಿದ.

ವೇಣೀಮಾಧವಸಿಂಹರು ಹೊರಗಿನಿಂದ ಒಳಗೆ ಬರುತ್ತಿದ್ದರು. ಇಬ್ಬರೂ ಸಹೋದರರು ಅಪ್ಪಿಕೊಂಡುದನ್ನು ನೋಡಿ ಅವರಿಗೆ ವೈನವಿರಾಯ್ತು. ಹರುಷದಿಂದ ನುಡಿದರು : 'ದೊಡ್ಡವರ ಮನೆಯ ಹೆಣ್ಣು ಮಕ್ಕಳೇ ಹೀಗೆ, ಕೆಡುವ ಕೆಲಸವನ್ನು ಸರಿಪಡಿಸಿಕೊಳ್ಳುತ್ತಾರೆ.'

ಊರಲ್ಲಿ ಈ ಸಮಾಚಾರವನ್ನು ಕೇಳಿದವರೆಲ್ಲರೂ ಆನಂದಿಯ ಉದಾರತೆಯನ್ನು 'ದೊಡ್ಡವರ ಮನೆಯ ಹೆಣ್ಣುಮಕ್ಕಳೇ ಹೀಗೆ' ಎಂದು ಹೊಗಳಿದರು.

# BIBLIOGRAPHY


The Modern Vernacular Literature of Hindustan Sir George A. Grierson

Assamese Literature Birinchi Kumar Barua (P. E. N. publn.)

Urdu Literature T. Grahame Baily (Heritage of India Series)

History of Urdu Literature Ram Babu Saksena

Gujarati and its Literature K. M. Munshi

Milestones in Gujarati Literature K. M. Jhaveri

Further Milestones in Gujarati Literature K. M. Jhaveri

History of the Tamils P. T. Sreenivasa Iyengar

Hymns of the Tamil Saivite Saints Kingsbury and Philips (Heritage of India)

Hymns of the Alvars J. S M. Cooper (Heritage of India)

A Metaphisique of Mysticism : A Govindacharya

Telugu Literature P. Chenchaiah and M Bhujanga Rao

Telugu Literature P. T. Raju (P. E. N. Publication)

Bengali Literature Anadasankar Ray and Lila Ray (P. E. N. Publication)

History of Bengali Language and Literature , Dinesh Chandra Sen

Bengali Religious Lyrics - Saktha Thompson and Spencer (Heritage of India

Vaishnava Lyrics Kumar, Datta and Chapman (Oxford University press

A Short History of Marathi Literature M K. Nadkarni

Mysticism in Maharashtra R. D. Ranade

Literature and the People S. A. Dange

Hindi Literature F. E. Keay (Heritage of India)

The Cultural Heritage of India - Ramakrishna Ashram

Kanarese Literature E. P. Rice (Heritage of India)
History of Kannada Literature R. Narasimhacharya
(University of Mysore)
History of Kannada Language R. Narasimhacharya
(University of Mysore)
Popular Culture in Karnataka Masti Venkatesa Iyengar
Literary activity in Kannada in the decade
Masti Venkatesa Iyengar (Mysore Census - 1931)
Kannada Resurgent Prof. B M Srikantia
(Mysore Census Report - 1941)
A Hand - book of Virasaivaism Dr. Nandimath
Musings of Basava Prof. S. S Basavanal and
Dr. K. R. Srinivasa Iyengar
Mystic Teachings of Haridasas of Karnataka
A P Karmarkar and N B. Kalamdani
Short Story in Karnataka A N. Krishna Rao
(Bombay Chronicle Nov 26, 1939)
Kannada Women Writers A N. Krishna Rao
(Bombay Chronicle June 2, 1940)
Sister Mahadevi A. N Krishna Rao
(The Journal of the Literary Committee of
the L. E. Association Vol 1 No 2 - 1941)
Kannada Poetry - Then and Now A. N. Krishna Rao
(in Manuscript)
All India Weekly Literary Annual - 1945
The Indian P. E. N. (Volumes 1 to 10)
Triveni (Volumes I to 16)
People' s war (Vol 1 and 2)
ವಿಶ್ವಕರ್ನಾಟಕ ಯುಗಾದಿ ಸಂಚಿಕೆ — ೧೯೪೧
ವಿಶ್ವವಾಣಿ (ಸಂಪುಟ ೧) — ೧೯೪೬

---